# ವಿಪ್ರದಾಸ್

ಶರಚ್ಚಂದ್ರ ಚಟರ್ಜಿ

ಅನುವಾದಕರು

ಶ್ರೀ ಭಾರತಿರಮಣಾಚಾರ್, ಎಂ. ಎ. (ಕಾಶಿ)

ಸಾಹಿತ್ಯಮಂದಿರ, ಮೈಸೂರು

# ವಿಪ್ರದಾಸ್

## ೧

ಬಲರಾಮಪುರದ ತೇರುಮನೆಯಲ್ಲಿ ರೈತ, ಕೂಲಿಗಾರರ ಸಭೆ ಸೇರಿತ್ತು. ಹತ್ತಿರದ ರೈಲ್ವೆಸ್ಟೇಸಿನ ಕೆಲಸಗಾರರೂ ಸಪ-ಭಾನುವಾರವಾದುದರಿಂದ ಸಭೆಗೆ ಬಂದು ಅದಕ್ಕೆ ಕಳೆಕಟ್ಟುವಂತೆ ಮಾಡಿದ್ದರು. ಅಂದಿನ ಸಭೆಯಲ್ಲಿ ಭಾಷಣಮಾಡಲು ಕಲ್ಕತ್ತೆಯಿಂದ ಕೆಲವು ಸುಪ್ರಸಿದ್ಧ ವ್ಯಕ್ತಿಗಳು ಬಂದಿದ್ದು ಈಗ ಕಾಣಬರುತ್ತಿರುವ ದ್ವೇಷ ಮತ್ತು ವೈಷಮ್ಯವನ್ನು ಖಂಡಿಸಿ ಉಜ್ವಲವಾಗಿ ಮಾತನಾಡಿದರು. ಸಭೆಯಲ್ಲಿ ಲೆಕ್ಕವಿಲ್ಲದಷ್ಟು ಠರಾವುಗಳು ಅಂಗೀಕೃತವಾದುವು. ಅನಂತರ ಒಂದು ದೊಡ್ಡ ಮೆರವಣಿಗೆಯು ಗ್ರಾಮವನ್ನು ಸುತ್ತಿ 'ವಂದೇಮಾತರಂ' ಎಂದು ನಿರಂತರವಾಗಿ ಘೋಷಿಸಿತು. ಸಭೆಯ ಅಂದಿನ ಕಾರ್ಯಕ್ರಮ ಅಲ್ಲಿಗೆ ಮುಕ್ತಾಯವಾಯಿತು.

ಬಲರಾಮಪುರ ಸಾಕಷ್ಟು ದೊಡ್ಡ ಗ್ರಾಮ. ಅಲ್ಲಲ್ಲಿ ಚಿಕ್ಕಪುಟ್ಟ ಜೋಡೀದಾರರೂ, ಧನಿಕರೂ, ಗ್ರಾಮದ ಒಂದು ಅಂಚಿನಲ್ಲಿ ಮುಸಲ್ಮಾನ ರೈತರೂ ವಾಸಮಾಡುತಿದ್ದಾರೆ. ಈ ಮುಸಲ್ಮಾನ ರೈತರ ಕೇರಿಗೆ ಹೊಂದಿದಂತೆ 'ಬಾಗದೀ' ಮತ್ತು 'ದೂಲೆ' ಜನಗಳ ಗುಡಿಸಲುಗಳಿವೆ. ಬಹಳ ಹಿಂದೆ ಗಂಗಾನದಿಯ ಒಂದು ಶಾಖೆ ಇಲ್ಲಿಯವರೆಗೂ ಹರಿದು ಬಂದಿದ್ದಿತು. ಈಗ ಅರ್ಧಚಂದ್ರಾಕಾರವಾಗಿ ಎರಡು ಮೂರು ಮೈಲಿಯಷ್ಟು ಜಾಗವನ್ನು ಅದು ಸುತ್ತಿರುವುದರಿಂದ ಅಲ್ಲಿ ಒಂದು ಕೆರೆಯಾಗಿದೆ. ರೈತರ ಮತ್ತು ಕೂಲಿಗಳ ಗುಡಿಸಲುಗಳಿರುವುದು ಈ ಕೆರೆಯ ದಂಡೆಯ ಮೇಲೆಯೇ.

ಗ್ರಾಮದ ಅತಿದೊಡ್ಡ ಸಾಹುಕಾರರೆಂದರೆ ಯಜ್ಞೇಶ್ವರ ಮುಖ್ಯೋಪಾಧ್ಯಾಯರು. ಅವರ ಜಮೀನು, ಮನೆ, ವ್ಯಾಪಾರ ಮುಂತಾದುವನ್ನು ನೋಡಿದರೆ ಅವರ ಹತ್ತಿರ, ಬೇಕಾದಷ್ಟು ಮಾತ್ರವಲ್ಲ ಇನ್ನೂ ಹೆಚ್ಚಾಗಿಯೇ ಆಸ್ತಿ ಇದ್ದಿತೆಂದು ಹೇಳಿದರೂ ಅತಿಶಯೋಕ್ತಿಯಾಗದು. ಕೂಲಿಗಾರರ ಮೆರವಣಿಗೆಯು ಸಾಗುತ್ತಿದ್ದುದು ಮುಖ್ಯೋಪಾಧ್ಯಾಯರ ದೊಡ್ಡ ಮಹಡಿಮನೆಯ ಮುಂಭಾಗದ ರಸ್ತೆಯಲ್ಲಿ. ವಿವಿಧ ವಾಕ್ಯಗಳನ್ನು ಬರೆದ

ಕೆಂಪುಬಾವುಟಗಳನ್ನು ಹಿಡಿದು ಜನ ದೊಡ್ಡದನಿಯಲ್ಲಿ ಜಯಕಾರವನ್ನು ಮಾಡುತ್ತಿದ್ದಾಗ ಜಮೀನ್ದಾರರ ಮನೆಯ ಎರಡನೇ ಮಹಡಿಯಲ್ಲಿ ಒಬ್ಬ ದೀರ್ಘಕಾಯನೂ, ಬಲಿಷ್ಠನೂ ಆದ ಯುವಕನು ನಿಂತು ರಸ್ತೆಯ ದೃಶ್ಯವನ್ನು ಮೌನವಾಗಿ ನೋಡುತ್ತಿದ್ದನು ಅಕಸ್ಮಾತ್ತಾಗಿ ಜನತೆಯ ದೃಷ್ಟಿ ಆ ಯುವಕನಮೇಲೆ ಬಿದ್ದುದೇ ತಡ ಗುಂಪಿನಿಂದ ಉಕ್ಕುತ್ತಿದ್ದ ಕೋಲಾಹಲವೆಲ್ಲವೂ ಕ್ಷಣಮಾತ್ರದಲ್ಲಿ ಇಂಗಿಹೋಯಿತು. ಮುಂದೆ ಸಾಗುತ್ತಿದ್ದ ಒಬ್ಬಿಬ್ಬ ಮುಂದಾಳುಗಳು ಸುತ್ತಲೂ ನೋಡಿ ಬೆಚ್ಚಿಬಿದ್ದ ಜನಗಳ ದೃಷ್ಟಿಪಥವನ್ನನುಸರಿಸಿ ಮೇಲಕ್ಕೆ ತಲೆಯೆತ್ತಿ ನೋಡಿದರು; ಅಷ್ಟರಲ್ಲಿ ಆ ಯುವಕನು ಕಂಬದ ಮರೆಯಲ್ಲಿ ನಿದಾನವಾಗಿ ಅದೃಶ್ಯನಾದನು.

"ಯಾರು?"--ಎಂದು ಮುಖಂಡರು ಕೇಳಿದರು. ಕೆಲಜನ 'ವಿಪ್ರದಾಸಬಾಬು' ಎಂದು ಮೆತ್ತಗೆ ಹೇಳಿದರು.

"ವಿಪ್ರದಾಸ್ ಯಾರು? ಗ್ರಾಮದ ಜಮೀನ್ದಾರರೆ?"

"ಹೌದು" ಎಂದಾರೋ ಹೇಳಿದರು.

ನಗರದಿಂದ ಬಂದ ಮುಖಂಡರು ಯಾರನ್ನೂ ಲೆಕ್ಕಿಸುತ್ತಿರಲಿಲ್ಲವಾಗಿ ಸ್ವಲ್ಪ ಅಸಡ್ಡೆಯಿಂದ 'ಓಹೋ ಇಷ್ಟೇನೇ!' ಎಂದು, ಮರುಕ್ಷಣದಲ್ಲಿಯೇ ತಲೆಯಮೇಲೆ ಕೈಯನ್ನು ಎತ್ತಿ ಎಸೆಯುತ್ತ ಗಟ್ಟಿಯಾಗಿ 'ಬೋಲೊ ಭಾರತ್ ಮಾತಾಕೀ ಜಯ್', 'ಬೋಲೊ ಕಿಸಾನ್-ಮಜದೂರೋಂಕೀ ಜಯ್'. 'ಬೋಲೋ ವಂದೇ ಮಾತರಂ' ಎಂದು ಅರಚಿಕೊಂಡರು. ಆದರೆ ಅವರ ಜಯಘೋಷದ ಪ್ರಭಾವ ವಿಶೇಷವಾಗಿ ಆದಂತೆ ಕಾಣಲಿಲ್ಲ. ಅನೇಕರು ದನಿಗೊಡದೆ ಸುಮ್ಮನಿದ್ದರು, ಅಥವಾ ಮನಸ್ಸಿನಲ್ಲಿಯೇ 'ಜಯ್' ಎಂದುಕೊಂಡರು; ಬಾಯಿಬಿಟ್ಟು ಅನ್ನಬೇಕೆಂದು ಹೊರಟವರೂ ಕೂಡ ಮೆಲುದನಿಯಲ್ಲಿ ನುಡಿದು ಸುಮ್ಮನಾದರು. ಅವರ ಜಯಕಾರ ವಿಪ್ರದಾಸನ ಮನೆಯ ಜಗುಲಿಯನ್ನು ದಾಟಿ ಅವನ ಕಿವಿಯನ್ನು ಮುಟ್ಟಿತೋ ಇಲ್ಲವೋ ಹೇಳುವುದು ಕಷ್ಟ. ಮುಖಂಡರು ಈ ಅವಮಾನವನ್ನು ನುಂಗಿಕೊಂಡು ಕೋಪದಿಂದ "ಕೇವಲ ಒಬ್ಬ ಜಮೀನ್ದಾರರಿಗೆ ಇಷ್ಟು ಹೆದರುವುದೇ! ಇವರು ನಮ್ಮ ಶತ್ರುಗಳು. ಹಗಲಿರಳೂ ನಮ್ಮ ರಕ್ತವನ್ನು ಹೀರುತ್ತಿರುವವರು ಇವರೇ. ವಾಸ್ತವವಾಗಿ ನಮ್ಮ ಹೋರಾಟವಿರುವುದು ಇವರೊಂದಿಗೇ. ಇವರೇ......." ಎಂದು

ಮಾತನ್ನು ಮುಂದುವರಿಸಬೇಕೆಂದಿದ್ದರು. ಬತ್ತಳಿಕೆಯಿಂದ ಇನ್ನೂ ಮೊನಚಾದ ಕೆಲವು ವಾಗ್ಬಾಣಗಳನ್ನು ಎಸೆಯಬೇಕೆಂದಿರುವಾಗಲೇ ಆ ರುದ್ರಭಾಷಣಕ್ಕೆ ಅಡ್ಡಿಬಂದಿತು. 'ಅವರ ತಮ್ಮ!' ಎಂದು ಗುಂಪಿನಿಂದ ಯಾರೋ ಕೂಗಿ ಹೇಳಿದರು.

"ಯಾರು?"

ಬಾವುಟವನ್ನು ಹಿಡಿದು ಮುಂದೆ ಸಾಗಿದ್ದ ಇಪ್ಪತ್ತೈದರ ಹರೆಯದ ಯುವಕನೊಬ್ಬನು ಹಿಂತಿರುಗಿ 'ಅವರು ನನ್ನ ಅಣ್ಣ' ಎಂದು ಉತ್ತರವಿತ್ತನು.

ಈ ಯುವಕನ ಉತ್ಸಾಹ, ಉದ್ಯಮ, ಮತ್ತು ಆಗ್ರಹದಿಂದಲೇ ಅಂದಿನ ಸಭೆಯು ನಡೆಯುತ್ತಿದ್ದಿತು ಎಂಬುದು ಆಶ್ಚರ್ಯದಮಾತೇ! ಕಾರ್ಯಕ್ರಮದ ಖರ್ಚನ್ನೆಲ್ಲಾ ಆ ಯುವಕನೇ ವಹಿಸಿಕೊಂಡಿದ್ದನು.

"ಓಹೊ, ನಿಮ್ಮ ಅಣ್ಣಂದಿರೊ! ನೀವೂ ಬಹುಶಃ ಇಲ್ಲಿಯ ಜಮೀನ್ದಾರರಲ್ಲೊಬ್ಬರು ಅಲ್ಲವೆ?" ಎಂಬ ಪ್ರಶ್ನೆಗೆ ಯುವಕನು ಉತ್ತರಕೊಡದೆ ಕೊಂಚ ತಲೆಬಾಗಿ ನಾಚಿಕೆಯಿಂದ ಸುಮ್ಮನಿದ್ದನು.

೨

ವಿಪ್ರದಾಸನು ತನ್ನ ಬೈಠಕ್ಕಿಗೇ ತಮ್ಮನನ್ನು ಕರೆಸಿಕೊಂಡು ಹೇಳಿದನು—"ನಿನ್ನೆಯ ಏರ್ಪಾಟು ಕೆಟ್ಟದಿರಲಿಲ್ಲ. ಸ್ವಲ್ಪ ಹೆಚ್ಚುಕಡಿಮೆ ಹೆದರಿಸುವಂತಿತ್ತು; ಆರಿಸಿದ್ದ ಜಯಘೋಷ ಅಥವಾ "ವಾರ್‌ಕ್ರೈ"ಗಳೂ ಚೆನ್ನಾಗಿದ್ದವು. ಅಂತೂ ಅವುಗಳಲ್ಲಿ ಬಿಸಿ ಇದೆ ಎಂದು ಒಪ್ಪಿಕೊಳ್ಳಲೇ ಬೇಕು."—ಹೀಗೆ ಹೇಳಿದರೂ ದ್ವಿಜದಾಸ ಸುಮ್ಮನೇ ನಿಂತಿದ್ದ.

'ಬಹುಶಃ ನನಗೋಸ್ಕರವೇ ಮೆರವಣಿಗೆಯನ್ನು ನಮ್ಮ ಮನೆಯ ಎದುರಿಗೆ ಹೊರಡಿಸಿದ್ದಿರೊ? ಏನು ನಾನು ಹೆದರಬೇಕು ಅಂತಲೊ?"—ವಿಪ್ರದಾಸನು ಪ್ರಶ್ನಿಸಿದನು.

"ಕೇವಲ ತಮಗೋಸ್ಕರವೇನೂ ಅಲ್ಲ. ಮೆರವಣಿಗೆ ಯಾವ ರಸ್ತೆಯಲ್ಲಿ ಬೇಕಾದರೂ ಸಾಗುತ್ತಿರಲಿ ಹೆದರಿಕೆಯುಳ್ಳವರು ಹೆದರೇಹೆದರುತ್ತಾರೆ" ಎಂದು ದ್ವಿಜದಾಸನು ಬಹಳ ಸಮಾಧಾನದಿಂದಲೇ ಉತ್ತರ ಕೊಟ್ಟನು.

ವಿಪ್ರದಾಸನು ನಸುನಕ್ಕನು. ಅವನ ಆ ನಗುವಿನಲ್ಲಿ ಅಸಡ್ಡೆ ತುಂಬಿತ್ತು. "ನಿಮ್ಮಣ್ಣ ಪುಕ್ಕರಲ್ಲೊಬ್ಬನಲ್ಲವೆಂದು ಮೆರವಣಿಗೆಯಲ್ಲಿದ್ದ ಬಹು ಜನಕ್ಕೆ ಗೊತ್ತು. ಇಲ್ಲದಿದ್ದರೆ ಜಗುಲಿಯವರೆಗೂ ಬಂದು ಅವರ ಜಯಧ್ವನಿಯನ್ನು ಕಿವಿಗೊಟ್ಟು ಆಲಿಸಿ ಕೇಳಬೇಕಾಗುತ್ತಿರಲಿಲ್ಲ; ಮನೆಯಲ್ಲಿ ಕುಳಿತುಕೊಂಡೇ ಕೇಳಬಹುದಾಗಿತ್ತು. ನಾನು ನಿಮ್ಮ ಚಿತ್ರ ವಿಚಿತ್ರವಾದ ಪತಾಕೆ ಮತ್ತು ದೊಡ್ಡ ದೊಡ್ಡ ಭಾಷಣಗಳಿಗೆ ಹೆದರುವವನಲ್ಲ. ಪಳಪಳನೆ ಹೊಳೆಯುವ ಕೃತಕ ಹಲ್ಲುಗಳಿಂದ ಬೇಕಾದರೆ ಯಾರನ್ನಾದರೂ ಸುಳ್ಳಾಮಳ್ಳಿ ಹೆದರಿಸಬಹುದು. ಆದರೆ ಅದರಿಂದ ಜಗಿದು ತಿನ್ನುವ ಕೆಲಸ ಖಂಡಿತ ಸಾಧ್ಯವಿಲ್ಲವೆಂದು ನನಗೆ ಚೆನ್ನಾಗಿ ಗೊತ್ತು" ಎಂದು ಹೇಳಿದನು.

ನಿನ್ನೆ ಯಾವ ಕಾರಣದಿಂದ ಜನತೆಯ ದನಿಯು ಕುಗ್ಗಿತ್ತೆಂಬುದು ತಿಳಿಯದ ವಿಷಯವಾಗಿರಲಿಲ್ಲ. ಪುನಃ ಅದನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಆಡಿದ ವಿಪ್ರದಾಸನ ಮಾತುಗಳನ್ನು ಕೇಳಿ ದ್ವಿಜದಾಸನು ಮನಸ್ಸಿನಲ್ಲಿಯೇ ನಾಚಿದನು. ಸ್ವಭಾವತಃ ಶಾಂತಪ್ರಕೃತಿಯವನಾದುದರಿಂದಲೂ ಮತ್ತು ತನ್ನ ಅಣ್ಣನವಿಷಯದಲ್ಲಿ ಹೆಚ್ಚು ಗೌರವವನ್ನಿಟ್ಟುಕೊಂಡಿದ್ದುದರಿಂದಲೂ ಅವನು ಬೇರೆ ಯಾವುದಾದರೂ ಪ್ರಸಂಗವಾಗಿದ್ದರೆ ಸುಮ್ಮನಿದ್ದುಬಿಡುತ್ತಿದ್ದ; ಆದರೆ ಯಾವುದನ್ನು ಲಕ್ಷ್ಯದಲ್ಲಿಟ್ಟುಕೊಂಡು ವಿಪ್ರದಾಸನು ಹಂಗಿಸಿದ್ದನೊ ಅದನ್ನು ಸುಮ್ಮನೆ ಸಹಿಸುವುದಕ್ಕಾಗುವಂತಿರಲಿಲ್ಲ. ಆದರೂ ಮೆಲುದನಿಯಲ್ಲಿಯೇ ಪ್ರತಿಪಾದಿಸಿದನು "ಅಣ್ಣಾ, ಕೃತಕ ಹಲ್ಲುಗಳಿಂದ ಎಷ್ಟು ಸಾಧ್ಯವೋ ಅದಕ್ಕಿಂತ ಹೆಚ್ಚು ಅದರಿಂದ ಸಾಧ್ಯವಿಲ್ಲವೆಂದು ನಮಗೂ ಗೊತ್ತು. ಆದರೆ ಈ ಪ್ರಪಂಚದಲ್ಲಿ ನಿಜವಾದ ಹಲ್ಲುಳ್ಳ ಜನರೂ ಇದ್ದಾರೆ, ಕಚ್ಚಿ ತಿನ್ನುವ ಕಾಲ ಬಂದರೆ ಅವರೇನೂ ಕಡಿಮೆ ಇಲ್ಲವೆಂದು ನಿಮಗೆ ಮಾತ್ರ ಗೊತ್ತಿಲ್ಲ" ಎಂದನು.

ವಿಪ್ರದಾಸನು ಇಂಥಾ ಉತ್ತರವನ್ನು ನಿರೀಕ್ಷಿಸಿರಲಿಲ್ಲ. ಆದುದರಿಂದ ಆಶ್ಚರ್ಯಚಕಿತನಾಗಿ ಅವನ ಮುಖವನ್ನು ನೋಡುತ್ತ "ಹ್ಞಾ?" ಎಂದನು.

ಪ್ರತ್ಯುತ್ತರವಾಗಿ ಏನೋ ಹೇಳಬೇಕೆಂದಿದ್ದ ದ್ವಿಜದಾಸನು ಹೆದರಿ ಸುಮ್ಮನಾದನು. ಆದರೆ ವಿಪ್ರದಾಸನಿಗೆ ಹೆದರಿಯಿಲ್ಲ. ಹೊರಗಿನಿಂದ 'ನೀವು ಬಾಗಿಲಮೇಲೆ ಹೀಗೆ ಪರದೆಯನ್ನೇಕೆ ಇಳಿಬಿಡುತ್ತೀರಿ. ಇವನ್ನು ಮುಟ್ಟಿಸಿ

ಕೊಳ್ಳದೇ ಒಳಗೆ ಬರುವುದು ಕಷ್ಟ. ಮನೆಯಲ್ಲೆಲ್ಲಾ ವಿಲಾಯತೀ 'ಫ್ಯಾಷನ್ ತುಂಬಿಹೋಯಿತು'—ಎಂದು ಗೊಣಗಿಕೊಂಡ ಅಮ್ಮನದನಿ ಕೇಳಬಂದಿತು ಆಮುದರಿಂದ.

ದ್ವಿಜದಾಸನು ಗಾಬರಿಗೊಂಡು ಪರದೆಯನ್ನು ಓರೆಮಾಡಿದನು. ವಿಪ್ರದಾಸನು ಕುರ್ಚಿಯಿಂದ ಎದ್ದುನಿಂತನು. ಪ್ರೌಢ ವಿಧವೆಯೊಬ್ಬಳು ಒಳಗೆ ಪ್ರವೇಶಿಸಿದಳು. ಅವಳ ವಯಸ್ಸು ಸುಮಾರು ನಲವತ್ತಿರಬಹುದು; ಆದರೂ ರೂಪಿನಲ್ಲೇನೂ ಅವಳು ಕಡಿಮೆ ಇರಲಿಲ್ಲ. ದೇಹ ಸ್ವಲ್ಪ ಬಡ ವಾಗಿದ್ದರೂ ದೃಷ್ಟಿಸಿ ನೋಡುವವರಿಗೆ ಅವಳ ಮುಖದಮೇಲೆ ವೈಧವ್ಯದ ಕಠೋರತೆಯು ಗೋಚರವಾಗುತ್ತಿತ್ತು. ಚಿಕ್ಕವನಕಡೆ ಬೆನ್ನುಮಾಡಿ ನಿಂತು ತನ್ನ ದೊಡ್ಡ ಮಗನೊಡನೆ ಮಾತು ಪ್ರಾರಂಭಿಸಿದಳು.

"ವಿಪ್ರ, ಕೇಳಿದೆಯಾ? ಈಸಲ ಏಕಾದಶೀ ವಿಚಾರವಾಗಿ ಪಂಚಾಂಗದಲ್ಲಿ ಏನೋ ಗಡಿಬಿಡಿ ಇದೆಯಂತೆ. ಏನು ಹೀಗೂ ಆಗುತ್ತದೆಯೆ?"

"ಹಾಗೆ ಎಂದಿಗೂ ಆಗಬಾರದು."

"ನೀನು ಆ ಸ್ಮೃತಿರತ್ನ ಪಂಡಿತರನ್ನು ಕರೆಯಿಸು. ಅವರು ಏನು ಹೇಳುತ್ತಾರೋ ಕೇಳೋಣ."

ವಿಪ್ರದಾಸನು ಕೊಂಚ ನಕ್ಕು ಹೇಳಿದ "ಆಗಲಿ ಕರೆಸುತ್ತೇನೆ. ಆದರೆ ಅವರು ಏನು ಹೇಳುತ್ತಾರೊ ಬಿಡುತ್ತಾರೊ ಅದರಿಂದ ನಿಮಗೇನು? ಒಂದುಸಲ ಏನೋ ಗಡಿಬಿಡಿ ಎಂತ ಕೇಳಿದಿರಿ, ಸರಿ. ಆ ಎರಡು ದಿನಗಳೂ ನೀವು ನೀರು ಸಹ ಮುಟ್ಟುವುದಿಲ್ಲವೆಂದು ನನಗೆ ಗೊತ್ತು."

ತಾಯಿಯೂ ನಕ್ಕು "ಏನು ಯಾರಿಗಾದರೂ ಸುಳ್ಳುಸುಳ್ಳೆ ಉಪ ವಾಸ ಮಾಯಬೇಕೂಂತ ಇಷ್ಟವೇ? ಆದರೆ ಬೇರೆ ಏನು ಉಪಾಯ ಇದೆ? ಇದನ್ನು ಮಾಡಿದ್ದರಿಂದ ಪುಣ್ಯವಿಲ್ಲ; ಆದರೆ ಮಾಡದಿದ್ದರೆ ಅನಂತ ನರಕ ಏನಪ್ಪ ಕಲ್ಕತ್ತೆಯಲ್ಲಿ ಯಾರೋ ಒಬ್ಬ ದೊಡ್ಡ ವಿದ್ವಾಂಸರು ಬಹುಚೆನ್ನಾಗಿ ಭಾಗವತ ಪುರಾಣವನ್ನು ಹೇಳುತ್ತಿದ್ದಾರಂತೆ. ಸೊಸೆ. ಪೇಪರಿನಲ್ಲಿ ಬಂದಿದೆ ಎಂದು ಹೇಳಿದಳು. ಸ್ವಲ್ಪ ಪತ್ತೆಹಚ್ಚಿ ನೋಡು. ಏನು ಮಾಡಿದರೆ ಈ ಮನೆಯಲ್ಲಿ ಅವರ ಪಾದಧೂಳಿ ಬಿದ್ದೀತು?"

"ನಿಮ್ಮ ಅಪ್ಪಣೆಯಾದರೆ ನಾಳೆ ನಾನು ವಿಚಾರ ಮಾಡುತ್ತೇನೆ.

"ಏನು ನನ್ನ ಅಪ್ಪಣೆಯೇ ಆಗಬೇಕೆ? ನಿಮಗೆ ಕೇಳಲು ಇಷ್ಟ ವಿಲ್ಲವೆ? ನಮ್ಮ ಮನೆಯಲ್ಲಿ ಪುರಾಣ ಹೇಳಿಸಿ ಎಷ್ಟುದಿನ ಆಯಿತು...."

ಆಗ ವಿಪ್ರದಾಸ ನಕ್ಕು ಅವಳ ಮಾತನ್ನು ತಡೆಯುತ್ತ "ಇನ್ನೂ ಮೂರು ತಿಂಗಳೂ ಸಹ ಆಗಿಲ್ಲಮ್ಮ" ಎಂದು ಹೇಳಿದನು.

ತಾಯಿ ಆಶ್ಚರ್ಯದಿಂದ 'ಇನ್ನೂ ಮೂರೇ ತಿಂಗಳೇ? ಆದರೇನು ಮೂರು ತಿಂಗಳು ಕಡಿಮೆಯೆ? ಹೋಗಲಿ. ಈ ಸಲ ಹೇಳದ ಹೊರತು ಕೆಲಸವಾಗುವಂತಿಲ್ಲ. ನನ್ನ ಇಬ್ಬರು ಸೋದರತ್ತೆಯರಿಂದಲೂ ಕಾಗದ ಬಂದಿದೆ. ಅವರು ಕೈಲಾಸೇಶ್ವರನ ದರ್ಶನಕ್ಕೆ ಮತ್ತು ಮಾನಸಸರೋವರದ ಯಾತ್ರೆಗೆ ಹೋಗುತ್ತಾರಂತೆ. ಈಸಲ ಖಂಡಿತ ನಾನೂ ಹೊರಡುತ್ತೇನೆ'' ಎಂದು ಹೇಳಿದಳು.

"ಅಮ್ಮ" ವಿಪ್ರದಾಸನು ಕೈ ಜೋಡಿಸಿಕೊಂಡು ಹೇಳಿದನು "ನೀವು ಇದೊಂದು ಬಿಟ್ಟು ಏನುಬೇಕಾದರೂಹೇಳಿ. ನಿಮ್ಮ ಇಬ್ಬರು ಮಕ್ಕಳಲ್ಲಿ ಯಾರನ್ನಾದರೂ ಜೊತೆಯಲ್ಲಿ ಕರೆದುಕೊಂಡು ಹೋಗದಿದ್ದರೆ ಕೇವಲ ನಿಮ್ಮ ಸೋದರತ್ತೆಯರ ಸಂಗಡ ನಿಮ್ಮನ್ನು ತಿಬೆಟ್ಟಿಗೆ ಕಳುಹಿಸಲಾರೆ. ಯಾವ ಕಷ್ಟನಷ್ಟವನ್ನು ಬೇಕಾದರೂ ಸಹಿಸಬಲ್ಲೆ. ಆದರೆ ತಾಯಿಯನ್ನು ಮಾತ್ರ ಎಂದಿಗೂ ಕಳೆದುಕೊಳ್ಳಲಾರೆ.'

ತಾಯಿಯ ಕಣ್ಣಿನಲ್ಲಿ ಆನಂದಾಶ್ರುವು ಉಕ್ಕಿಬಂದಿತು. "ಛಿ! ಇದಕ್ಕೇಕೆ ಹೆದರಬೇಕು? ಬಿಡು. ಕೈಲಾಸ ಯಾತ್ರೆಯನ್ನು ಮಾಡುತ್ತ ಸಾಯುವಷ್ಟು ಪುಣ್ಯ ನಿಮ್ಮಮ್ಮ ಮಾಡಿಲ್ಲ. ನಾನು ಪುನಃ ಹಿಂತಿರುಗಿ ಬರುತ್ತೇನೆ. ಇನ್ನು ನನ್ನ ಮಕ್ಕಳಲ್ಲಿ ನೀನಂತೂ ಜೊತೆಯಲ್ಲಿ ಬರುವ ಹಾಗಿಲ್ಲ. ಈ ಮನೆ ಮಠದ ಭಾರ ನಿನ್ನಮೇಲೆ ಬಿದ್ದಿದೆ. ನನ್ನ ಹಿಂದೆ ನಿಂತಿದ್ದಾನಲ್ಲ. ಈ ಮಗನ ಜೊತೆಯಲ್ಲಿ ನಾನು ವೈಕುಂಠಕ್ಕೂ ಹೋಗಲು ಸಿದ್ಧಳಿಲ್ಲ. ಬ್ರಾಹ್ಮಣರ ಹೊಟ್ಟೆಯಲ್ಲಿ ಹುಟ್ಟಿ ಎಂದೋ ಸ್ನಾನಸಂಧ್ಯಾವಂದನೆ ಎಲ್ಲವನ್ನೂ ಬಿಟ್ಟುಬಿಟ್ಟಿದ್ದಾನೆ. ಅಲ್ಲದೆ ಕಲ್ಕತ್ತೆಯಲ್ಲಿ ಬೇರೆ ತಿನ್ನಬಾರದ್ದನ್ನೆಲ್ಲಾ ತಿನ್ನುತ್ತಾನೆಂದು ಕೇಳಿದ್ದೇನೆ. ಮತ್ತು ನಿನ್ನೆ ಅವನು ಏನು ಮಾಡಿದ ಗೊತ್ತೆ?"

'' ಮತ್ತೇನು ಮಾಡಿದ? ನನಗೇನೂ ಗೊತ್ತಿಲ್ಲ" ಎಂದು ಸಾಭ್ಯಸ್ತನಂತೆ ವಿಪ್ರದಾಸನು ಕೇಳಿದನು.

"ನೀನು ಕೇಳದೇ ಇರುತ್ತೀಯ. ನಿನ್ನ ಕಣ್ಣಿಗೂ ಮಣ್ಣೆರಚುವಷ್ಟು ಬುದ್ಧಿ ಇವನಿಗೆಲ್ಲಿಯದು. ಆದರೂ ನೀನು ಇದಕ್ಕೆ ಪ್ರತೀಕಾರವನ್ನು ಮಾಡು. ನಮ್ಮ ಅನ್ನ ತಿಂದು ನಮ್ಮ ಬಟ್ಟೆ ಉಟ್ಟು ನಮ್ಮ ದುಡ್ಡಿನಿಂದಲೇ

ಕಲ್ಕತ್ತೆಯಿಂದ ಜನರನ್ನು ಕರೆಯಿಸಿ ನಮ್ಮ ರೈತರನ್ನು ಎತ್ತಿಕಟ್ಟಲು ಇವನು ಹೀಗೆ ಷಡ್ಯಂತ್ರ ನಡೆಸುತ್ತಿರಬೇಕೆ? ಅವನ ಕಲ್ಕತ್ತೆಯ ವೆಚ್ಚವನ್ನು ನಿಲ್ಲಿಸಿಬಿಡು."

"ಇದೇನಮ್ಮ. ಹೀಗೆ ಹೇಳುತ್ತೀ. ಕಲ್ಕತ್ತೆಯಲ್ಲಿ ಅವನ ಓದಿಗಾಗಿ ಕೊಡುತ್ತಿರುವ ಹಣವನ್ನು ನಿಲ್ಲಿಸಿದರೆ? ಓದುವುದು ಬೇಡವೆ?" ವಿಪ್ರದಾಸನು ಆಶ್ಚರ್ಯದಿಂದ ಕೇಳಿದನು.

"ಏತಕ್ಕೋದಬೇಕು. ನನ್ನ ಮಾವನವರ ಸ್ಕೂಲಿನ ವಿದ್ಯಾರ್ಥಿಗಳು 'ಈಗಿನ ವಿದೇಶೀ ಶಿಕ್ಷಣದಿಂದ ನಮ್ಮ ದೇಶವು ಹಾಳಾಗುತ್ತಿದೆ ಎಂದು ಹೇಳುತ್ತ ಗುಂಪುಕಟ್ಟಿಕೊಂಡು ಬಂದಾಗ ಅವರನ್ನು ಹೊಡೆಯಲು ನೀನೇ ಹೋಗಿದ್ದೆ. ಈಗ ನಿನ್ನ ತಮ್ಮನೇ ಆ ಮಾತುಗಳನ್ನು ಹೇಳಿಕೊಂಡು ಅಲೆಯುತ್ತಿದ್ದರೆ ನೀನು ಏನೂ ಪ್ರತೀಕಾರ ಮಾಡುವುದಿಲ್ಲವೆ? ಇದು ನ್ಯಾಯವೋ?"

ವಿಪ್ರದಾಸನು ಮುಗುಳ್ನಗೆ ನಗುತ್ತ ಹೇಳಿದ,—"ಅದಕ್ಕೊಂದು ಕಾರಣವಿದೆ. ಒಂದು ಸ್ಕೂಲಿನಲ್ಲಿ ಒಂದು ಕ್ಲಾಸಿನಿಂದ ಮತ್ತೊಂದು ಕ್ಲಾಸಿಗೆ ಪ್ರಮೋಷನ್ ಸಿಕ್ಕಲಿಲ್ಲವೆಂದು ಆ ವಿದ್ಯೆಯನ್ನು ದೂರಿದರೆ ನಾನು ಸಹಿಸಲಾರೆ. ಅದೇ ದ್ವಿಜನಂತೆ ಎಂ.ಎ. ಪಾಸುಮಾಡಿ ವಿದೇಶೀ ಶಿಕ್ಷಣವನ್ನು ದೂಷಿಸುತ್ತಿದ್ದರೆ ನನ್ನದೇನೂ ಅಭ್ಯಂತರವಿಲ್ಲ."

"ಆದರೆ ನಮ್ಮ ದುಡ್ಡಿನಿಂದಲೇ ನಮ್ಮ ರೈತರನ್ನು ದಂಗೆ ಎಬ್ಬಿಸುವುದು?"

ದ್ವಿಜದಾಸ ಇಲ್ಲಿಯವರೆಗೆ ಸುಮ್ಮನಿದ್ದ, ಇದುವರೆಗೆ ಒಂದು ಮಾತಿಗೂ ಉತ್ತರ ಕೊಟ್ಟಿರಲಿಲ್ಲ. ಈ ಸಲ ಮಾತ್ರ ಜವಾಬು ಕೊಟ್ಟ—"ನಿನ್ನೆಯ ದಿನದ ಸಭೆಗಾಗಿ ನಿಮ್ಮ ಎಸ್ಟೇಟಿನ ಒಂದು ಕಾಸನ್ನೂ ಪೋಲು ಮಾಡಿಲ್ಲ."

ಒಳಗೆ ಬಂದಾಗಿನಿಂದ ಒಂದು ಸಲವಾದರೂ ಹಿಂದಕ್ಕೆ ತಿರುಗಿ ಅವನನ್ನು ನೋಡಿರಲಿಲ್ಲ; ಈಗಲೂ ನೋಡಲಿಲ್ಲ.—"ಈ ನಿರ್ಭಾಗ್ಯನನ್ನ ಕೇಳು"—ಎಂದು ವಿಪ್ರದಾಸನಿಗೆ ಹೇಳಿದಳು—"ಇವನಿಗೆ ಎಲ್ಲಿಂದ ಬಂತಂತೆ ದುಡ್ಡು? ಏನು ಕೂಲಿನಾಲಿ ಮಾಡುತ್ತಾನೆಯೆ?"

ಇದೇ ಹೊತ್ತಿಗೆ ಸರಿಯಾಗಿ ಹೊರಗಿನಿಂದ ಕಣಕಣ ಎಂದು ಬಳೆಯ ಶಬ್ದ ಕೇಳಿಬಂದಿತು. ವಿಪ್ರದಾಸನು ಕಿವಿಗೊಟ್ಟು ಆಲಿಸಿ

ಹೇಳಿದ--" ನಿಮ್ಮ ಸೊಸೆಯೇ ಅವನಿಗೆ ಧನಸಹಾಯವನ್ನು ಕೊಟ್ಟರೆ ಯಾರುತಾನೆ ಏನು ಮಾಡಲು ಸಾಧ್ಯ ಹೇಳಿ ?"

" ಹೌದು ಈಗ ತಿಳಿಯಿತು.'' ತಾಯಿ ಜ್ಞಾಪಿಸಿಕೊಂಡು ಹೇಳಿದಳು---" ಇದು ಸತಿಯ ಕೆಲಸ. ದೊಡ್ಡವರ ಮಗಳು. ಅಪ್ಪನ ಜಮೀನಿನ ಉತ್ಪತ್ತಿ ವರುಷಕ್ಕೆ ಆರುಸಾವಿರ ರೂಪಾಯಿ ಬರುತ್ತಿದೆ. ಇದನ್ನು ನಾನು ಮರೆತೇಬಿಟ್ಟಿದ್ದೆ." ಸ್ವಲ್ಪಹೊತ್ತು ಸುಮ್ಮನಿದ್ದು ಪುನಃ ಮಾತು ಮುಂದುವರಿಸಿದಳು—" ನಿನ್ನ ಲಗ್ನ ನಿಶ್ಚಯಮಾಡಲು ಬೀಗರು ಬಂದಾಗ ನಿಮ್ಮ ತಂದೆಗೆ ನಾನು ಹೇಳಿದೆ ರಾಯ್‌ವಂಶದ ಹುಡುಗಿ ಬೇಕಾಗಿಲ್ಲಾಂತ. ಅನಾಥರಾಯ್, ಅವರ ವಂಶದವರೇ ತಾನೆ ? ಅವರು ವಿಲಾಯಿತಿಗೆ ಹೋಗಿ ಒಬ್ಬ ಲೇಡಿಯನ್ನು ಮದುವೆಮಾಡಿಕೊಂಡು ಬಂದಿದ್ದರು. ಅವರು ಏನುತಾನೆ ಮಾಡಲಾರದು ? ಅವರಿಗೆ ಈ ಪ್ರಪಂಚದಲ್ಲಿ ಯಾವುದು ಅಸಾಧ್ಯ ? ''

ವಿಪ್ರದಾಸನು ಮೊದಲಿನಂತೆ ಮುಗುಳ್ನಗೆಯನ್ನು ಬೀರುತ್ತ ನಿಂತಿದ್ದನು. ಅವಳ ತೌರುವಂಶದ ಯಾವುದೋ ಅನಾಥರಾಯ್ ವಿಲಾಯಿತಿಯಿಂದ ಲೇಡಿಯೊಬ್ಬಳನ್ನು ಮದುವೆಯಾಗಿ ಬಂದುದನ್ನು ಅಮ್ಮ ಇದುವರೆಗೂ ಮರೆತಿಲ್ಲ.

ಎಲ್ಲರೂ ಮೌನವಾಗಿರುವುದನ್ನು ಕಂಡು ಅವಳು ಪುನಃ ಹೇಳಿದಳು " ಇರಲಿ. ಈಗ ಕೈಲಾಸೇಶ್ವರನು ನನ್ನನ್ನು ಕರೆಯುತ್ತಿದ್ದಾನೆ. ನಾನು ಅವನ ದರ್ಶನವನ್ನಂತೂ ಮಾಡಿಕೊಂಡು ಬರುತ್ತೇನೆ. ಅನಂತರ ಇದನ್ನು ನೋಡಿಕೊಳ್ಳುತ್ತೇನೆ''---ಎಂದು ಹೇಳಿ ಅಲ್ಲಿಂದ ಹೊರಟು ಹೋದಳು.

ವಿಪ್ರದಾಸನು ದ್ವಿಜದಾಸನನ್ನು ಕುರಿತು ಹೇಳಿದ—" ದ್ವಿಜು, ಅಮ್ಮನೊಂದಿಗೆ ಹೊರಡುತ್ತೀಯಾ ? ಅವರು ಹೊರಡಲೇಬೇಕೆಂದು ಸಂಕಲ್ಪ ಮಾಡಿದಮೇಲೆ ಅವರನ್ನು ತಡೆಗಟ್ಟಲು ಸಾಧ್ಯವಿಲ್ಲ.''

'' ಅಣ್ಣಾ ನಿಮಗೆ ಗೊತ್ತು ನನಗೆ ದೇವರುದಿಂಡರಲ್ಲಿ ವಿಶ್ವಾಸವಿಲ್ಲ ಅಂತ'' ಎಂದು ಅವನ ಮಾತುಗಳಿಗೆ ಒಪ್ಪದೆ ಹೇಳಲು ಪ್ರಾರಂಭಿಸಿದ—" ಇದಲ್ಲದೆ ನನ್ನ ಜೊತೆಯಲ್ಲಿ ವೈಕುಂಠಕ್ಕೆಸಹ ಹೋಗಲು ಒಪ್ಪುವುದಿಲ್ಲವೆಂದು ಅವರ ಬಾಯಿಂದಲೇ ಕೇಳಿದ್ದೀರಿ.''

ವಿಪ್ರದಾಸ ಅಸಂತುಷ್ಟನಾಗಿ ಹೇಳಿದ—" ಲೇ ಪಂಡಿತ ಸಾಕು.

ನಿನಗೆ ಹೋಗಲು ಆಗುತ್ತೊ ಇಲ್ಲವೋ ಹೇಳು."

"ನನಗೆ ಸಾಯುವುದಕ್ಕೂ ಈಗ ಬಿಡುವಿಲ್ಲ" ಎಂದು ಉತ್ತರ ಕೊಟ್ಟು ಮತ್ತೊಂದು ಪ್ರಶ್ನೆಯನ್ನು ಕೇಳುವುದಕ್ಕೂ ನಿಲ್ಲದೆಯೇ ದ್ವಿಜದಾಸ ಮನೆಯನ್ನು ಬಿಟ್ಟು ಹೊರಟುಹೋದನು.

"ಓಹೋ —ಹೀಗೋ! ತಾಯಿಯನ್ನೂ ಲೆಕ್ಕಿಸದಷ್ಟು ದೊಡ್ಡದೋ ದೇಶಕಾರ್ಯ" ಎಂದು ಗೊಣಗಿಕೊಳ್ಳುತ್ತ ವಿಪ್ರದಾಸನು ನಿಟ್ಟುಸಿರು ಬಿಟ್ಟನು.

ಇಲ್ಲ ಇವರ ತಾಯಿಯ ಪರಿಚಯವನ್ನು ಮಾಡಿಕೊಡಬೇಕು. ಇವಳು ವಿಪ್ರದಾಸನ ಮಲತಾಯಿ. ವಿಪ್ರದಾಸನ ತಾಯಿಯು ಸತ್ತು ವರುಷ ಪಾದಮೇಲೆ ಯಜ್ಞೇಶ್ವರ ಮುಖೋಪಾಧ್ಯಾಯರು ದಯಾಮಯಿಯನ್ನು ಮದುವೆಯಾದರು. ಅಂದಿನಿಂದ ಅವಳೇ ವಿಪ್ರದಾಸನನ್ನು ಸಾಕಿಸಲಹಿ ದಳು. ಇವಳು ತನ್ನ ತಾಯಿಯಲ್ಲವೆಂಬ ವಿಷಯವು ವಿಪ್ರದಾಸನಿಗೆ ದೊಡ್ಡವನಾಗುವವರೆಗೂ ಗೊತ್ತೇ ಇರಲಿಲ್ಲ.

೩

ಮನೆಯಲ್ಲಿ ದ್ವಿಜದಾಸನು ಎಲ್ಲರಿಗಿಂತಲೂ ಹೆಚ್ಚಾಗಿ ಅತ್ತಿಗೆ ಯನ್ನು ಆದರಿಸುತ್ತಿದ್ದನು. ಅವನ ಎಲ್ಲ ತರದ ವ್ಯರ್ಥ ಖರ್ಚಿಗೂ ಹಣವು ಅತ್ತಿಗೆಯ ಪೆಟ್ಟಿಗೆಯಿಂದಲೇ ಬರುತ್ತಿತ್ತು. ಅವಳು ಕೇವಲ ಅತ್ತಿಗೆಯಾದ ಮಾತ್ರವಿಂದಲ್ಲ. ವಯಸ್ಸಿನಲ್ಲಿಯೂ ಕೂಡ ಅವನಿಗಿಂತ ಕೆಲವು ತಿಂಗಳು ಹಿರಿಯಳಾಗಿದ್ದಳು. ಆದುದರಿಂದ ಸಾಮಾನ್ಯವಾಗಿ ಅವಳು ಅವನನ್ನು ಹೆಸರು ಹಿಡಿದೇ ಕರೆಯುತ್ತಿದ್ದಳು. ಹುಡುಗಾಟದಲ್ಲಿ ಇದೊಂದು ಮಾತಿಗಾಗಿ ಎಷ್ಟೋಸಲ ದ್ವಿಜದಾಸನು ತಾಯಿಯಮುಂದೆ ದೂರು ಹೇಳಿದ್ದಾನೆ.

ಕೇವಲ ಹನ್ನೊಂದು ವರ್ಷದವಳಾದಾಗ ಸತಿ ಈ ಮನೆಯಲ್ಲಿ ಸೊಸೆಯಾಗಿ ಕಾಲಿಟ್ಟಳು. ಆದುದರಿಂದ ಅವಳನ್ನು ಎಲ್ಲರೂ ಪ್ರೀತಿಸು ತ್ತಿದ್ದರು. ಆ ದ್ವಿಜದಾಸನ ದೂರುಕೇಳಿ ಅತ್ತೆ ನಕ್ಕು 'ಹಾಗೋ, ಬಹೂ ನೀನು ಈ ರೀತಿ ಮಾಡಬಾರದು. ಮೈದುನನನ್ನು ಹೆಸರುಹಿಡಿದು ಕರೆಯಬಾರದು."' ಎಂದು ಹೇಳುತ್ತಿದ್ದಳು. ಆಗ ಸತಿ "ಏಕೆ? ನಾನು ವಯಸ್ಸಿನಲ್ಲಿಯೂ ಅವನಿಗಿಂತ ಬಹಳ ದೊಡ್ಡವಳು" ಎನ್ನುತ್ತಿದ್ದಳು.

"ಬಹಳ ದೊಡ್ಡವಳೊ? ಎಷ್ಟು ದೊಡ್ಡವಳಮ್ಮ?"

"ನಾನು ಹುಟ್ಟಿದುದು ವೈಶಾಖದಲ್ಲಿ ಇವನು ಭಾದ್ರಪದದಲ್ಲಿ ಹುಟ್ಟಿದ್ದಾನೆ".

"ಭಾದ್ರಪದದಲ್ಲಿ ಹುಟ್ಟಿದ್ದಾನೆ ಅಲ್ಲವೆ? ನನಗೇ ಗೊತ್ತಿರಲಿಲ್ಲ" ಎಂದು ಅಮ್ಮ ನಕ್ಕು ಹೇಳುತ್ತಿದ್ದಳು. "ಇನ್ನುಮೇಲೆ ಅವನು ಮೂರು ಹೇಳಲು ಬಂದರೆ ಅವನ ಕಿವಿ ಹಿಂಡುತ್ತೇನೆ."

ನ್ಯಾಯಾಲಯದಲ್ಲಿ ಸೋತು ದ್ವಿಜು ಸಿಟ್ಟುಗೊಂಡು ಹೊರಟು ಹೋದರೆ ದಯಾಮಯಿ ಸೊಸೆಯನ್ನು ಕರೆದು ತೊಡೆಯಮೇಲೆ ಕೂಡಿಸಿ ಕೊಂಡು "ಅವನು ಇನ್ನೂ ಹುಡುಗ. ಅದಕ್ಕೇ ಅವನಿಗೆ ಗೊತ್ತಾಗುವುದಿಲ್ಲ. 'ಲಾಲಾಜೀ' ಅಂದರೆ ಅವನಿಗೆ ತುಂಬಾ ಸಂತೋಷವಾಗುತ್ತದೆ. ಆಗಾಗ್ಗೆ 'ಲಾಲಾಜಿ' ಎಂತಲೂ ಕರೆಯಮ್ಮ ಸರಿಯೇ" ಎಂದು ಸ್ನೇಹದಿಂದ ಹೇಳುತ್ತಿದ್ದಳು.

ಸತಿ ಆಗ ಅದಕ್ಕೆ ಒಪ್ಪಿ "ಅಮ್ಮ, ಹಾಗೇ ಆಗಲಿ ಆಗಾಗ್ಗೆ ಲಾಲಾಜಿ ಎಂತಲೂ ಕರೆಯುತ್ತೇನೆ" ಎಂದು ಹೇಳುತ್ತಿದ್ದಳು.

ಆಗ ಅವಳು ಇನ್ನೂ ಹುಡುಗಿ. ಈಗ ಇಷ್ಟು ದೊಡ್ಡ ಪರಿವಾರದ ಗೃಹಿಣಿಯಾಗಿದ್ದಾಳೆ. ವಿಧವೆಯಾದಾಗಿನಿಂದ ಅತ್ತೆ ಪೂಜೆ, ಪಾಠ, ಧರ್ಮ, ಧ್ಯಾನ—ಇವುಗಳಲ್ಲಿ ನಿರತಳಾಗಿದ್ದಾಳೆ. ಆದರೆ ಅವಳ ಅಂದಿನ ಉಪ ದೇಶವು ಬಹಳ ದಿನಗಳವರೆಗೆ ಸತಿಗೆ ಸಹಾಯವನ್ನುಮಾಡಿದೆ. ಇವತ್ತೂ ಅದು ಸಹಾಯಮಾಡಿತು.

ಹಿಂದಿನ ಅಧ್ಯಾಯದಲ್ಲಿ ನಡೆದ ಘಟನೆ ನಡೆದು ಸುಮಾರು ಹದಿ ನೈದು ದಿನವಾಗಿರಬಹುದು. ಇವತ್ತು ನತಿ ತನ್ನ ಮೈದುನನು ಓದುತ್ತಿದ್ದ ಕೋಣೆಯಲ್ಲಿ ಪ್ರವೇಶಿಸುತ್ತ 'ಲಾಲಾಜೀ' ಎಂದು ಕೂಗಿದಳು.

ದ್ವಿಜದಾಸನು ಕೈಮುಗಿದು ಅವಳ ಮಾತನ್ನು ತಡೆಗಟ್ಟುತ್ತಾ, "ಅತ್ತಿಗೆ, ಅದಿರಲಿ. ನನ್ನನ್ನು ಹಚ್ಚು ಪುಸಲಾಯಿಸಬೇಕಾದುದಿಲ್ಲ. ಏನು ಬೇಕಾದರೂ ಮಾಡುತ್ತೇನೆ" ಎಂದು ಹೇಳಿದನು.

"ಏನು ಮಾಡುತ್ತೀ ಹೇಳು?"

"ನೀನು ಏನು ಹೇಳಿದರೆ ಅದು. ಆದರೆ ಅಣ್ಣ ಹೀಗೆ ಮಾಡು ವುದು ಯೋಗ್ಯವಲ್ಲ."

"ಅಯೋಗ್ಯ ಹೇಗೆ?"

ದ್ವಿಜದಾಸ ಅದೇ ಸಿಟ್ಟಿನಿಂದ ಹೇಳಿದ—"ನನಗೆಲ್ಲಾ ಗೊತ್ತು.

ಇದೇ ಈಗತಾನೆ ನಾನು ಅಣ್ಣನ ರೂಮಿನಮೇಲೆ ಹಾದು ಬರುತ್ತಿದ್ದೇನೆ. ಒಳಗೆ ಅವರು, ನೀನು ಮತ್ತು ಅಮ್ಮ ಮೂರುಜನರೂ ಸೇರಿ ಮಂತ್ರಾಲೋಚನೆ ನಡೆಸುತ್ತಿದ್ದುದು ನನಗೂ ಕೇಳಿಸಿತು. ನನಗೇ ಹೇಳಲು ಅವರಿಗೆ ಧೈರ್ಯವಿಲ್ಲ. ಆದ್ದರಿಂದ ನಿನ್ನನ್ನು ಹಿಡಿದಿದ್ದಾರೆ ಹೇಗಾದರೂ ಕೆಲಸ ಸಾಗಿಸೋಣ ಅಂತ. ಎಷ್ಟು ಅಯೋಗ್ಯವಾದುದು ಈ ಹಂಚಿಕೆ ನೀನೇ ಹೇಳು!''

ಸತಿ ನಗುತ್ತ ಹೇಳಿದಳು—''ಲಾಲಾಜಿ ಇದೇನೂ ಅನ್ಯಾಯವಲ್ಲ. ಅವರೇನಾದರೂ ಹೇಳಲು ಬಂದರೆ 'ನನಗೆ ಸಾಯುವುದಕ್ಕೂ ಪುರಸೊತ್ತಿಲ್ಲ' ಅಂತ ಉತ್ತರಕೊಡುತ್ತೀ ಎಂದು ಅವರಿಗೆ ಗೊತ್ತು. ಅದೇ ಅತ್ತಿಗೆಯ ಅಪ್ಪಣೆಯಾದರೆ ನಾಕು ದ್ವಿಜ ಖಂಡಿತ 'ಇಲ್ಲ' ವೆನ್ನಲಾರನೆಂಬೂ ಅವರು ತಿಳಿದಿದ್ದಾರೆ.''

ದ್ವಿಜದಾಸ ತಲೆಯಲ್ಲಾಡಿಸುತ್ತ ಹೇಳಿದ ''ಅದೇ—ಅದೇ ನನಗೆ ಕೊಂಚ ಕಷ್ಟ. ಇಲ್ಲೇ ಇವರಿಗೂ ಒಂದು ಹಿಡಿತ ಸಿಕ್ಕಿದೆ. ಆಗಲಿ ಏನು ಮಾಡಬೇಕು ಹೇಳು?''

''ಅಮ್ಮ ಕೈಲಾಸೇಶ್ವರನ ದರ್ಶನಕ್ಕೆ ಹೊರಟೇ ಹೊರಡುತ್ತಾರೆ. ನೀನು ಅವರೊಂದಿಗೆ ಹೋಗಬೇಕು.''

ದ್ವಿಜದಾಸ ಕೆಲವು ನಿಮಿಷ ಸುಮ್ಮನಿದ್ದು ಹೇಳಿದ ''ಎರಡು ಮೂರು ತಿಂಗಳಿಗಿಂತ ಕಡಿಮೆಯೇನೂ ಹಿಡಿಯುವುದಿಲ್ಲ. ಕೆಲಸಕ್ಕೆಷ್ಟು ತೊಂದರೆಯಾಗುತ್ತದೆ ಯೋಚಿಸಿದ್ದೀಯಾ?''

ಸತಿಯು ಒಪ್ಪಿಕೊಳ್ಳುತ್ತ 'ನಿಜ ಬಹಳ ಹಾನಿಯುಂಟಾಗುತ್ತದೆ. ಆದರೆ ಒಂದು ಹೊಸಜಾಗ ನೋಡಿಕೊಂಡು ಬಂದಂತಾಗುತ್ತದೆ. ನಿನ್ನ ದೃಷ್ಟಿಯಿಂದ ಅದೇನೂ ದೊಡ್ಡ ಹಾನಿಯೆಂದು ಹೇಳುವುದಕ್ಕಾಗುವುದಿಲ್ಲ. ನನ್ನ ರಾಜ, ನೀನು ಆಮೇಲೆ ಒಲ್ಲೆನೆನ್ನಲಾಗದು.''

''ನೀನೇ ಆಜ್ಞಾಪಿಸುತ್ತಿರುವಾಗ ಒಲ್ಲೆನೆಂದು ಹೇಳುವುದಿಲ್ಲ. ಜೊತೆಗೆ ಹೋಗುತ್ತೇನೆ, ಅವತ್ತು ಅಮ್ಮ ಎಷ್ಟು ಸುಲಭವಾಗಿ ಅಣ್ಣನೊಂದಿಗೆ ಹೇಳಿದರು—ಕಲ್ಕತ್ತೆಯಲ್ಲಿ ನನ್ನ ವ್ಯಾಸಂಗಕ್ಕಾಗಿ ಕೊಡುತ್ತಿರುವ ವೆಚ್ಚವನ್ನು ನಿಲ್ಲಿಸಲು.''

ಸತಿ ನಕ್ಕು ಹೇಳಿದಳು—''ಲಾಲಾ, ಅದು ಸಿಟ್ಟಿನಲ್ಲಾಡಿದ ಮಾತು. ಅಲ್ಲದೆ ಇನ್ನು ಅಮ್ಮತಾನೇ ಹೇಳಿದ್ದಾರೆ? ಬೇರೆಯಾರೂ

ಅಲ್ಲವಲ್ಲ. ಇದನ್ನು ಮಾತ್ರ ಮರೆಯಬೇಡ.''

"ಇನ್ನೂ ಮರೆತಿಲ್ಲ ಅತ್ತಿಗೆ. ಅಂದಿನಿಂದ ನಾನೇನು ನಿಶ್ಚಯ ಮಾಡಿದ್ದೇನೆ ಗೊತ್ತೆ? ನಾನಿರೋನು ಒಬ್ಬ, ಮದುವೆ ಮಾಡಿಕೊಳ್ಳಲು ನನಗೆ ಪುರಸೊತ್ತಿಲ್ಲ ಮತ್ತು ಅದರ ಅವಶ್ಯಕತೆಯೂ ಇಲ್ಲ. ನನ್ನ ಸ್ವಂತ ಖರ್ಚು ಬಹಳ ಕಡಿಮೆ. ಆವಶ್ಯಕವೆಂದು ತೋರಿಬಂದರೆ ನಾಲ್ಕಾರು ಹುಡುಗರಿಗೆ ಪಾಠಹೇಳುತ್ತೇನೆ. ಇವರ ಎಸ್ಟೇಟಿನಿಂದ ಮೂರು ಕಾಸೂ ನನಗೆ ಬೇಡ. ನಾನು ಎಂದೆಂದಿಗೂ ಅವರನ್ನು ಕೇಳು ವುದಿಲ್ಲ.''

ಸತಿ ಪುನಃ ನಕ್ಕಳು. "ಲಾಲಾಜೀ, ಕೇಳಬೇಕಾದ ಪ್ರಸಂಗ ಬರುವುದೇ ಇಲ್ಲ. ತನ್ನಷ್ಟಕ್ಕೆ ತಾನೇ ಬರುತ್ತೆ. ಒಂದು ವೇಳೆ ಬರಲಿಲ್ಲ. ಹುಡುಗರಿಗೆ ಪಾಠ ಹೇಳುವ ಹೊತ್ತು ನಿನಗೆ ಬರುವುದಿಲ್ಲ. ನಾನು ಬದು ಕಿರುವವರೆಗಂತೂ ಇಲ್ಲ. ಆ ಭಾರ ನನ್ನಮೇಲಿರಲಿ.''

ದ್ವಿಜದಾಸನ ಮನಸ್ಸಿನಲ್ಲಿಯೂ ಈ ವಿಚಾರವಾಗಿ ಭರವಸೆ ಇತ್ತು. ಎವೆ ಇಕ್ಕುವುದರಲ್ಲಿ ಅವನ ರೆಪ್ಪೆ ಭಾರವಾದಂತೆ ತೋರಿತು. ಆದರೆ ಆ ಭಾವವನ್ನು ಕೂಡಲೇ ಮರೆಮಾಚಿ ದ್ವಿಜದಾಸ ಕೇಳಿದ "ಇವರೆಲ್ಲಾ ಎಂದು ಹೊರಡುತ್ತಾರೆ? ಎಂದಾದರೂ ಹೊರಡಲಿ ಅಂತೂ ನಾನೇ ಜೊತೆ ಯಲ್ಲಿ ಹೋಗಬೇಕಾಗಿಬಂತು. ಇದರಲ್ಲೊಂದು ವಿಶೇಷ ಏನು ಎನ್ನು ತ್ತೀಯೋ? ನನ್ನಂಥ ಮ್ಲೇಂಛನ ಜೊತೆಯಲ್ಲಿ ವೈಕುಂಠಕ್ಕೆ ಸಹ ಹೋಗಲು ಇಷ್ಟಪಡುವುದಿಲ್ಲವೆಂದು ಅಮ್ಮ ಹೇಳಿದ್ದರು. ಇದಕ್ಕೆ ಅಲ್ಲವೆ ಅತ್ತಿಗೆ ದೇವರಮಾಯೆ ಅನ್ನುವುದು.''

ಸತಿ ಈ ಕುಚೋದ್ಯಕ್ಕೆ ಉತ್ತರ ಕೊಡದೆ ಸುಮ್ಮನಿದ್ದಳು. "ಇರಲಿ, ಏನೇ ಆಗಲಿ. ನಿನ್ನ ಆಜ್ಞೆಯನ್ನುಲ್ಲಂಘಿಸುವುದಿಲ್ಲ. ಅವರಿಗೆ ನಿಶ್ಚಿಂತೆ ಯಿಂದಿರಲು ಹೇಳಿಬಿಡು'' ಎಂದು ದ್ವಿಜದಾಸನೇ ಹೇಳಿದ.

ಸತಿ ನಕ್ಕು ನುಡಿದಳು "ನನ್ನನ್ನು ಕಳುಹಿಸಿ ಅವರು ನಿಶ್ಚಿಂತ ರಾಗಿಯೇ ಇದ್ದಾರೆ. ನಾನು ಕೋಣೆಯಿಂದ ಹೊರಕ್ಕೆ ಹೊರಡಬೇಕೆಂ ದಿದ್ದಾಗ ನಿಮ್ಮ ಅಣ್ಣ ಹೇಳಿದರು 'ಅಮ್ಮ, ಇನ್ನು ಏನೂ ಯೋಚನೆ ಮಾಡಬೇಡ. ಯಾತ್ರೆಗೆ ಹೊರಡಲು ಸಿದ್ಧತೆಯನ್ನು ಮಾಡಿಕೊಳ್ಳ ಬಹುದು. ದೌತ್ಯಕಾರ್ಯಕ್ಕಾಗಿ ಯಾರನ್ನು ಕಳಿಸಿದ್ದೇವೊ ಅವಳ ಮುಂದೆ ತಮ್ಮನ ತರ್ಕ ನಡೆಯುವುದಿಲ್ಲ. ತಲೆಬಾಗಿ ಸುಮ್ಮನೆ ಒಪ್ಪಿ

ಬಿಡುತ್ತಾನೆ. ಬೇಕಾದರೆ ಪರೀಕ್ಷೆಮಾಡಿ ನೋಡು' ಎಂದುದು ನನ್ನ ಕಿವಿಯ ಮೇಲೂ ಬಿತ್ತು."

ಇದನ್ನು ಕೇಳಿ ದ್ವಿಜದಾಸನು ಸಿಟ್ಟಿನಿಂದ ಕ್ಷಣಕಾಲ ಸ್ತಬ್ಧನಾಗಿ ನಿಂತಿದ್ದು ಹೇಳಿದ.—"ಅತ್ತಿಗೆ, ನಿನ್ನ ಮಾತನ್ನು ಮೀರಲಾರೆ ಎಂದು ತಿಳಿದೇ ಈ ಹಂಚಿಕೆಯನ್ನು ಮಾಡಿದ್ದರೆ ಹೆಂಗಸರ ಮನಸ್ಸಿನಲ್ಲೇಳುವ ವ್ಯರ್ಥವಾದ ಬಯಕೆಗಳನ್ನು ಈಡೇರಿಸಲು ನನ್ನನ್ನೇ ಉಪಯೋಗಿಸಿ ಕೊಳ್ಳುತ್ತಿರುವರೆಂದಾಯಿತು. ಹಾಗಾದರೆ ಅಣ್ಣನಿಗೆ ಸ್ವಲ್ಪ ನಾಚಿಕೆಪಟ್ಟು ಕೊಳ್ಳಬೇಕೆಂದು ನನ್ನ ಪರವಾಗಿ ತಿಳಿಸು.

"ಹೇಳಿದುದರಿಂದ ಲಾಭವೇನೂ ಇಲ್ಲ. ಲಾಲಾ, ಜಮೀನ್ದಾರರಾಗಿ ಜನರ ರಕ್ತವನ್ನು ಹೀರುವವರು ಮಾಡುವುದೇ ಹೀಗೆ. ತಮ್ಮ ಕೆಲಸವನ್ನು ಸಾಧಿಸುವುದರಲ್ಲಿ ಇವರು ನಾಚಿಕೆ ಹೇಸಿಗೆ ಒಂದನ್ನೂ ನೋಡುವುದಿಲ್ಲ. ನ್ಯಾಯವಾಗಿ ನೀನು ಅರ್ಧ ಸಂಪತ್ತಿಗೆ ಒಡೆಯ. ಹೀಗಿದ್ದಾಗ್ಯೂ ನೀನು ಇದರ ಉತ್ಪತ್ತಿಯಲ್ಲಿ ಮೂರುಕಾಸು ತೆಗೆದು ಕೊಳ್ಳುವುದಕ್ಕೂ ಸಂಕೋಚಪಟ್ಟುಕೊಳ್ಳುತ್ತಿರುವುದನ್ನು ಕಂಡು ಒಂದು ಕಡೆ ದುಃಖವಾದರೆ ಮತ್ತೊಂದುಕಡೆ ಆನಂದದಿಂದ ಮನಸ್ಸು ಪುಲಕಿತ ವಾಗುತ್ತದೆ ನಿನ್ನನ್ನು ನಂಬಿ ಅಮ್ಮನಿಗೆ ಭರವಸೆ ಇತ್ತಿದ್ದೇನೆ. ನೀವು ನಿಶ್ಚಿಂತರಾಗಿ ತೀರ್ಥಯಾತ್ರೆಗೆ ಸಿದ್ಧತೆಯನ್ನುಮಾಡಿಕೊಳ್ಳಿ. ಅವನು ಖಂಡಿತ ನಿಮ್ಮೊಡನೆ ಬರುತ್ತಾನೆ ಅಂತ ಹೇಳಿ. ಲಾಲಾಜೀ ಯಾತ್ರೆಯನ್ನು ಮುಗಿಸಿಕೊಂಡು ಸುಖವಾಗಿ ಬಾ ನಿನಗೆಷ್ಟು ಬೇಕಾದರೂ ನಷ್ಟವಾಗಿರಲಿ ಅದನ್ನು ನಾನು ಸರಿಪಡಿಸುತ್ತೇನೆ."

ದ್ವಿಜದಾಸನು ಆಸನದಿಂದದ್ದು ಮುಮ್ಮುನೆ ಅತ್ತಿಗೆಯ ಕಾಲು ಮುಟ್ಟಿ ನಮಸ್ಕರಿಸಿ ಪುನಃ ತನ್ನ ಜಾಗದಲ್ಲಿ ಹೋಗಿ ಕುಳಿತುಕೊಂಡನು.

ಸತಿ ಹೇಳಿದಳು "ಲಾಲಾಜೀ, ಇದುವರೆಗೆ ಇನ್ನೊಬ್ಬರ ಪಕ್ಷವನ್ನು ವಹಿಸಿ ಮಾತನಾಡಿದೆ. ಈಗ ನನ್ನದೂ ಒಂದು ಕೆಲಸವಿದೆ ಹೇಳಲೇ ?"

"ನಿನ್ನ ಸ್ವಂತದ್ದೇ ? ಹಾಗಾದರೆ ನನ್ನಿಂದ ಸಾಧ್ಯವಿಲ್ಲ"— ದ್ವಿಜದಾಸ ನಕ್ಕು ಉತ್ತರಕೊಟ್ಟ.

ಸತಿಗೂ ನಗು ಬಂದಿತು.—"ಆಶ್ಚರ್ಯವೇನೂ ಇಲ್ಲ ಲಾಲಾ. ಕೇಳಿದಮೇಲೆ 'ಆಗುವುದಿಲ್ಲ' ವೆಂದರೆ ಏನು ಮಾಡಲೆಂದು ಹೆದರುತ್ತಿ

ದ್ದೇನೆ ಅಷ್ಟೆ' ಎಂದಳು.

"ಒಳ್ಳೆಯದು, ಹೇಳಿನೋಡು."

ಸತಿ ಹೇಳಿದಳು--"ನನಗೊಬ್ಬ ಮ್ಲೇಚ್ಛಕಕ್ಕ ಇದ್ದಾರೆ. ಸ್ವಂತ ಅಲ್ಲ. ನಮ್ಮ ತಂದೆಯ ಕಕ್ಕನ ಮಗ. ಅವರು ವಿಲಾಯಿತಿಗೆ ಹೋಗಿದ್ದರು. ಆಗೇನಾದರೂ ಈ ಜನಗಳಿಗೆ ಆ ಸಮಾಚಾರ ಗೊತ್ತಾಗಿದ್ದರೆ ನನ್ನನ್ನು ಈ ಮನೆಗೆ ಬರಗೊಡುತ್ತಿರಲಿಲ್ಲ. ಈ ಮಾತು ಅಮ್ಮನ ಬಾಯಲ್ಲಿ ಕೇಳಿರಬೇಕು ಅಲ್ಲವೆ?"

"ಬೇಕಾದಷ್ಟು ಸಲ ಸರಾಸರಿ ದಿನಕ್ಕೆ ಒಂದು ಸಲವೆಂತ ಇಟ್ಟುಕೊಂಡರೂ ಈ ಹತ್ತುಹದಿನೈದು ವರುಷಗಳಲ್ಲಿ ಏನಿಲ್ಲವೆಂದರೂ ಆರೇಳುಸಾವಿರ ಬಾರಿ ಕೇಳಿದ್ದೇನೆ."

ಸತಿಯು ನಕ್ಕು ಹೇಳಿದಳು—ನಿಜ. ನನ್ನ ಅಂದಾಜ ಅಷ್ಟೆ. ಕಕ್ಕ ಬೊಂಬಾಯಿಯಲ್ಲಿದ್ದಾರೆ. ಅವರಿಗೆ ಒಬ್ಬಳೇ ಒಬ್ಬಳು ಮಗಳು. ಅವಳು ಅಲ್ಲಿಯೇ ಓದುತ್ತಿದ್ದಾಳೆ ಮುಂದಿನ ವರುಷ ಅವಳು ತನ್ನ ಓದು ಪೂರೈಸಲು ವಿಲಾಯಿತಿಗೆ ಹೋಗುವವಳಿದ್ದಾಳೆ. ನೀನು ಹೋಗಿ ಅವಳನ್ನು ಕರೆದುಕೊಂಡು ಬರಬೇಕು."

"ಎಲ್ಲಿಂದ? ಬೊಂಬಾಯಿನಿಂದಲೆ?"

"ಅವಳೇನೋ ಬರೆದಿದ್ದಾಳೆ. ಬೇಕಾದರೆ ಒಬ್ಬಳೇ ಬರಬಲ್ಲೆ ಆದರೂ ಇಷ್ಟುದೂರ ಒಬ್ಬಳೇ ಬರಲು ಧೈರ್ಯವಿಲ್ಲ ಅಂತ."

"ಅವಳನ್ನು ತಂದು ಬಿಟ್ಟುಹೋಗುವವರು ಬೇರೆ ಯಾರೂ ಇಲ್ಲವೆ?

"ಇಲ್ಲ. ಕಕ್ಕನಿಗೆ ರಜ ಸಿಕ್ಕುವಂತಿಲ್ಲ."

ಒಮ್ಮೆಲೆ ದ್ವಿಜದಾಸನಿಗೆ ಒಪ್ಪಿಕೊಳ್ಳಲಾಗಲಿಲ್ಲ. ಏನೋಯೋಚಿಸ ತೊಡಗಿದ.

ಸತಿಯೇ ಹೇಳತೊಡಗಿದಳು —"ನನ್ನ ಮದುವೆಯಾದಾಗ ಅವಳು ಇನ್ನೂ ಏಳುವರ್ಷದ ಹುಡುಗಿ. ಅನಂತರ ಮೆಟ್ರಿಕ್ ಪಾಸುಮಾಡಿ ಮುಂದಕ್ಕೆ ಓದುತ್ತಿದ್ದಾಗ ಒಮ್ಮೆ ಅವಳನ್ನು ಕಲ್ಕತ್ತೆಯಲ್ಲಿ ನೋಡಿದ್ದೆ. — ಅದೂ ಈಗ ಎಷ್ಟೋ ವರ್ಷದಕೆಳಗೆ. ಲಾಲಾಜಿ, ಅವಳನ್ನು ಕಂಡರೆ ನನಗೆ ಬಹಳ ಪ್ರೀತಿ. ಒಂದು ಸಲ ನನಗಾಗಿ ಸ್ವಲ್ಪ ತೊಂದರೆ ತೆಗೆದುಕೊಂಡು ಹೋಗಿ ಕರೆದುಕೊಂಡುಬಾ. ಎಷ್ಟೋಸಲ ಅವಳು ಕಾಗದ

ಬರೆದಿದ್ದಾಳೆ. ಆದರೆ ಅವಳನ್ನು ಕರೆಸಲು ಅವಕಾಶವೇ ದೊರೆಯುಲಿಲ್ಲ.''

" ಆದರೆ ಈಗೇನು ಅಂಥ ಅವಕಾಶ ದೊರೆತದ್ದು ? ಅಮ್ಮ ಇದಕ್ಕೆ ಒಪ್ಪಿದರೇ ? "

ಈ ಪ್ರಶ್ನೆಗೆ ಸತಿ ಕೂಡಲೇ ಉತ್ತರವನ್ನು ಕೊಡದೆ ಹೋದಳು. ಏನೂ ಹೊಳೆಯದ ಕಾರಣ ಅವಳಿಗೆ ಏನೋ ಒಂದು ತರಹೆ ಕಳವಳವುಂಟಾಯಿತು. ಸ್ವಲ್ಪ ಹೊತ್ತಿನಮೇಲೆ ಹೇಳಿದಳು " ಅಮ್ಮನಿಗೆ ಹೇಳಿದ್ದೇನೆ ಇನ್ನೂ ಅವರು ಖಚಿತವಾಗಿ ಒಪ್ಪಿಗೆಯನ್ನು ಸೂಚಿಸಿಲ್ಲ. ಆದರೆ ಅವರು ತೀರ್ಥಯಾತ್ರೆಗೆ ಹೊರಡುವ ಹುಚ್ಚಿನಲ್ಲಿ ಇದಕ್ಕೆ ಎಂದಿಗೂ ಬೇಡವೆನ್ನಲಾರರು. ಅದಲ್ಲದೆ ಅವರು ಇಲ್ಲಿ ಇಲ್ಲದಿರುವಾಗ ಎರಡುಮೂರು ತಿಂಗಳು ನನ್ನ ಜೊತೆಯಲ್ಲಿ ಅವಳು ಸುಖವಾಗಿರಬಹುದು."

ಅತ್ತೆಯ ಅನುಮತಿ ದೊರೆಯದಿದ್ದರೂ ತನ್ನ ಪ್ರವಾಸಿ ತಂಗಿಯನ್ನು ಇವಳು ಕರೆಸಿಕೊಂಡೇ ತೀರುವಳೆಂದು ನಿಶ್ಚಯಿಸಿದ. ಕೇಳಿದ—" ಏನು ನಿಮ್ಮ ಕಕ್ಕ ಬ್ರಹ್ಮಸಮಾಜದವರೆ ? "

'' ಅಲ್ಲ. ಆದರೆ ಹಿಂದೂಸಮಾಜವು ಅವರನ್ನು ಸೇರಿಸಿಕೊಳ್ಳಲೊಲ್ಲದು. ಅವರು ಎಲ್ಲಿಯವರೆಂದು ಸ್ವತಃ ಅವರಿಗೇ ಗೊತ್ತಿರಲಾರದು. ಹೀಗೆ ದಿನ ತಳ್ಳುತ್ತಿದ್ದಾರೆ. ಹೀಗೆ ಎಷ್ಟೋ ಜನ ಇದ್ದಾರೆ.''

ದ್ವಿಜದಾಸ ಮನಸ್ಸಿನಲ್ಲಿ ಖಿನ್ನನಾಗಿ ಹೇಳಿದನು—" ಹೋಗುವುದರಲ್ಲಿ ನನ್ನದೇನೂ ಅಭ್ಯಂತರವಿಲ್ಲ. ಆದರೆ ಅಮ್ಮ ಇಲ್ಲಿರುವಾಗ ಅವರನ್ನು ಕರೆಸಿಕೊಳ್ಳಬೇಡವೆಂದು ಕೇಳಿಕೊಳ್ಳುತ್ತೇನೆ. ಅಮ್ಮನ ಸ್ವಭಾವ ಗೊತ್ತೇ ಇದೆ. ಏನಿಲ್ಲದಿದ್ದರೂ ಊಟತಿಂಡಿ, ಮಡಿಮೈಲಿಗೆ ವಿಚಾರದಲ್ಲಿ ದೊಡ್ಡ ಹಗರಣವನ್ನೆಬ್ಬಿಸುವರು. ಆಗ ನಿನ್ನ ತಂಗಿಯೊಂದಿಗೆ ನೀನೂ ಲಜ್ಜಿತಳಾಗಬೇಕಾಗುತ್ತದೆ. ಇದಕ್ಕಿಂತ ನಾವೆಲ್ಲ ಹೊರಟುಹೋದಮೇಲೆ ಕರೆಸಿಕೊಳ್ಳುವ ಏರ್ಪಾಟುಮಾಡುವುದು ಎಲ್ಲ ವಿಧದಿಂದಲೂ ಉತ್ತಮವೆಂದು ತೋರುತ್ತದೆ."

ಇದು ಒಳ್ಳೆ ಸಲಹೆ. ಇದು ಸತಿಗೂ ಗೊತ್ತು. ಆದರೆ ಅವಳೇ ಕಾಗದ ಬರೆದು ಖಂಡಿತ ಬರಲೇಬೇಕೆಂದು ಬರೆಯುವುದಾದರೂ ಹೇಗೆ ? ಇದಕ್ಕಿಂತ ನಾಚಿಕೆ ಮತ್ತು ದುಃಖದ ಮಾತುಂಟೆ? " ನನ್ನ ತಂಗಿ ಎಂದು ಮಾತ್ರ ನಾನು ಕರೆಸುತ್ತಿಲ್ಲ ಲಾಲಾ"—ಸತಿ ಹೇಳತೊಡಗಿದಳು–" ರೂಪು ಮತ್ತು ಗುಣದಲ್ಲಿ ಅವಳನ್ನು ಮೀರಿಸುವುದಿರಲಿ ಅವಳಿಗೆ ಸರಿಸಮಾನರು

ಈ ಪ್ರಪಂಚದಲ್ಲಿ ದುರ್ಲಭವೆಂದು-ಕಲ್ಕತ್ತೆಯಲ್ಲಿ ಅವಳ ಸಂಗಡ ಒಂದು ತಿಂಗಳಿದ್ದಾಗಲೇ ತಿಳಿದಿದ್ದೇನೆ. ಹೊರನೋಟಕ್ಕೆ ಅವರ ಆಚಾರ ವ್ಯವಹಾರಗಳು ಹೇಗೆ ಬೇಕಾದರೂ ಇರಲಿ. ಅಮ್ಮ ಅವಳನ್ನು ಒಂದೆರಡು ದಿನ ನೋಡಿದರೆ ಸಾಕು. ಮ್ಲೇಂಛ ಹುಡುಗಿಯರ ವಿಚಾರದಲ್ಲಿ ಅವರ ಭಾವನೆ ಬದಲಾಯಿಸುತ್ತದೆ. ಆಮೇಲೆ ಎಂದಿಗೂ ಅವಳಲ್ಲಿ ಅಶ್ರದ್ಧೆ ಮಾಡಲಾರರು."

"ಈ ಎರಡು ದಿನ ಇಟ್ಟುಕೊಂಡು ತೋರಿಸುವುದೇ ಕಷ್ಟ, ತಾನೆ! ಅಮ್ಮ ಖಂಡಿತ ನೋಡಲೂ ಇಷ್ಟಪಡುವುದಿಲ್ಲ. ಇದು ಮಾತ್ರ ನಿಜ.''– ದ್ವಿಜದಾಸ ಹೇಳಿದ.

"ಆದರೆ ಅವಳ ರೂಪವನ್ನಾದರೂ ನೋಡುತ್ತಾರಲ್ಲ. ಅಮ್ಮ ಕಣ್ಣುಮುಚ್ಚಿಕೊಂಡೇ ಇರಲಾರರು. ಅಲ್ಲವೆ? ಅದೂ ಒಂದು ತರಹ ಪರಿಚಯ"

ದ್ವಿಜದಾಸ ಸುಮ್ಮನಿದ್ದ. ಸತಿ ತನ್ನ ಮಾತನ್ನು ಮುಂದುವರಿಸಿದಳು---" ವಂದನಳ ವಿಷಯವಾಗಿ ಯಾರೂ ಉಪೇಕ್ಷೆಯನ್ನು ತೋರಲಾರರೆಂದೂ ಅವಳನ್ನು ಪ್ರಪಂಚದಲ್ಲಿ ಯಾರೂ ದೂಷಿಸಲಾರರೆಂದೂ ನಾನು ದೃಢವಾಗಿ ನಂಬಿದ್ದೇನೆ. ಅಮ್ಮನೂ ಹಾಗೆ ಮಾಡಲಾರಳು"

ದ್ವಿಜದಾಸನು ಆಶ್ಚರ್ಯದಿಂದ ಕೇಳಿದ 'ಏನು ವಂದನ? ಎಲ್ಲೋ ಹೆಸರು ಕೇಳಿದಂತಿದೆ. ಎಲ್ಲೋ ಬಹುಶಃ ನೋಡಿರಬೇಕು ನಿಲ್ಲು, ಪೇಪರಿನಲ್ಲಿ ಏನು . . . . . . . ಬಹುಶಃ ಒಂದು ಫೋಟೋ ಕೂಡ . . ''

ಮಾತು ಮುಗಿದಿರಲಿಲ್ಲ ಅಷ್ಟರಲ್ಲಿ ನಮಸ್ಕಾರವನ್ನು ಮಾಡುತ್ತ ದಾಸಿಯೊಬ್ಬಳು ಬಂದು 'ಬಾಬೂಜೀ ನೀವು ಇಲ್ಲಿದ್ದೀರಾ? ಯಾರೋ ನಿಮ್ಮ ಕಕ್ಕನಂತೆ. ಬೊಂಬಾಯಿನಿಂದ ಮಗಳೊಂದಿಗೆ ಬಂದಿದ್ದಾರೆ. ಹೊರಗೆ ಯಾರೂ ಇಲ್ಲ. ದೊಡ್ಡ ಬಾಬೂ ಕೂಡ ಇಲ್ಲ ಗುಮಾಸ್ತಜೀಯವರು ಅವರನ್ನು ಕೆಳಗಿನ ಕೋಣೆಯಲ್ಲಿ ಕೂಡಿಸಿದ್ದಾರೆ" ಎಂದು ಹೇಳಿದಳು.

ಈ ಘಟನೆಯನ್ನು ಯಾರೂ ನಿರೀಕ್ಷಿಸಿರಲಿಲ್ಲ. "ಓಹೋ--ಏನು ಹೇಳುವೆ'' ಎಂದು ಹೇಳುತ್ತ ಬಿರುಗಾಳಿಯಂತೆ ರಭಸದಿಂದ ಸತಿ ಕೋಣೆಯನ್ನು ಬಿಟ್ಟು ಹೊರಟುಹೋದಳು. ಹಿಂದೆ ದ್ವಿಜದಾಸನೂ ಹೊರಟನು.

೪

ಪೂರ್ಣ ವಿದೇಶೀ ಪೋಷಾಕಿನ ಪ್ರೌಢನೊಬ್ಬನು ಕುರ್ಚಿಯಲ್ಲಿ ಕುಳಿತಿದ್ದನು. ಅವನ ಪಕ್ಕದಲ್ಲಿಯೇ ನಿಂತಿದ್ದ ಇಪ್ಪತ್ತು ಇಪ್ಪತ್ತೊಂದು ವರ್ಷದ ಹರಯದ ತರುಣಿಯೊಬ್ಬಳು ಗೋಡೆಯ ಮೇಲೆ ತೂಗುಹಾಕಿದ್ದ ಜಗನ್ಮಾತೆಯ ದೊಡ್ಡ ಚಿತ್ರಪಟವನ್ನು ನೋಡುವುದರಲ್ಲಿ ಮಗ್ನಳಾಗಿದ್ದಳು. ಅವಳು ಅಚ್ಚ ವಿಲಾಯಿತೀ ರಮಣಿಯಂತಿರದಿದ್ದರೂ ಅವಳನ್ನು ಕಂಡು ಬಂಗಾಲೀ ಯುವತಿ ಎಂದು ಹೇಳುವುದೂ ಕಷ್ಟವಾಗಿದ್ದಿತು. ವಿಶೇಷವಾಗಿ ಅವಳ ಬಣ್ಣ ಹಾಲ್ಬಿಳುಪಾಗಿದ್ದಿತು. ಅವಳ ಮೈಕಟ್ಟು ಮತ್ತು ಹೊರಹೊಮ್ಮುತ್ತಿರುವ ಮುಖದ ಕಾಂತಿಯನ್ನು ನೋಡಿ ಅವಳು ಅನಿಂದ್ಯಸುಂದರಿ ಎಂದು ಒಪ್ಪಿಕೊಳ್ಳಲೇಬೇಕು. ಈಗತಾನೆ ಮೈದುನನ ಮುಂದೆ ಸತಿ ಕೊಚ್ಚಿಕೊಳ್ಳುತ್ತಿದ್ದಳು ಅತ್ತೆ ಏನಿಲ್ಲದಿದ್ದರೂ ಅವಳ ರೂಪು ಲಾವಣ್ಯವನ್ನಾದರೂ ನೋಡುತ್ತಾರೆ; ಕಣ್ಣುಮುಚ್ಚಿಕೊಂಡೇ ಇರಲಾರರು ಎಂದು. ಆ ಮಾತು ಖಂಡಿತವಾದುದು. ಇಷ್ಟು ರೂಪವತಿಯಾದ ತಂಗಿಯ ವಿಷಯದಲ್ಲಿ ಹೆಮ್ಮೆಪಡುವುದು ಯಾರಿಗಾದರೂ ಸಹಜ.

ಕೋಣೆಯಲ್ಲಿ ಪ್ರವೇಶಮಾಡಿದ ಸತಿಯು ಮೊಳಕಾಲೂರಿ ನಮಸ್ಕರಿಸಿ—' ಕಕ್ಕ ಇಷ್ಟು ದಿನದ ಮೇಲಾದರೂ ಮಗಳ ಮನೆಗೆ ಬಂದಿರಲ್ಲ ?" ಎಂದಳು.

ಅವಳ ಕಕ್ಕ ಎದ್ದು ನಿಂತು ತನ್ನ ಅಣ್ಣನ ಮಗಳ ತಲೆಯ ಮೇಲೆ ಕೈಯಿಟ್ಟು ನಗುತ್ತ ಹೇಳಿದರು " ನಿಜ ಮಗು ನಿಜ. ಬಂದೆ! ಯಾವಾಗ, ಯ್ಷಾವರಾಯನ ಕಾಲದಲ್ಲಿ ನೀನು ನನ್ನನ್ನು ಕರೆದಿದ್ದೆ, ನಾನು ಬರುವುದಿಲ್ಲವೆಂದೆ ? ಬಾ ಎಂದು ಯಾವಾಗಲಾದರೂ ಕರೆದಿದ್ದೀಯಾ ? ಕರೆಯದಿದ್ದರೂ ನಾನೇ ಸ್ವತಃ ಬಂದುಬಿಟ್ಟೆ—ಈಗ ಹೇಳುತ್ತಾಳೆ ಅಂತೂ ಬಂದಿರಲ್ಲಾಂತ " ! ದ್ವಿಜದಾಸನನ್ನು ನೋಡಿದ ಕೂಡಲೆ ' ಇವರು ಯಾರು ? ' ಎಂದು ಕೇಳಿದರು.

" ಇವರು ನನ್ನ ಮೈದುನ—ದ್ವಿಜದಾಸ."

ದ್ವಿಜದಾಸನು ದೂರದಿಂದಲೇ ನಮಸ್ಕರಿಸಿದನು. ವಂದನ ಅಕ್ಕನಿಗೆ ನಮಸ್ಕರಿಸಿ ನಗುತ್ತ ಹೇಳಿದಳು—" ಓಹೊ ಇವರು ಅವರೇನೊ ? ಇವರಿಂದಲೋ ಜಮಾನು, ಮನೆ ಉಳಿಯುವುದು ಕಷ್ಟ. ನನಗೆ ಕಾಗದ

ದಲ್ಲಿ ಬರೆದಿದ್ದೆಯಲ್ಲವೆ? ವಂಶದಲ್ಲಿ ವಿಚಿತ್ರ, ಗೋತ್ರದಲ್ಲಿ ವಿಚಿತ್ರ ಭಯಂಕರ ಸ್ವದೇಶಿಗಳು ಮುಂತಾಗಿ?"

"ಅಂಥ ಮಾತುಗಳನ್ನು ಯಾವಾಗ ಬರೆದಿದ್ದೆ?" ಸತಿ ವಿರೋಧಿಸಿದಳು.

"ಅದೇ ಆದಿನ. ಇಷ್ಟು ಜಾಗ್ರತೆ ಮರೆತುಬಿಟ್ಟೆಯ?"

'ಇಲ್ಲ, ಬರೆದಿಲ್ಲ. ನೀನು ಸುಳ್ಳು ಹೇಳುತ್ತೀಯೆ" ಎಂದು ಸತಿ ತಲೆಯಲ್ಲಾಡಿಸಿ ಹೇಳಿದಳು.

ದ್ವಿಜದಾಸನು ಏಕೋ ಏನೋ ಸಂಕೋಚದಿಂದ ಸ್ತಬ್ಧನಾಗಿ ನಿಂತಿದ್ದ. ಅಪರಿಚಿತಳೂ ಮತ್ತು ಪರಕೀಯಳೂ ಆದ ತರುಣಿಯೊಂದಿಗೆ ಹೇಗೆ ವರ್ತಿಸಬೇಕೆಂಬ ಬಗ್ಗೆ ಅವನು ಏನನ್ನೂ ನಿಶ್ಚಯಿಸಿರಲಿಲ್ಲ. ಇದಕ್ಕೆ ಮುಂಚೆ ಇಂಥ ಸನ್ನಿವೇಶವೂ ಒದಗಿರಲಿಲ್ಲ. ಅದರ ಆವಶ್ಯಕತೆಯೂ ಇರಲಿಲ್ಲ. ಆದರೆ ಈ ನವಾಗತ ತರುಣಿಯ ಸ್ವಚ್ಛಂದತೆಯನ್ನು ನೋಡಿ ಅವನು ಹೊಸ ಪಾಠವೊಂದನ್ನು ಕಲಿತನು. ಅವನ ನಿಷ್ಕಾರಣವೂ ಮತ್ತು ಅಶೋಭನೀಯವೂ ಆದ ಸಂಕೋಚವು ಬಯಲಾಯಿತು. ಅವನ ಅಂತಃಕರಣವು ಯಾವುದೊ ನಿರ್ಮಲ ಆನಂದದಿಂದ ಹರ್ಷಗೊಂಡಿತು. ಸ್ತ್ರೀಯರಿಗೂ ಶಿಕ್ಷಣ ಮತ್ತು ಸ್ವಾತಂತ್ರ್ಯವು ಅಗತ್ಯವೆಂದು ಅವನು ತನ್ನ ಸ್ವಬುದ್ಧಿಯಿಂದ ತಿಳಿದುಕೊಂಡಿದ್ದನು. ಸ್ತ್ರೀಯರಾದರೇನು ಮನುಷ್ಯರಲ್ಲವೆ? ಅವರಿಗೂ ಸ್ವಾತಂತ್ರ್ಯ ಮತ್ತು ಶಿಕ್ಷಣವನ್ನು ಪಡೆಯುವ ಅಧಿಕಾರವಿದೆ. ಮೂರ್ಖರನ್ನಾಗಿ ಮಾಡಿ ಅವರನ್ನು ಮನೆಯಲ್ಲೇ ಬಂಧಿಸುವುದು ಶುದ್ಧ ಅನ್ಯಾಯ ಎಂದು ಅವನು ಪ್ರಸಂಗ ಬಂದಾಗ ತನ್ನ ತಾಯಿ ಮತ್ತು ಅಣ್ಣನೊಂದಿಗೆ ವಾದಿಸುತ್ತಿದ್ದನು. ಆದರೆ ಈದಿನ ನವಾಗತ ತರುಣಿಯ ಆಕಸ್ಮಿಕ ಪರಿಚಯದಿಂದ ತಾನು ಸ್ತ್ರೀ ಶಿಕ್ಷಣದ ವಿಷಯವಾಗಿ ಕೊಡುತ್ತಿದ್ದ ಸಲಹೆಗಳು ಸರ್ವೆಸಾಧಾರಣವಾದುದೆಂದೂ, ನಿಜವಾಗಿಯೂ ಅದಕ್ಕಿಂತಲೂ ಮುಖ್ಯವಾಗಿ ಮನುಷ್ಯನು ತನ್ನ ಪುರುಷಾರ್ಥ ಸಾಧನೆಗೋಸ್ಕರವಾದರೂ ಸ್ತ್ರೀಗೆ ಉಚಿತ ಶಿಕ್ಷಣವನ್ನೂ, ಸ್ವಾತಂತ್ರ್ಯವನ್ನೂ ಕೊಡಬೇಕೆಂದೂ ಅವನು ಕ್ಷಣ ಮಾತ್ರದಲ್ಲಿ ಅರಿತುಕೊಂಡನು. ಅವರನ್ನು ವಂಚಿಸಿ ಮನುಷ್ಯನು ಹೇಗೆ ಆತ್ಮವಂಚನೆಯನ್ನು ಮಾಡಿಕೊಳ್ಳುತ್ತಿರುವನೆಂಬುದರ ಸತ್ಯಾಂಶವು ಈದಿನ ಅವನಿಗೆ ಸ್ಪಷ್ಟವಾಗಿ ಕಂಡುಬಂದಂತೆ ಹಿಂದೆ ಎಂದೂ ಕಂಡು

ಬಂದಿರಲಿಲ್ಲ. ಅವನು ಮುಗುಳ್ನಗೆಯನ್ನು ಬೀರುತ್ತ ಆ ಯುವತಿ ಯನ್ನು ಸಂಬೋಧಿಸಿ "ತಮ್ಮ ಮಾತೇ ನಿಜ. ಅತ್ತಿಗೆ ಮರೆತು ಬಿಟ್ಟಿ ದ್ದಾಳೆ. ಈ ವಿಷಯವನ್ನು ಕುರಿತು ಚರ್ಚಿಸುವುದರಿಂದ ಪ್ರಯೋಜನ ವೇನೂ ಇಲ್ಲ" ಎಂದು ಹೇಳಿದನು. ಅನಂತರ ಕೃತಕ ಗಾಂಭೀರ್ಯ ದಿಂದ 'ಅತ್ತಿಗೆ, ನನ್ನ ಜೋರೆಲ್ಲವೂ ನಿನ್ನ ಬಲದ ಮೇಲೆ ನಿಂತಿದೆ. ನಿನ್ನ ಕಾಗದದಲ್ಲಿ ಇಂಥಾ ಮಾತುಗಳೆ? ಒಳ್ಳೆಯದು. ನೀವು ನನ್ನನ್ನು ಬಿಟ್ಟುಬಿಡಿ, ಮತ್ತು ನಾನೂ ನನ್ನ ಅಧಿಕಾರವನ್ನು ಬಿಟ್ಟುಬಿಡುತ್ತೇನೆ ನಿಮ್ಮ ಜಮೀನ್ದಾರಿಯು ಹಾಳಾಗದಂತೆ ನಡೆದುಕೊಂಡು ಬರಲಿ. ನೀವು ಒಂದು ಸಲ ಬಾಯಿಬಿಟ್ಟು ಹೇಳಿಬಿಡಿ. ಕೂಡಲೇ ವಕೀಲರನ್ನು ಕರೆಸಿ ಕಾಗದಪತ್ರವನ್ನು ಮಾಡಿಸಿ ಬಿಡುತ್ತೇನೆ. ನಾನು ಈ ಕೆಲಸ ಮಾಡು ತ್ತೇನೋ ಇಲ್ಲವೋ ಅನ್ನುವುದಕ್ಕೆ ಇವರೇ ಸಾಕ್ಷಿ."

ಸಾಹೇಬರು ಮುಖವನ್ನೆತ್ತಿ ಸತಿಯನ್ನು ನೋಡುತ್ತ "ನಿನ್ನ ಮೈದುನ ವಿಪರೀತ ಸ್ವದೇಶೀ ಅಂತ ಕಾಣುತ್ತೆ" ಎಂದರು.

"ಹೌದು ಹೌದು ಭಾರಿ'' ಎಂದಳು ಸತಿ.

"ನೀನು ಹೇಳಿದ ಮಾತ್ರಕ್ಕೆ ಪತ್ರಮಾಡಿಸಿ ತಮ್ಮ ಪಾಲಿನ ಆಸ್ತಿ ಪಾಸ್ತಿಯನ್ನು ಬಿಟ್ಟುಕೊಡುವರೆ"?

ಸತಿ ತಲೆಹಾಕುತ್ತ ಹೇಳಿದಳು-"ಬಹಳ ಸುಲಭವಾಗಿ ಬಿಡಬಲ್ಲರು. ಇವರಿಗೆ ಅಸಾಧ್ಯವಾದುದು ಯಾವುದೂ ಇಲ್ಲ."

ವಂದನ ತನ್ನ ಕುತೂಹಲವನ್ನು ತಡೆಯಲಾದಳು: "ಖಂಡಿತ? ಎಲ್ಲವನ್ನೂ ಬಿಟ್ಟುಬಿಡಬಲ್ಲರೆ?''

ದ್ವಿಜದಾಸನು ಕ್ಷಣಕಾಲ ಅವಳ ಮುಖವನ್ನು ನೋಡುತ್ತಿದ್ದು ಹೇಳಿದ-"ಖಂಡಿತ ಬಿಡಬಲ್ಲೆ, ಎಳ್ಳಷ್ಟೂ ಇದರ ಲೋಭ ನನಗಿಲ್ಲ. ದೇಶದ ಹದಿನೈದಾಣೆ ಜನಗಳಿಗೆ ಎರಡು ಹೊತ್ತು ಹೊಟ್ಟೆ ತುಂಬ ಅನ್ನ ಹಗಲಿರಳು ಒಂದೇ ಸಮ ದುಡಿದರೂ ಸಿಕ್ಕವುದಿಲ್ಲ. ನಾವು ಕಷ್ಟಪಡದೆ ಸುಮ್ಮನೇ ಕುಳಿತಿದ್ದರೂ ಹಾಲು ತುಪ್ಪ ನಮಗಾಗಿ ಕಾದಿರುತ್ತದೆ. ಈ ಪಾಪದ ಕೂಳು ನನಗೆ ಬೇಕಿಲ್ಲ. ಇಂಥ ಸಂಪತ್ತು ಹೊರಟುಹೋಗು ವುದೇ ಮೇಲು. ಆಗ ಉಳಿದವರಂತೆಯೇ ನಾನೂ ಕಷ್ಟಪಟ್ಟು ದುಡಿದು ಬಾಳಿದರೆ ಬದುಕಿದರೆ ಅದಕ್ಕಿಂತ ಕಲ್ಯಾಣಕಾರಿಯಾದುದು ಮತ್ತೇನು. ಅವರೊಂದಿಗೆ ನಾನೂ ಹಸಿದು ಬಳಲಿ ಸತ್ತರೆ ಸ್ವರ್ಗಕ್ಕಾದರೂ ಹೋಗ

ಬಹುದು. ಆದರೆ ಈ ಮಾರ್ಗದಲ್ಲಿ ಅದರ ಸ್ವಪ್ನ ಕೂಡ ದುರ್ಲಭ."

ವಂದನ ಎವೆಯಿಕ್ಕದೆ ಅವನ ಕಡೆ ನೋಡುತ್ತಿದ್ದಳು. ಅವನ ಮಾತು ಮುಗಿದರೂ ಅವಳು ಏನೂ ಹೇಳಲಿಲ್ಲ. ನಿಟ್ಟುಸಿರುಬಿಟ್ಟು ಸುಮ್ಮನಾದಳು.

ಇದುವರೆಗೂ ಸತಿಯು ಅನ್ಯಮನಸ್ಕಳಾಗಿದ್ದಳು. ಅವಳು ಚೇತರಿಸಿಕೊಂಡು 'ಲಾಲಾಜೀ ನಿಮ್ಮ ಆ ಹಳೇ ಕಥೆ ಪುರಾಣವನ್ನು ಸದ್ಯಕ್ಕೆ ಸಾಕುಮಾಡಿ. ಆಮೇಲೆ ಬೇಕಾದಷ್ಟು ಪುರಸೊತ್ತು ಸಿಗುತ್ತದೆ. ಇನ್ನೂ ತನಕ ಇವರು ಮುಖ ಸಹ ತೊಳೆದುಕೊಂಡಿರಲಾರರು. ವಂದನ, ಬಾ ಹೋಗೋಣ. ಬಟ್ಟೆ ಬರೆ ಬದಲಾಯಿಸುವೆಯಂತೆ' ಎಂದು ಹೇಳಿದಳು. ವಾಸ್ತವವಾಗಿ ಅವಳ ಮೈದುನನ ಹತ್ತಿರ ಮಾತನಾಡಲು ಈ ಮಾತುಗಳನ್ನು ಬಿಟ್ಟರೆ ಬೇರೆ ಏನೂ ಇರಲಿಲ್ಲ. ಅದನ್ನೇ ಹೇಳಿಹೇಳಿ ಅವನಿಗೆ ಕಂಠಪಾಠವಾಗಿದ್ದಿತು.

"ಎಲ್ಲಿ ನಿಮ್ಮ ಯಜಮಾನರು ಕಾಣಿಸುವುದಿಲ್ಲವಲ್ಲ?" ಸಾಹೇಬರು ಸತಿಯನ್ನು ಕೇಳಿದರು.

"ಅವರು ಬೆಳಿಗ್ಗೆ ಏನೋ ಒಂದು ಅವಶ್ಯಕ ಕೆಲಸದ ಮೇಲೆ ಹೊರಗೆ ಹೋಗಿದ್ದಾರೆ. ಬರುವುದಕ್ಕೆ ಇನ್ನೂ ಹೊತ್ತಾಗಬಹುದು" ಎಂದು ಸತಿ ಉತ್ತರ ಕೊಟ್ಟಳು.

"ಅಕ್ಕ, ನಿಮ್ಮ ಅತ್ತೆ ಎಲ್ಲಿ ಕಾಣಿಸುವುದೇ ಇಲ್ಲ. ಮನೆಯಲ್ಲಿದ್ದಾರೆ ತಾನೆ?" ವಂದನ ಕೇಳಿದಳು.

"ಇನ್ನೂ ಇದಾರೆ. ಆದರೆ ಶೀಘ್ರದಲ್ಲಿಯೇ ಕೈಲಾಸ-ಮಾನಸ ಸರೋವರದ ಯಾತ್ರೆಗೆ ಹೊರಟುಹೋಗುತ್ತಾರೆ. ಬೆಳಗಿನ ಹೊತ್ತನ್ನು ಅವರು ಪೂಜೆಯಲ್ಲಿ ಕಳೆಯುತ್ತಾರೆ. ಇನ್ನು ಕೊಂಚ ಹೊತ್ತಿನಲ್ಲಿಯೇ ಅವರನ್ನು ನೋಡಬಹುದು."

ವಂದನ: "ಅವರು ಯಾವಾಗಲೂ ಧರ್ಮಕರ್ಮಗಳಲ್ಲಿಯೇ ನಿರತರಾಗಿರುತ್ತಾರೊ?"

"ಹೌದು"

"ವಿಧವೆಯಾದಾಗಿನಿಂದ ಅವರು ಗೃಹಕೃತ್ಯದ ಯೋಚನೆಯನ್ನೇ ಬಿಟ್ಟುಬಿಟ್ಟಿದ್ದಾರಂತೆ. ನಿಜವೆ?"

"ನಿಜ ಅಮ್ಮ. ಎಲ್ಲ ನಾನೇ ನೋಡಿಕೊಳ್ಳಬೇಕು."

" ಅಕ್ಕ ಅವರು ನಿನ್ನ ಮಲ-ಅತ್ತೆಯಲ್ಲವೆ?"-ವಂದನ ಉತ್ಸುಕತೆಯಿಂದ ಪ್ರಶ್ನಿಸಿದಳು.

ಸತಿ ನಕ್ಕು " ಕಣ್ಣಿಂದ ನೋಡಿಲ್ಲ. ಜನ ಹಾಗೆಂತ ಹೇಳುತ್ತಾರೆ. ಎಲ್ಲೊ ಸುಳ್ಳಿರಬೇಕು."

ದ್ವಿಜದಾಸನು ತಾನು ಉತ್ತರ ಕೊಡುವವನಂತೆ ಹೇಳಿದ— " ಸುಳ್ಳುಸುಳ್ಳೆ ಹೇಳುತ್ತಾರೆ. ಮಲಅತ್ತೆ ಅಂದರೆ ನನ್ನ ಅಣ್ಣನ ಮಲತಾಯಿ ಎಂದು ಅರ್ಥಮಾಡುವ ಪಕ್ಷಕ್ಕೆ ಅದು ಶುದ್ಧ ಸುಳ್ಳು. ಮಲತಾಯಿ ನಿಜ. ಆದರೆ ನಮ್ಮ ಅಣ್ಣನ ಮಲತಾಯಿಯಲ್ಲ; ನನ್ನ ಮಲತಾಯಿ. ಈಗ ಆ ಮಾತಿರಲಿ. ಸ್ನಾನಗೀನ ಎಲ್ಲ ಮುಗಿದಮೇಲೆ ಮಾತಾಡಿದರಾಯಿತು. ಈಗ ಮೇಲೆ ಹೊರಡಿ. ಸರಿ, ನಾನು ಹೋಗಿ ನೋಡುತ್ತೇನೆ. ಅತ್ತಿಗೆ ಹೊತ್ತು ಮಾಡಬೇಡ. ಇವರನ್ನು ಕರೆದುಕೊಂಡು ಬೇಗ ಬಂದುಬಿಡು."—ಇಷ್ಟು ಹೇಳಿ ಎಲ್ಲ ಸಿದ್ಧತೆಯೂ ಆಗಿದೆಯೋ ಇಲ್ಲವೋ ನೋಡಲು ಹೋಗಬೇಕೆಂದಿದ್ದನು. ಅಷ್ಟರಲ್ಲಿ ಎದುರಿಗೆ ತಾಯಿಯನ್ನು ಕಂಡು ಬೆರಗಾಗಿ ನಿಂತುಬಿಟ್ಟನು.

ಬಹುಶಃ ಸಮಾಚಾರ ತಿಳಿದೊಡನೆ ದಯಾಮಯಿ ತನ್ನ ಪೂಜೆಯನ್ನು ಅರ್ಧಕ್ಕೇ ಬಿಟ್ಟು ಬಂದಿರಬೇಕು. ಹೆಚ್ಚು ವಯಸ್ಸಾದಕಾರಣ ವಿಧವೆಯಾದಮೇಲೂ ಸಹ ಪರಪುರುಷರ ಮುಂದೆ ಅವಳು ಸಾಧಾರಣವಾಗಿ ಬರುತ್ತಿರಲಿಲ್ಲ. ಪರದೆಯ ಹಿಂದೆ ನಿಂತು ಮಾತಾಡಿಸುತ್ತಿದ್ದಳು. ಆದರೆ ಈ ದಿನ ಅಕಸ್ಮಾತ್ತಾಗಿ ಕೋಣೆಯಲ್ಲಿ ಬಂದು ನಿಂತಳು. ಸೆರಗು ಹಣೆಯವರೆಗೂ ಬಂದಿತ್ತು. ಆದರೂ ಮುಖವು ಪೂರ್ಣವಾಗಿ ಕಾಣುತ್ತಿದ್ದಿತು.

"ಇವರು ನನ್ನ ಕಕ್ಕ, ಇವಳೇ ನನ್ನ ತಂಗಿ ವಂದನ" ಎಂದು ಹೇಳಿ ಸತಿ ಹತ್ತಿರ ಬಂದು ಅತ್ತೆಗೆ ಮೊಳಕಾಲೂರಿ ನಮಸ್ಕರಿಸಿದಳು. ಈ ರೀತಿ ವಿನಾಕಾರಣ ನಮಸ್ಕಾರಮಾಡುವ ವಾಡಿಕೆಯೂ ಆಕೆಗೆ ಇರಲಿಲ್ಲ. ದಯಾಮಯಿಗೆ ಮನಸ್ಸಿನಲ್ಲಿಯೇ ಸ್ವಲ್ಪ ಆಶ್ಚರ್ಯವಾಯಿತು. ಆದರೂ ಅವಳು ಎದ್ದು ನಿಂತಕೂಡಲೇ ಸ್ನೇಹದಿಂದ ಅವಳ ಗಲ್ಲವನ್ನು ಮುಟ್ಟಿ ತನ್ನ ಬೆರಳುಗಳನ್ನು ಮುತ್ತಿಟ್ಟು ಆಶೀರ್ವದಿಸಿದಳು. ಆದರೆ ವಂದನಳ ಕಡೆ ದೃಷ್ಟಿ ಹೋದಕೂಡಲೇ ಅದರಲ್ಲಿದ್ದ ಸ್ನೇಹ ಆರಿಹೋಯಿತು. ತನ್ನ ಅಕ್ಕನಂತೆ ವಂದನ ಸಹ ಹತ್ತಿರ ಬಂದು ಕಾಲೂರಿ ನಮಸ್ಕರಿಸಿದಳು.

ಆದರೆ ದಯಾಮಯಿ ಅವಳನ್ನು ಮುಟ್ಟಲಿಲ್ಲ. ಎಲ್ಲಿ ತಾಕಿಬಿಡುವುದೊ ಎಂದು ಭಯದಿಂದ ಅವಳು ಹಿಂದಕ್ಕೆ ಹಾರಿ ಅಸ್ಫುಟ ದನಿಯಲ್ಲಿ " ಸುಖ ವಾಗಿರಮ್ಮ" ಎಂದು ಆಶೀರ್ವದಿಸಿದಳು.

ಅನಂತರ ಸಾಹೇಬರನ್ನು ಕುರಿತು ಹೇಳಿದಳು :—" ನಮಸ್ಕಾರ. ತಾವು ಬಂದುದು ಮಕ್ಕಳ ಸೌಭಾಗ್ಯ."

ಅವರು ಪ್ರತಿಯಾಗಿ ನಮಸ್ಕರಿಸಿ " ನೋಡಿ ಅನೇಕ ಕಾರಣದಿಂದ ಬರುವುದಕ್ಕೆ ಅವಕಾಶವೇ ಸಿಗುವುದಿಲ್ಲ. ಆದರೆ ಹೀಗೆ ಹೇಳದೆ ಕೇಳದೆ ಹೊರಟುಬಂದುದರಿಂದ ಏನಾದರೂ ತೊಂದರೆಯಾಗಿದ್ದರೆ ಕ್ಷಮಿಸಿ. ಇನ್ನು ಮುಂದೆ ಬರುವುದಕ್ಕ ಮುಂಚೆ ತಿಳಿಸಿ ಬರುತ್ತೇನೆ." ಎಂದು ಹೇಳಿದರು.

ದಯಾಮಯಿ ಈ ಮಾತಿಗೆ ಉತ್ತರ ಕೊಡಲಿಲ್ಲ. " ಇನ್ನೂ ನನ್ನ ಪೂಜೆಗೀಜೆ ಮುಗಿದಿಲ್ಲ, ಪುನಃ ಬಂದು ಕಾಣುತ್ತೇನೆ " ಎಂದು ಮಾತ್ರ ಹೇಳಿದಳು. ಅನಂತರ ಸೊಸೆಯನ್ನು ಕುರಿತು—" ಬಹೂ, ಇವ ರನ್ನು ಮೇಲೆ ಕರೆದುಕೊಂಡು ಹೋಗು. ಊಟ ತಿಂಡಿ ಯಾವುದಕ್ಕೂ ತೊಂದರೆಯಾಗದಂತೆ ನೋಡಿಕೊ. ವಿಪ್ರ ಬಂದಮೇಲೆ ನಾನು ಅವ ನನ್ನು ಕೂಗಿದೆನೆಂದು ತಿಳಿಸು." ಇಷ್ಟು ಹೇಳಿ, ಯಾರ ಕಡೆಯೂ ನೋಡದೆ ಅವಳು ಹೊರಟುಹೋದಳು. ಹೊರನೋಟದಿಂದ ದಯಾ ಮಯಿಯ ಆಚರಣೆಯಲ್ಲಿ ಏನೊಂದೂ ದೋಷವು ಕಂಡುಬರಲಿಲ್ಲ. ಆದರೆ ಸ್ವಚ್ಛ ಬೆಳದಿಂಗಳಿಂದ ಕೂಡಿದ ನೀಲ ಗಗನದ ಮಧ್ಯದಲ್ಲಿ ಒಂದು ಕಪ್ಪು ಮೋಡವು ಒಂದು ತುದಿಯಿಂದ ಮತ್ತೊಂದು ತುದಿಯವರೆಗೆ ಹರಿದು ಹೋಗುತ್ತಿರುವಂತೆ ಎಲ್ಲರಿಗೂ ತೋರಿತು.

* * * *

## ೫

ವಂದನ ಸ್ನಾನ ಮುಗಿಸಿಕೊಂಡು ಬಂದು ನೋಡುತ್ತಾಳೆ. ಅವಳಿ ಗಿಂತ ಮುಂಚೆ ಅವಳ ತಂದೆ ಎಲ್ಲವನ್ನೂ ಮುಗಿಸಿಕೊಂಡು ಸಿದ್ಧರಾಗಿ ಒಂದು ಸೊಗಸಾದ ಆರಾಮುಕುರ್ಚಿಯಮೇಲೆ ಕುಳಿತುಕೊಂಡು, ಮೂಗಿನ ಮೇಲೆ ಕನ್ನಡಕವನ್ನು ಧರಿಸಿ, ವೃತ್ತಪತ್ರಿಕೆಯನ್ನು ಓದುತ್ತಿದ್ದಾರೆ. ಹತ್ತಿ ರದ ಮೇಜಿನಮೇಲೆ ವೃತ್ತಪತ್ರಿಕೆಗಳು ಕಂತೆಕಂತೆಯಾಗಿ ಬಿದ್ದಿವೆ; ದ್ವಿಜದಾಸನು ನಿಂತುಕೊಂಡು ಅವುಗಳನ್ನು ತಾರೀಖುವಾರು ಜೋಡಿ

ಸಿಡುತಿದ್ದಾನೆ. ರೈಲಿನ ಪ್ರಯಾಣ ಮತ್ತು ಇತರ ಕಾರ್ಯದಲ್ಲಿ ವ್ಯಸ್ತ ರಾದುದರಿಂದ ಅನೇಕ ದಿನಗಳ ಪತ್ರಿಕೆಯನ್ನು ನೋಡಿರಲಿಲ್ಲ. ಕೋಣೆ ಯಲ್ಲಿ ಮಗಳು ಪ್ರವೇಶಿಸಿದುದನ್ನು ತಿಳಿದು ಅವರು ಕಣ್ಣು ಹೊರಳಿಸಿ "ಮಗು, ಮಧ್ಯಾಹ್ನ ಎರಡು ಗಂಟೆಯ ರೈಲಿನಲ್ಲಿ ಕಲ್ಕತ್ತೆಗೆ ಹೋಗೋಣ. ಅಕ್ಕನ ಮನೆಯಲ್ಲಿರಲು ನಿನಗೆ ಇಷ್ಟವಿದ್ದರೆ ನಿನ್ನನ್ನು ಇಲ್ಲಿಗೆ ತಿರುಗಿ ತಂದು ಬಿಟ್ಟು ನಾನು ನೆಟ್ಟಗೆ ಬೊಂಬಾಯಿಗೆ ಹೋಗುತ್ತೇನೆ. ಸರಿತಾನೆ" ಎಂದು ಹೇಳಿದರು.

"ಕಲ್ಕತ್ತೆಯಲ್ಲೆಷ್ಟು ದಿನ ಇರುತ್ತೀರಿ?"

"ಐದಾರು ದಿನ—ಬಹಳ ಎಂದರೆ ಎಂಟು ದಿನ."

"ಆದರೆ ಆಮೇಲೆ ನನ್ನನ್ನು ಬೊಂಬಾಯಿಗೆ ಯಾರು ಕರೆದು ಕೊಂಡು ಹೋಗುತ್ತಾರೆ?"

"ಅದಕ್ಕೇನಾದರೂ ಮಾಡಬಹುದು. ಅದೊಂದು ದೊಡ್ಡ ತೊಂದರೆಯಲ್ಲ."—ಇಷ್ಟು ಹೇಳಿ ಅವರು ಪುನಃ ಕೊಂಚ ಯೋಚಿಸಿ ಹೇಳಿದರು: "ಹಾಗಾದರೆ ಸತಿಯ ಹತ್ತಿರ ಇಲ್ಲೇ ಇದ್ದುಬಿಡು. ವಾಪಸು ಹೋಗುವಾಗ ನಿನ್ನನ್ನು ಜೊತೆಯಲ್ಲೇ ಕರೆದುಕೊಂಡು ಹೋಗುತ್ತೇನೆ. ಆಗಬಹುದೊ?"

ವಂದನ ಸ್ವಲ್ಪಹೊತ್ತು ಸುಮ್ಮನಿದ್ದು "ಆಗಲಿ ಅಕ್ಕನನ್ನು ಕೇಳು ತ್ತೇನೆ." ಎಂತ ಹೇಳಿದಳು.

"ಅತ್ತಿಗೆ ಈಗ ಅಡಿಗೆಮನೆಯಲ್ಲಿದ್ದಾಳೆ. ಬರುವುದಕ್ಕೆ ಇನ್ನೂ ಹೊತ್ತಾಗಬಹುದು" -ಇಷ್ಟು ಹೇಳಿ ಕೈಯಲ್ಲಿದ್ದ ಕಂತೆಯನ್ನು ತೋರಿಸಿ "ನಿಮಗೇನು ಕೊಡಲಿ?" ಎಂದು ಕೇಳಿದನು.

"ಏನು ಪತ್ರಿಕೆಯನ್ನೇ. ನಾನು ಪತ್ರಿಕೆಯನ್ನೋದುವುದಿಲ್ಲ"— ವಂದನ ಉತ್ತರವಿತ್ತಳು.

"ಪತ್ರಿಕೆಯನ್ನೋದುವುದಿಲ್ಲ?"

"ಇಲ್ಲ. ಅಷ್ಟು ತಾಳ್ಮೆ ನನಗಿಲ್ಲ. ಪ್ರತಿನಿತ್ಯ ಸಾಯಂಕಾಲ ನಮ್ಮ ತಂದೆ ಹೇಳಿದ ವಾರ್ತೆಗಳನ್ನು ಕೇಳಿ ತೃಪ್ತಳಾಗುತ್ತೇನೆ. ಅದೇ ನನಗೆ ಯಥೇಷ್ಟ" ಎಂದು ಹೇಳಿದಳು.

"ಆಶ್ಚರ್ಯ. ನೀವು ಬಹಳ ಓದುವಿರೆಂದು ಭಾವಿಸಿದ್ದೆ."

"ನನ್ನ ವಿಚಾರವಾಗಿ ಏನೂ ತಿಳಿಯದೆ ಏಕೆ ವ್ಯರ್ಥವಾಗಿ ಊಹಾ

ಪ್ರೋಹಗಳನ್ನು ಮಾಡುತ್ತೀರಿ ? ಇದು ತುಂಬ ಅನ್ಯಾಯ.'' ವಂದನ ಆಕ್ಷೇಪಿಸಿದಳು.

ದ್ವಿಜದಾಸನಿಗೆ ಕೊಂಚ ನಾಚಿಕೆಯಾಯಿತು. ವಂದನಳೇ ನಗುತ್ತ ಮಾತನ್ನು ಮುಂದುವರಿಸಿದಳು—"ನಿಮ್ಮಲ್ಲಿ ಯಾರು ಎಷ್ಟು ದೇಶೋದ್ಧಾರ ಕಾರ್ಯವನ್ನು ಮಾಡುತ್ತಿದ್ದೀರಿ, ಯಾರನ್ನು ಕಂಡರೆ ಇಂಗ್ಲೀಷರಿಗೆ ತುಂಬಾ ಕೋಪ ಈ ಸಮಾಚಾರಗಳು ನನಗೆ ರುಚಿಸು ವುದಿಲ್ಲ. ಅದೇ ನಮ್ಮ ತಂದೆಗೆ ಇದೆ ನೋಡಿ. ಹೇಗೆ ವರ್ತಮಾನಗಳ ಕಡಲಿನಲ್ಲಿ ಮುಳುಗಿ ಕುಳಿತಿದ್ದಾರೆ. ಪ್ರಪಂಚದ ಅರಿವು ಸಹ ಈಗ ಅವರಿಗಿಲ್ಲ.''

ಅವರ ಕಿವಿಗೆ 'ತಂದೆಯವರು' ಅನ್ನುವ ಶಬ್ದ ಮಾತ್ರ ಕೇಳಿಸಿತ್ತು. ಮಿಕ್ಕ ಮಾತುಗಳನ್ನು ಅವರು ಕೇಳಿರಲಿಲ್ಲ. ತಲೆ ಎತ್ತಿ ಮಗಳನ್ನು ನೋಡುವಷ್ಟು ಅವಕಾಶ ಅವರಿಗಿರಲಿಲ್ಲ. ಅವರು ಹಾಗೆಯೆ ತಲೆ ತಗ್ಗಿಸಿ ಕೊಂಡು 'ಇರಲಿ ಸ್ವಲ್ಪ ತಾಳು ಅದಕ್ಕೆ ಉತ್ತರವನ್ನು ಹುಡುಕುತ್ತಿ ದ್ದೇನೆ' ಎಂದು ಹೇಳಿದರು.

ಮಗಳು ನಕ್ಕು ಹೇಳಿದಳು. "ನೀನು ಹಗಲು ಇರುಳು ಉತ್ತರ ಹುಡುಕುತ್ತಲೇ ಇರು. ನನಗೇನು ಅವಸರವಿಲ್ಲ." ಪುನಃ ದ್ವಿಜ ದಾಸನನ್ನು ಉದ್ದೇಶಿಸಿ "ನಮ್ಮಕ್ಕ ಕಾಗದ ಬರೆಯುವಾಗ ಇಲ್ಲಿ ಒಂದು ದೊಡ್ಡ ಪುಸ್ತಕಾಲಯವಿದೆ ಎಂದು ಬರೆದಿದ್ದಳು. ಎಲ್ಲಿ ನೋಡೋಣ. ಎಷ್ಟು ಪುಸ್ತಕಗಳನ್ನು ಸಂಗ್ರಹಿಸಿದ್ದೀರಿ" ಎಂದು ಹೇಳಿದಳು.

ಅದಕ್ಕೆ ಅವನು 'ಹಾಗಾದರೆ ಹೊರಡಿ' ಎಂದು ಹೇಳಿ ಅವಳನ್ನು ಕರೆದುಕೊಂಡು ಹೊರಟನು.

ಪುಸ್ತಕಾಲಯವು ಮೂರನೆ ಮಹಡಿಯಮೇಲಿತ್ತು. ಮಹಡಿಯ ಮೆಟ್ಟಿಲುಗಳು ವಿಶಾಲವಾಗಿದ್ದವು. ಹತ್ತುತ್ತಿರುವಾಗ್ಗೆ ದ್ವಿಜದಾಸನು ಸಂಭಾಷಣೆಯನ್ನು ಪ್ರಾರಂಭಿಸಿದನು—"ಪುಸ್ತಕಾಲಯವು ತಕ್ಕಮಟ್ಟಿಗೆ ದೊಡ್ಡದೆ. ಆದರೆ ಅದು ನನ್ನದಲ್ಲ. ನಮ್ಮ ಅಣ್ಣನದು. ನಾನು ಹೊಸ ಪುಸ್ತಕಗಳು ಹೊರಬಿದ್ದಂತೆ ತಿಳಿಸುತ್ತೇನೆ. ಅವರು ಹೇಳಿದ ಪುಸ್ತಕ ಗಳನ್ನು ಕೊಂಡುತರುತ್ತೇನೆ ಅಷ್ಟೆ."

"ಆದರೆ ಓದುವವರು ನೀವೇ ತಾನೇ ?"

"ಒಂದು ದೃಷ್ಟಿಯಿಂದ ಇಲ್ಲ ಅಂತ ಇಟ್ಟುಕೊಳ್ಳಿ. ಈ ಪುಸ್ತಕಾ

ಲಯ ಯಾರದೋ ಅವರೂ ಬಹಳ ಓದುತ್ತಾರೆ. ಅಬ್ಬ ಎಂತಹ ಅದ್ಭುತ ಶಕ್ತಿ ಅವರದು. ಅವರ ಬುದ್ಧಿಯೂ ಅಷ್ಟೆ. ಅಷ್ಟೇ ಅದ್ಭುತವಾದದ್ದು."

" ಯಾರದ್ದು ನಿಮ್ಮ ಅಣ್ಣನದೆ ?"

" ಹೌದು. ವಿಶ್ವವಿದ್ಯಾನಿಲಯದ ಮುದ್ರೆ ಅವರ ಹೆಸರಿನ ಮುಂದೆ ಬಿದ್ದಿಲ್ಲ ಅಷ್ಟೆ; ಆದರೆ ಅವರಷ್ಟು ದೊಡ್ಡ ಪಂಡಿತರು ಈ ದೇಶದಲ್ಲಿ ಬಹಳ ಕಡಿಮೆ; ಇಲ್ಲವೇ ಇಲ್ಲ ಎಂದರೂ ಅನ್ನಬಹುದು. ಅಲ್ಲ ಅವರು ನಿಮ್ಮ ಭಾವ. ಅವರನ್ನು ನೀವು ನೋಡಿಲ್ಲವೆ ?

" ಇಲ್ಲ ನೋಡಿಲ್ಲ. ಹೇಗಿದಾರೆ ಅವರು ?"

" ನಮ್ಮಿಬ್ಬರಲ್ಲಿ ಹಗಲು ರಾತ್ರೆಯಷ್ಟು ವ್ಯತ್ಯಾಸ ಇದೆ ನೋಡಿ. ನಾನು ಕಪ್ಪು ಆದರೂ ಅವರ ದೇಹ ಭಂಗಾರದ ಬಣ್ಣದ್ದು. ಅವರ ದೇಹಶಕ್ತಿ ಈ ಪ್ರಾಂತ್ಯದಲ್ಲಿ ಅದ್ವಿತೀಯವಾದುದು. ಲಾಟಿ, ಕತ್ತಿ, ಬಂದೂಕು ಮುಂತಾದುವುಗಳಲ್ಲಿ ಅವರನ್ನು ಎದುರಿಸುವವರು ಯಾರೂ ಇಲ್ಲ. ತಾಯಿಯನ್ನು ಬಿಟ್ಟರೆ ಮತ್ತೆ ಯಾರೂ ಅವರೆದುರಿಗೆ ನಿಂತು ಮಾತಾಡಲಾರರು."

" ನಮ್ಮ ಅಕ್ಕ ಸಹ!" ಎಂದು ಹೇಳುತ್ತಾ ವಂದನ ನಕ್ಕಳು.

" ಇಲ್ಲ ನಿಮ್ಮ ಅಕ್ಕನಿಗೂ ಸಾಧ್ಯವಿಲ್ಲ" ಎಂದು ದ್ವಿಜದಾಸನು ಉತ್ತರವಿತ್ತನು.

" ಏಕೆ ಅವರಿಗೆ ಬಹಳ ಸಿಟ್ಟೆ ?"

" ಇಲ್ಲ. ಹಾಗೇನೂ ಇಲ್ಲ. ಇಂಗ್ಲೀಷಿನಲ್ಲಿ 'ಅರಿಸ್ಟೋಕ್ರಾಟ್' ಎಂದು ಹೇಳುತ್ತಾರಲ್ಲ. ಬಹುಶಃ ನಮ್ಮ ಅಣ್ಣ ಯಾವುದೋ ಜನ್ಮದಲ್ಲಿ ರಾಜನಾಗಿರಬೇಕು ಎಂತ ನನ್ನ ಊಹೆ. ಅವರಿಗೆ ಬಹಳ ಸಿಟ್ಟೋ ಎಂದು ಕೇಳುತ್ತಿದ್ದಿರಿ ಅಲ್ಲವೆ ? ಆದರೆ ಅವರಿಗೆ ಸಿಟ್ಟು ಮಾಡಲು ಅವಕಾಶವೇ ಸಿಗುವುದಿಲ್ಲ."

" ನಿಮಗೆ ನಿಮ್ಮ ಅಣ್ಣನ ವಿಷಯವಾಗಿ ಬಹಳ ಭಕ್ತಿ ಇದೆ ಅಲ್ಲವೆ ?"

ದ್ವಿಜದಾಸನು ಸುಮ್ಮನಿದ್ದನು. ಸ್ವಲ್ಪ ಹೊತ್ತಾದ ಮೇಲೆ " ಈ ಮಾತಿಗೆ ಇನ್ನೆಂದಾದರೂ ಅವಕಾಶ ಸಿಕ್ಕಾಗ ಉತ್ತರ ಕೊಡುತ್ತೇನೆ" ಎಂದು ಹೇಳಿದನು.

‘ ಅಂದರೆ ? ’

“ ಅಂದರೆ ಎನ್ನುವ ಪ್ರಶ್ನೆಗೆ ಉತ್ತರ ಕೊಡುವುದಾದರೆ ಇನ್ನೆಂದಾದರೂ ಹೇಳುತ್ತೇನೆ ಅನ್ನುವುದೇನು ಬಂತು. ಇವತ್ತಿಗೆ ಈ ಮಾತು ಇಲ್ಲಿಗೆ ಬಿಡಿ ” ಎಂದು ದ್ವಿಜದಾಸನು ಆ ಮಾತನ್ನು ಅಲ್ಲಿಗೇ ಮುಗಿಸಿದನು.

ವಿಶಾಲವಾದ ಪುಸ್ತಕಾಲಯ. ಬೀರು, ಮೇಜ, ಕುರ್ಚಿ -- ಎಲ್ಲವೂ ಬಹಳ ಬೆಲೆಯವು. ಅದಕ್ಕೆ ತಕ್ಕಂತೆ ಅವನ್ನು ಒರೆಸಿ ಅಚ್ಚುಕಟ್ಟಾಗಿ ಇಟ್ಟಿದ್ದಾರೆ. ಹಳ್ಳಿಯಲ್ಲಿ ಇಂಥಹ ವ್ಯವಸ್ಥೆಯನ್ನು ಕಂಡು ವಂದನೆಯು ಬೆರಗಾದಳು. ಬೊಂಬಾಯಿಯಲ್ಲಿ ಇಂತಹ ಪುಸ್ತಕಾಲಯಗಳು ಇಲ್ಲವೆಂದಲ್ಲ. ಅವುಗಳಿಗೆ ಹೋಲಿಸಿದರೆ ಇದು ಏನೂ ಇಲ್ಲ. ಆದರೂ ಹಳ್ಳಿಯ ಒಬ್ಬ ವ್ಯಕ್ತಿಯು ಇಷ್ಟು ಪುಸ್ತಕಗಳನ್ನು ಸಂಗ್ರಹಿಸಿರುವನೆಂದರೆ ಆಶ್ಚರ್ಯದ ವಿಷಯವೇ ಸರಿ. ‘ ಏನು, ನಿಜವಾಗಿಯೂ ನಿಮ್ಮ ಅಣ್ಣ ಇಷ್ಟು ಪುಸ್ತಕಗಳನ್ನು ಓದುತ್ತಾರೆಯೆ ? ’’ ಎಂದು ಕೇಳಿದಳು ವಂದನಾ.

“ ಓದುತ್ತಾರೆ ಮತ್ತು ಓದಿದ್ದಾರೆ ” ಎಂದು ದ್ವಿಜದಾಸನು ಉತ್ತರ ಕೊಟ್ಟನು. “ ಬೀರುಗಳು ತೆಗೆದಿವೆ ಬೇಕಾದರೆ ಯಾವುದಾದರೂ ಒಂದು ಪುಸ್ತಕವನ್ನು ತೆಗೆದುಕೊಂಡು ನೋಡಿ. ಅವರು ಓದಿ ಗುರುತುಹಾಕಿರುವ ಚಿಹ್ನೆಗಳು ತೋರಿ ಬರುವುವು.

“ ಅವರಿಗೆ ಅಷ್ಟು ಪುರುಸೊತ್ತು ಎಲ್ಲಿಂದ ಸಿಗುತ್ತೆ ಏನು ಹಗಲೂ ರಾತ್ರೆ ಇದೇ ಕೆಲಸವೊ ?”

“ ಆದರೆ ನನಗೆ ಸರಿಯಾಗಿ ಗೊತ್ತಿಲ್ಲ. ಇದಲ್ಲದೆ ನಮ್ಮ ಆಸ್ತಿಪಾಸ್ತಿ ಜಮೀನು ಮನೆ ಇವು ಹೆಚ್ಚಿಲ್ಲದಿದ್ದರೂ ಕಡಿಮೆ ಎಂದು ಹೇಳುವಂತಿಲ್ಲ. ಅವುಗಳಲ್ಲಿ ಎಲ್ಲಿ ಏನಿದೆ ಏನಾಗುತ್ತಿದೆ ಎಂಬ ಪ್ರತಿಯೊಂದು ವಿಷಯವೂ ಅವರಿಗೆ ಗೊತ್ತು. ಇವತ್ತು ನಿನ್ನೆಯ ಮಾತಲ್ಲ ಇದು ನಮ್ಮ ತಂದೆ ಬದುಕಿದ್ದಾಗಿನಿಂದಲೂ ಹೀಗೆಯೆ. ಅವರಿಗೆ ಎಲ್ಲಿಂದ ಪುರುಸೊತ್ತು ಸಿಗುತ್ತೆ. ಹುಡುಕಿದರೂ ನನಗೆ ಗೊತ್ತಾಗುವುದಿಲ್ಲ. ನಿಮ್ಮಂತೆಯೇ ನನಗಾಗುತ್ತಿರುವ ಆಶ್ಚರ್ಯ ಏನೂ ಕಡಿಮೆ ಇಲ್ಲ. ಆದರೆ ಪ್ರಪಂಚದಲ್ಲಿ ಸಾಮಾನ್ಯರಿಗಿಂತಲೂ ಭಿನ್ನರಾದ ಮಹಾತ್ಮರಿರುತ್ತಾರೆ ಎಂದು ನಂಬಿದ್ದೇನೆ. ಅಂಥವರಲ್ಲಿ ನಮ್ಮ ಅಣ್ಣ ಒಬ್ಬರಿರಬೇಕು. ಅವರಿಗೆ ನಮ್ಮಂತೆ ಕಷ್ಟಪಟ್ಟು ಪುಸ್ತುಕವನ್ನು ಓದುವ

ಅವಶ್ಯಕತೆ ಇಲ್ಲವೆಂದು ತೋರುತ್ತದೆ. ಅಚ್ಚಾದ ಅಕ್ಷರಗಳನ್ನು ನೋಡಿದರೆ ಸರಿ ಅವುಗಳು ಮೆದುಳಿನಲ್ಲಿ ಅಂಕಿತವಾಗಿ ಬಿಡುತ್ತವೆ. ಹೋಗಲಿ ಅಣ್ಣನವರ ಮಾತು ಇಲ್ಲಿಗೆ ಸಾಕು. ನೀವು ಅವರನ್ನು ಇನ್ನೂ ನೋಡಿಲ್ಲ ಸಹ. ನನ್ನ ಈ ಏಕಾಂಗಿಯಾದ ಸಮಾಲೋಚನೆಯು ಅತಿಶಯೋಕ್ತಿಯಾಗಿ ನಿಮಗೆ ತೋಚಬಹುದು.''

" ನನಗೆ ಇನ್ನು ಕೇಳಲು ಬಹಳ ಚೆನ್ನಾಗಿದೆ "

'' ಆದರೆ ಕೇವಲ ಚೆನ್ನಾಗಿದ್ದರಾಯಿತೆ. ಅದೇ ಸರ್ವಸ್ವವಲ್ಲ ವಲ್ಲ. ಪ್ರಪಂಚದಲ್ಲಿ ನಮ್ಮಂಥ ಸಾಮಾನ್ಯ ಮನುಷ್ಯರು ಬೇಕಾದಷ್ಟಿದ್ದಾರೆ ತಾನೆ ? ಅಸಾಧಾರಣ ವ್ಯಕ್ತಿಗಳೇ ಜಗತ್ತಿನಲ್ಲೆಲ್ಲಾ ಇದ್ದಿದ್ದರೆ ನಾವು ಎಲ್ಲಿಗೆ ಹೋಗಬೇಕಾಗಿತ್ತು ? ಅಲ್ಲದೆ ದೇವರು ಇನ್ನೊಬ್ಬರನ್ನು ಹೊಗಳುವುದಕ್ಕೆ ಮಾತ್ರ ನಮಗೆ ಬಾಯಿ ಕೊಟ್ಟಿಲ್ಲವಷ್ಟೆ ?''

ವಂದನ ಸ್ವಲ್ಪ ನಕ್ಕು ಹೇಳಿದಳು ' ಅಂದರೆ ಇನ್ನು ಅಗ್ರಜರನ್ನು ಬಿಟ್ಟು ಅನುಜರ ಸ್ತುತಿಪಾಠವಾಗಬೇಕೊ ? ಇದೇ ನಿಮ್ಮ ಅಭಿಪ್ರಾಯವೇ ? "

ದ್ವಿಜದಾಸನೂ ನಕ್ಕನು. —" ಇಷ್ಟವೇನೊ ಇದೆ. ಆದರೆ ಅದಕ್ಕೆ ಸರಿಯಾದ ಕಾಲ ಒದಗಿಬರಬೇಕಲ್ಲ. ಪರಿಚಿತರಂತೂ ಕೇಳಬಯಸುವುದಿಲ್ಲ. ಅಪರಿಚಿತರ ಮುಂದೆ ಸ್ವಲ್ಪ ಹಾಡಬಹುದು. ಆದರೆ ಅದಕ್ಕೆ ಧೈರ್ಯ ಸಾಲದು. ಆತ್ಮಸ್ತುತಿ ಅಷ್ಟು ಅಭ್ಯಾಸವಿಲ್ಲದಕಾರಣ ಎಲ್ಲಿ ಹೇಳುವಾಗ ತೊದಲುವುದೋ ಎಂಬ ಭಯ '' ಎಂದು ಹೇಳಿದನು.

ವಂದನ: " ತೊದಲದೇನೂ ಇರಬಹುದು ಸ್ವಲ್ಪ ಪ್ರಯತ್ನಪಟ್ಟು ನೋಡಿ. ಈ ವಿಚಾರದಲ್ಲಿ ಪುರುಷರು ಬಹಳ ನುರಿತವರು. ಇದು ಅವರ ಹುಟ್ಟುಗುಣವಿರಬೇಕೆಂದು ನನ್ನ ಭಾವನೆ. ಇನ್ನು ಹೊತ್ತು ಮಾಡಬೇಡಿ—ಪ್ರಾರಂಭಿಸಿ."

ದ್ವಿಜ :—" ಇಲ್ಲ. ಇಲ್ಲ. ನನ್ನಿಂದಲಂತೂ ಸಾಧ್ಯವಿಲ್ಲ. ಇದಕ್ಕಿಂತ ನೀವು ಏಕಾಂತದಲ್ಲಿ ಕುಳಿತು ಒಂದೆರಡು ಪುಸ್ತಕಗಳನ್ನೋದುವುದು ಒಳ್ಳೆಯದು. ನಾನು ಹೋಗಿ ಅತ್ತಿಗೆಯನ್ನು ಕಳುಹಿಸುತ್ತೇನೆ.'' ಎಂದು ಹೇಳಿ ದ್ವಿಜದಾಸನು ಹೊರಡುವುದರಲ್ಲಿದ್ದನು. ಅಷ್ಟರಲ್ಲಿ ವಂದನ ಅವನನ್ನು ಕೂಗಿ ನಿಲ್ಲಿಸಿ " ನೀವು ನನ್ನೊಬ್ಬಳನ್ನೆ ಇಲ್ಲಿ ಬಿಟ್ಟು ಹೋಗಬೇಡಿ. ನಾನು ಬೇಕಾದಷ್ಟು ಪುಸ್ತಕವನ್ನು ಓದಿದ್ದೇನೆ; ಈಗ ಅದರ ಅಗತ್ಯವಿಲ್ಲ.

ನೀವು ಏನಾದರೂ ಹೇಳುತ್ತಿರಿ. ನಾನು ಕೇಳುತ್ತೇನೆ ಎಂದು ಹೇಳಿದಳು.

"ಯಾವ ವಿಷಯವಾಗಿ ಹೇಳಬೇಕು ?"

"ನಿಮ್ಮ ಸ್ವಂತ ವಿಷಯವಾಗಿ"

"ಹಾಗಾದರೆ ಸ್ವಲ್ಪ ತಾಳಿ. ಕೆಳಕ್ಕೆ ಹೋಗಿ ಬಹಳ ಚೆನ್ನಾಗಿ ಮಾತನಾಡುವವರೊಬ್ಬರನ್ನು ಕಳುಹಿಸುತ್ತೇನೆ."

"ಅಕ್ಕನನ್ನು ಕಳಿಸಿಕೊಡುವಿರಿ, ಅಲ್ಲವೆ? ಅವಳೇನೂ ಬೇಕಾಗಿಲ್ಲ ಅವಳು ಹೇಳಬೇಕಾದದ್ದನ್ನೆಲ್ಲಾ ಕಾಗದದಲ್ಲಿ ಬರೆದಿದ್ದಾಳೆ. ಈಗ ಅವು ಎಷ್ಟರಮಟ್ಟಿಗೆ ನಿಜ ಅನ್ನುವುದನ್ನು ಪರೀಕ್ಷಿಸಬೇಕಾಗಿದೆ."

"ಸರಿಯಲ್ಲವೇ ಅಲ್ಲ; ಮುಕ್ಕಾಲೆಲ್ಲ ತಪ್ಪು. ಅದಿರಲಿ ನೀವು ಸದ್ಯದಲ್ಲಿಯೆ ವಿಲಾಯಿತಿಗೆ ಹೋಗುತ್ತೀರಂತೆ. ನಿಜವೆ ?

ಈ ಮನುಷ್ಯನು ತನ್ನ ವಿಷಯವಾಗಿ ಏನನ್ನೂ ಹೇಳಬಯಸುವುದಿಲ್ಲವೆಂದು ವಂದನ ಅರಿತಳು. ಹೆಚ್ಚು ಒತ್ತಾಯ ಪಡಿಸುವುದು ಚೆನ್ನಾಗಿ ಕಾಣುವುದಿಲ್ಲವಾದುದರಿಂದ ಅವಳು "ನಿಜ ನಮ್ಮ ತಂದೆ ಅದನ್ನ ಹೇಳುತ್ತಿದ್ದಾರೆ. ವಿದ್ಯಾಭ್ಯಾಸವನ್ನು ಅಲ್ಲಿ ಹೋಗಿ .ಪೂರೈಸಿಕೊಂಡು ಬರಬೇಕೆಂದು ಅವರ ಇಚ್ಛೆ ನೀವೂ ಏತಕ್ಕೆ ಹೊರಡಬಾರದು ?" ಎಂದು ಕೇಳಿದಳು. "ಹೊರಡಲು ನನ್ನದೇನೂ ಅಡ್ಡಿ ಇಲ್ಲ. ಆದರೆ ದುಡ್ಡು ಎಲ್ಲಿಂದ ಬರಬೇಕು ? ಅಲ್ಲಿ ಹುಡುಗರಿಗೆ ಪಾಠ ಹೇಳಿ ಜೀವಿಸುವುದು ಅಸಾಧ್ಯ. ಮತ್ತೆ ಇಷ್ಟು ದೊಡ್ಡ ಹೊರೆಯನ್ನು ಅತ್ತಿಗೆಯಮೇಲೆ ಹೊರಿಸುವುದು ಅಷ್ಟು ಚೆನ್ನಾಗಿರುವುದಿಲ್ಲ. ಆದುದರಿಂದ ಇದು ಆಗದ ಹೋಗದ ಮಾತು" ಎಂದು ದ್ವಿಜದಾಸನು ಉತ್ತರವಿತ್ತನು. ಅವನ ಈ ಮಾತನ್ನು ಕೇಳಿ ವಂದನ ನಕ್ಕಳು. "ದ್ವಿಜ ಬಾಬು, ಇದನ್ನು ನೀವು ಸಿಟ್ಟಿನಿಂದ ಹೇಳುತ್ತಿದ್ದೀರಿ ಇಲ್ಲದಿದ್ದರೆ ನಿಮ್ಮಲ್ಲಿರುವಷ್ಟು ದುಡ್ಡಿನಿಂದ, ನೀವು ಮಾತ್ರ ಅಲ್ಲ ಈ ಗ್ರಾಮದ ಅರ್ಧ ಪಾಲು ಜನರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಬಹುದು. ಹೋಗಲಿ, ದುಡ್ಡಿನ ವ್ಯವಸ್ಥೆ ನಾನು ಮಾಡುತ್ತೇನೆ. ನೀವು ಹೊರಡಲು ಸಿದ್ಧರಾಗಿ" ಎಂದು ಹೇಳಿದಳು.

ದ್ವಿಜ :—ವ್ಯವಸ್ಥೆಗಿವಸ್ಥೆ ಏನೂ ಸಾಧ್ಯವಿಲ್ಲ. ಹಣ ಬೇಕಾದಷ್ಟಿದೆ. ನಿಜ. ಅವೆಲ್ಲಾ ಅಣ್ಣನದು, ನನ್ನದಲ್ಲ. ಒಂದು ದೃಷ್ಟಿಯಿಂದ ನಾನು ಇಲ್ಲಿರುವುದು ಅವರ ದಯೆಯಿಂದಲೆ ಎಂದರೆ ಏನೂ ಅತ್ಯುಕ್ತಿಯಾಗಲಾರದು."

" ಅತ್ಯುಕ್ತಿಯಲ್ಲದಿದ್ದರೆ ಇನ್ನೇನಾಗಬಹುದು ?" ಎಂದು ಹೇಳಿ ವಂದನಾ ನಗಲು ಪ್ರಯತ್ನಿಸುತ್ತಾ "ಇರಲಿ ಅದು ನನಗೆ ಗೊತ್ತು. ಆದರೆ ಇದು ಸಿಟ್ಟಿನಿಂದ ಆಡಿದ ಮಾತು ತಾನೆ. ಸ್ವತಃ ಗಳಿಸದೆ ಇರುವ ಸಂಪತ್ತನ್ನು ಅನುಭವಿಸಲು ನೀವು ಒಪ್ಪುವುದಿಲ್ಲವೆಂದು ಅಕ್ಕ ಒಮ್ಮೆ ಬರೆದಿದ್ದಳು. ಏನು, ಇದು ನಿಜವೆ ?"

" ಒಂದು ವೇಳೆ ಅದು ನಿಜವಾಗಿದ್ದರೂ ಅದರಿಂದ ಅವಳ ಧರ್ಮ ಬುದ್ಧಿಯುು ಗೋಚರವಾಗುತ್ತದೆ. ಅದನ್ನು ಸಿಟ್ಟಿನ ಮಾತು ಎಂದು ಹೇಗೆ ಹೇಳುತ್ತೀರಿ. ಆದರೆ ಅದೊಂದೇ ಕಾರಣವಲ್ಲ."

" ಅದಕ್ಕೆ ಇನ್ನೇನು ಕಾರಣ ? ನಾನು ಕೇಳಬಹುದೊ ?

ದ್ವಿಜದಾಸನು ಮೌನವಾಗಿದ್ದನು. ವಂದನ ಅವನ ಮುಖದ ಕಡೆ ನೋಡುತಿದ್ದಳು. ಪುನಃ ಅವಳು ಮೆಲುದನಿಯಲ್ಲಿ ' ನನಗೆ ಸಹಜ ವಾಗಿ ಅಷ್ಟೇನೂ ಕುತೂಹಲವಿಲ್ಲ ; ಅದೂ ಅಲ್ಲದೆ ನನ್ನ ಈ ಆಗ್ರಹ ಲೋಕವಿರುದ್ಧವೆಂದೂ ಹೆಚ್ಚೆಂದೂ ನಾನು ಅರಿತಿದ್ದೇನೆ. ಆದರೆ ತಿಳುವ ಳಿಕೆ ಇದ್ದ ಮಾತ್ರಕ್ಕೆ ಈ ಲೋಕದ ಆಸೆಗಳೆಲ್ಲ ಬಯಲಾಗುವುದಿಲ್ಲವಲ್ಲ—ಅಭಾವವು ಯಾವಾಗಲೂ ತಲೆದೋರುತ್ತಿರುತ್ತದೆ. ನಿಮ್ಮ ವಿಷಯವಾಗಿ ನಾನು ಏನೇನೋ ಕೇಳಿದ್ದೇನೆ. ಮೊದಲು ನಿಮ್ಮನ್ನು ಕಂಡಾಗ ನೀವು ಅಪರಿಚಿತರಂತೆ ನನಗೆ ತೋರಲೇ ಇಲ್ಲ. ನಿಮ್ಮನ್ನು ಎಷ್ಟೋ ಸಲ ನೋಡಿದವಳಂತೆ ಗುರುತಿಸಿದೆ.---ಅಕ್ಕನಿಗೆ ಅಷ್ಟೆಲ್ಲ ಹೇಳಿದ್ದೀರಿ. ನನ್ನ ಮುಂದೆ ಹೇಳಬಾರದೊ? ಇನ್ನೇನಲ್ಲದಿದ್ದರೂ ಅವಳಂತೆ ನಾನು ಒಬ್ಬ ಆತ್ಮೀಯಳು ತಾನೆ."

ಈ ಮಾತುಗಳನ್ನು ಕೇಳಿ ದ್ವಿಜದಾಸನು ಬೆರಗಾದನು ; ಅಲ್ಲದೆ ಇದ್ದಕ್ಕಿದ್ದಂತೆ ಎಲ್ಲಾ ವಿಷಯಗಳೂ ಜ್ಞಾಪಕಕ್ಕೆ ಬರಲು ಅವನಿಗೆ ಸಂಕೋಚವಾಯಿತು ಮರುಕ್ಷಣದಲ್ಲಿ ಅವನ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ. ಅಪರಿಚಿತಳಾದ ಯುವತಿಯೊಡನೆ ಈ ರೀತಿ ಏಕಾಂತದಲ್ಲಿ ಮಾತನಾಡುವ ಸಂದರ್ಭ ಅವನಿಗೆ ಒದಗಿದ್ದು ಇದೇ ಮೊದಲು. ಗೋಡೆಯ ಮೇಲೆ ತಗಲುಹಾಕಿದ ಗಡಿಯಾರವನ್ನು ನೋಡಿದ. ಹೀಗೆ ಒಂದು ಗಂಟೆಗಿಂತ ಹೆಚ್ಚು ಕಾಲ ಕಳೆದು ಹೋಗಿದೆ. ಈ ಮಧ್ಯೆ ಯಾರಾದರೂ ಅವನನ್ನು ಹುಡುಕಿದ್ದರೆ ಅವರಿಗೆ ಏನು ಹೇಳಬೇಕು ? ಇದಕ್ಕೆ ಅವನಿಗೆ ಉತ್ತರ ಹೊಳೆಯಲಿಲ್ಲ. ಅಣ್ಣ ಮನೆಗೆ ಬಂದಿರಬಹುದು. ಅಮ್ಮನ ಪೂಜೆ

ಮುಗಿದಿರಬಹುದು—ಇವನ್ನೆಲ್ಲಾ ಯೋಚಿಸುತ್ತಿದ್ದ ಅವನ ಮನಸ್ಸು ಕಳವಳಗೊಂಡಿತು. ಅವನು ಮೆಟ್ಟಿಲ ಕಡೆಗೆ ಓಡಿದನು. ಏನು ಹೇಳ ಬೇಕೆಂದು ತೋಚದೆ ಪುನಃ ಬಂದು ಸುಮ್ಮನೆ ಕುಳಿತುಬಿಟ್ಟನು.

"ಏನೂ ಹೇಳಲೆ ಇಲ್ಲವಲ್ಲ ಹೇಳಿ" ಎಂದು ವಂದನ ಪುನಃ ಪ್ರಶ್ನಿಸಿದಳು.

ದ್ವಿಜದಾಸ ನಿದ್ರೆಯಿಂದ ಎಚ್ಚೆತ್ತವನಂತೆ ಚೇತರಿಸಿಕೊಂಡು "ಈ ವಿಷಯವಾಗಿ ಹೇಳಿದರೆ ಮೊದಲು ನಿಮಗೆ ಹೇಳಿದಂತೆ. ಇದನ್ನು ಅತ್ತಿಗೆಗೆ ಸಹ ಹೇಳಿಲ್ಲ." ಎಂದನು.

"ಅದನ್ನು ಅವಳು ನಿರ್ಣಯಿಸುತ್ತಾಳೆ. ನಾನು ಮಾತ್ರ ಕೇಳದೆ . . . . . "

ಹೇಳುವುದು ಸರಿಯಿಲ್ಲವೆಂದು ದ್ವಿಜದಾಸನಿಗೆ ಗೊತ್ತಿರದೆ ಇರಲಿಲ್ಲ. ಆದರೆ ಇವಳ ಅನುರೋಧವನ್ನು ಮೀರುವ ಸಾಮರ್ಥ್ಯ ಅವನಲ್ಲಿರಲಿಲ್ಲ.

ಒಂದೆರಡು ನಿಮಿಷಗಳು ಬುದ್ಧಿಶೂನ್ಯನಂತೆ ಸುಮ್ಮನಿದ್ದನು. ಅನಂತರ "ವಾಸ್ತವವಾಗಿ ನನ್ನ ತಂದೆ ನನಗೆ ಏನನ್ನೂ ಕೊಟ್ಟಿಲ್ಲ" ಎಂದು ಹೇಳಿದನು.

ವಂದನ ಬೆಚ್ಚಿಬಿದ್ದು "ಉಹೂಂ ಸುಳ್ಳಿರಬೇಕು, ಹಾಗೆಂದಿಗೂ ಇರಲಾರದು" ಎಂದು ಆಕ್ಷೇಪಿಸಿದಳು.

'ಹಾಗೇ ಆಗಿರುವುದು' ಎಂದು ತಲೆಯಾಡಿಸಿ ಪ್ರತ್ಯುತ್ತರ ವಿತ್ತನು.

"ಕಾರಣ ?"

"ನನಗೆ ಆಸ್ತಿ ಕೊಟ್ಟರೆ ಅದನ್ನು ಹಾಳುಮಾಡಿ ಬಿಡುತ್ತೇನೆಂಬ ಅನುಮಾನ ಅವರಿಗಿತ್ತು"

"ಅದಕ್ಕೆ ಏನಾದರೂ ಆಧಾರ ಬೇಕಲ್ಲ ?"

"ಇದೆ. ಆಧಾರವಿಲ್ಲದೆ ಏನು. ಒಮ್ಮೆ ನನ್ನನ್ನು ಉಳಿಸಲು ಬಹಳ ಹಣ ಖರ್ಚಾಗಿತ್ತು."

ಅಕ್ಕನ ಕಾಗದದಲ್ಲಿ ಈ ವಿಷಯವಾಗಿ ಏನೋ ಓದಿದಂತೆ ಇತ್ತು. ಆದುದರಿಂದ ಅವಳು "ಏನು ನಿಮ್ಮ ತಂದೆ ವುಯಿಲು ಬರೆದಿಟ್ಟಿದ್ದಾ ರೆಯೆ ?" ಎಂದು ಕೇಳಿದಳು.

“ ಈ ವಿಷಯ ನಮ್ಮ ಅಣ್ಣನಿಗೆ ಗೊತ್ತು—ಆದರೆ ಇಲ್ಲವೆಂದು ಹೇಳುತ್ತಾನೆ.”

ವಂದನ ನಿಟ್ಟುಸಿರು ಬಿಟ್ಟಳು. “ ಅಷ್ಟೇ ಒಳ್ಳೆಯದಾಯಿತು. ಎಲ್ಲೋ ವುಯಿಲು ಬರೆದಿಟ್ಟು ನಿಮಗೆ ಇಲ್ಲದಂತೆ ಮಾಡಿದ್ದಾರೆಂದು ತಿಳಿದಿದ್ದೆ ” ಎಂದಳು.

“ ಅವರಿಗೇನೋ ವುಯಿಲು ಬರೆದಿಡಬೇಕೆಂಬ ಇಚ್ಛೆ ಇತ್ತು. ಆದರೆ ಅಣ್ಣ ಅದಕ್ಕೆ ಒಪ್ಪಲಿಲ್ಲ.”

“ ಅಣ್ಣನೇ ಒಪ್ಪಲಿಲ್ಲವೆ ? ಆಶ್ಚರ್ಯ ”

ದ್ವಿಜದಾಸನು ನಗುತ್ತ ಹೇಳಿದನು ‘ ಅಣ್ಣನನ್ನು ಚೆನ್ನಾಗಿ ಅರಿತರೆ ಆಶ್ಚರ್ಯವಾಗುವುದಿಲ್ಲ. ಒಂದು ದಿನ ಸಾಯಂಕಾಲ ಇನ್ನೂ ಆಳುಗಳು ಆ ಕೋಣೆಯಲ್ಲಿ ದೀಪ ಹಚ್ಚಿಟ್ಟಿರಲಿಲ್ಲ. ನಾನು ಪಕ್ಕದ ಕೋಣೆಯಲ್ಲಿ ಒಂದು ಪುಸ್ತಕ ಹುಡುಕುತ್ತಿದ್ದೆ. ಅಷ್ಟರಲ್ಲಿ ತಂದೆಯುವರ ಮಾತು ಕೇಳಿಸಿತು. ಅಣ್ಣ ‘ ಬೇಡ ’ ಎಂದ. ತಂದೆಯುವರು ಒತ್ತಾಯಪಡಿಸುವವರಂತೆ ‘ ಏಕೆ ವಿಪ್ರದಾಸ್ ? ನಾನು ನನ್ನ ಪಿತ್ರಾರ್ಜಿತ ಸಂಪತ್ತನ್ನು ನಷ್ಟಕ್ಕೀಡು ಮಾಡಲಾರೆ. ಪರಲೋಕದಲ್ಲಿ ನನಗೆ ಆದರಿಂದ ಶಾಂತಿ ದೊರೆಯಲಾರದು ” ಎಂದರು. ಅಷ್ಟಾದರೂ ಅಣ್ಣ “ ಬೇಡ, ಹಾಗೆಂದಿಗೂ ಆಗುವುದಿಲ್ಲ ” ಎಂದು ಹೇಳಿದ. ‘ ಆದರೂ ನಿನ್ನ ಕೈಗೆ ಕೊಟ್ಟು ಹೋಗುತ್ತೇನೆ. ಸರಿಯೆಂದು ತೋರಿದರೆ ಕೊಡು ಇಲ್ಲವಾದರೆ ಬಿಡು. ’ ಎಂದು ತಂದೆಯು ಹೇಳಿದರು. ಇದಾದ ಮೇಲೆ ಇನ್ನೂ ಎರಡು ವರುಷಗಳ ಕಾಲ ಅವರು ಬದುಕಿದ್ದರು ; ಆದರೆ ಈ ವಿಷಯದಲ್ಲಿ ಅವರ ಭಾವನೆ ಬದಲಾಗಲಿಲ್ಲ.”

“ ಇದು ಬೇರೆಯಾರಿಗಾದರೂ ಗೊತ್ತೆ ?” ಎಂದು ಮೃದುವಾಗಿ ವಂದನಾ ಕೇಳಿದಳು.

“ ಬೇರೆ ಯಾರಿಗೂ ಗೊತ್ತಿಲ್ಲ. ನನಗೆ ಮಾತ್ರ ಗೊತ್ತು. ಅದೂ ನಾನು ಮರೆಯಲ್ಲಿ ನಿಂತು ಕೇಳಿದ್ದರಿಂದ ”

ವಂದನ ಕೊಂಚಕಾಲ ಮೌನವಾಗಿದ್ದು ಕೊನೆಗೆ ಅಸ್ಫುಟ ಸ್ವರದಲ್ಲಿ ‘ ನಿಜವಾಗಿಯೂ ನಿಮ್ಮಣ್ಣ ಅಸಾಧಾರಣ ವ್ಯಕ್ತಿ ’ ಎಂದು ಉಸುರಿದಳು.

ದ್ವಿಜದಾಸನು ಏನೊಂದೂ ಉದ್ರೇಕವಿಲ್ಲದಂತೆ “ ತಾವು ಇಲ್ಲೇ ಕುಳಿತಿರಿ. ನನಗೆ ಬಹಳ ಹೊತ್ತಾಯಿತು. ಆದುದರಿಂದ ನಾನು ಕೆಳಕ್ಕೆ

ಹೋಗುತ್ತೇನೆ. ನಿಮಗೆ ಕರೆ ಬರುವವರೆಗೂ ಇಲ್ಲಿ ಪುಸ್ತಕವನ್ನು ಓದು ತ್ತಿರಿ '' ಎಂದು ಹೇಳಿದ. ಅದಕ್ಕೆ ವಂದನ ನಕ್ಕು ಈ ಹೊತ್ತಿನಲ್ಲಿ ಪುಸ್ತಕ ಓದಲು ನನಗೆ ಸಾಧ್ಯವಿಲ್ಲ. ನಡೆಯಿರಿ. ನಾನೂ ಬರುತ್ತೇನೆ. ಏನಿಲ್ಲ ಎಂದರೂ ಏಳೆಂಟು ದಿನ ಇರುತ್ತೇನಲ್ಲ. ಓದಲು ಬೇಕಾದಷ್ಟು ಅವಕಾಶವಿದೆ" ಎಂದು ಜವಾಬು ಕೊಟ್ಟಳು. ದ್ವಿಜದಾಸನು ಹೊರಟು ನಿಂತಿದ್ದ. ಆದರೆ ಈ ಉತ್ತರವನ್ನು ಕೇಳಿ ಬೆರಗಾಗಿ ನಿಂತ. ಏನು ನೀವು ತಂದೆಯೊಡನೆ ಕಲ್ಕತ್ತೆಗೆ ಹೋಗುವುದಿಲ್ಲವೇನು ? ' ಎಂದು ಕೇಳಿದ.

' ಇಲ್ಲ. ಅವರು ಕಲ್ಕತ್ತೆಯಿಂದ ಹಿಂತಿರುಗುವಾಗ ನಾನು ಅವರ ಸಂಗಡ ಬೊಂಬಾಯಿಗೆ ಹೋಗುತ್ತೇನೆ.'

ಅವರು ಬೇಕಾದರೆ ವಾಪಸು ಹೋಗಲಿ. " ಆದರೆ ನೀವು ಇಲ್ಲಿ ಕೆಲವು ದಿನಗಳ ಮಟ್ಟಿಗಾದರೂ ಇರಿ.''

" ಮೊದಲು ಹಾಗೆಯೆ ಯೋಚಿಸಿದ್ದೆ. ಈಗ ಅದರಿಂದ ಬಹಳ ತೊಂದರೆ ಎಂತ ಕಾಣುತ್ತೆ. ನನ್ನನ್ನು ಹಿಂತಿರುಗಿ ಕರೆದುಕೊಂಡು ಹೋಗಿ ಬಿಡುವವರು ಯಾರೂ ಇಲ್ಲ. ನೀವು ಅದಕ್ಕೆ ಒಪ್ಪಿದರೆ ನಿಮ್ಮಂತೆ ಆಗಲಿ.''

" ಆದರೆ ನಾನು ಆ ಸಮಯಕ್ಕೆ ಇಲ್ಲಿರುವುದಿಲ್ಲವಲ್ಲ. ನಾನು ನಾಳೆ ಸೋಮವಾರ ತಾಯಿಯನ್ನು ಕೈಲಾಸಯಾತ್ರೆಗೆ ಕರೆದುಕೊಂಡು ಹೋಗ ಬೇಕಾಗಿದೆ.''

ವಂದನೆಯ ಕಣ್ಣುಗಳು ಆನಂದ ಮತ್ತು ಉತ್ಸಾಹದಿಂದ ಹೊಳೆ ಯುತ್ತಿದ್ದುವು. ಅವಳು ಹೇಳಿದಳು '' ಕೈಲಾಸ ! ಕೈಲಾಸಕ್ಕೆ ಹೋಗುತ್ತೀರಾ ? ಪ್ರಪಂಚದ ಆಶ್ಚರ್ಯಗಳಲ್ಲಿ ಅದೂ ಒಂದಂತೆ. ನಿಮ್ಮೊಡನೆ ಮತ್ತೆ ಯಾರು ಹೊರಡುತ್ತಾರೆ."

'' ಸರಿಯಾಗಿ ಗೊತ್ತಿಲ್ಲ. ಆದರೆ ಇನ್ನೂ ಕೆಲವರು ಹೊರಡ ಬಹುದು ''

'' ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗಿ. ಸಾಧ್ಯವೆ ?"

ದ್ವಿಜದಾಸ ಮಾತನಾಡಲಿಲ್ಲ. ಅಭಿಮಾನಕ್ಕೆ ಧಕ್ಕೆ ತಗುಲಿದಂತಾದ ಕಾರಣ ವಂದನೆಗೆ ಬಹಳ ದುಃಖವಾಯಿತು. ಆದರೂ ಅವಳು ನಗಲು ಯತ್ನಿಸುತ್ತಾ '' ಏನು ಇದಕ್ಕಾಗಿಯೇ ನನ್ನನ್ನು ಕರೆಯಿಸಿದ್ದೀರೋ

ಆಗ ನಾನು ಇಲ್ಲಿರಬೇಕೆಂದು ನಿಮ್ಮ ಅಭಿಪ್ರಾಯವೊ ?" ಎಂದು ಕೇಳಿದಳು.

ದ್ವಿಜದಾಸನು ಅವಳ ಮುಖದಕಡೆ ನೋಡುತ್ತಾ ಶಾಂತ ಭಾವದಿಂದ ಉತ್ತರವಿತ್ತನು. "ನಿಜ. ಅದೇ ನನ್ನ ಅಭಿಮತ. ಇಷ್ಟೆಲಾ ಬರೆದ ಅತ್ತಿಗೆ ನಮ್ಮದು ಶುದ್ಧ ಹಿಂದೂಪರಿವಾರವೆಂದು ಬರೆಯಲಿಲ್ಲವೆ ? ಮಡಿ-ಮೈಲಿಗೆ, ಆಚಾರ-ವಿಚಾರ ಇವುಗಳ ಕಠೋರತೆಯ ವಿಷಯವಾಗಿ ನಿಮಗೆ ಏನೊಂದೂ ತಿಳಿಸಿಲ್ಲವೇ ?

ವಂದನ ತಲೆಯಲ್ಲಾಡಿಸಿ ಇಲ್ಲವೆಂದು ಸೂಚಿಸಿದಳು. "ಆಶ್ಚರ್ಯ" ಎಂದು ಮಾತನ್ನು ಮುಂದುವರಿಸಿದನು. "ಈ ಮನೆಯಲ್ಲಿ ನನ್ನನ್ನು ಬಿಟ್ಟರೆ ಬೇರೆ ಯಾರೂ ನೀವು ಮುಟ್ಟಿದ ನೀರನ್ನು ಸಹ ಕುಡಿಯಲಾರರು"

"ನಿಮ್ಮ ಅಣ್ಣ ?"

"ಉಹ್ಞೂಂ"

"ಅಕ್ಕ ?"

"ಅವಳೂ ಇಲ್ಲ. ನಾವು ಹೊರಟು ಹೋದಮೇಲೆ ನೀವು ನಾಲ್ಕಾರು ದಿನಗಳು ಇದ್ದರೂ ಇರಬಹುದು. ಆದರೆ ನಮ್ಮ ತಾಯಿ ಇರುವವರೆಗೆ ಒಂದು ದಿನಕ್ಕೆ ನೀವು ಈ ಮನೆಯಲ್ಲಿರುವುದು ಅಸಾಧ್ಯ"

ವಂದನಳ ಮುಖ ಕಳೆಗುಂದಿತು. "ನೀವು ಹೇಳುವುದು ನಿಜವೆ?" ಎಂದು ಪ್ರಶ್ನಿಸಿದಳು.

"ನಿಜ"

ಈ ಹೊತ್ತಿಗೆ ಸರಿಯಾಗಿ ಮೆಟ್ಟಿಲ ಹತ್ತಿರ ನಿಂತು "ಲಾಲ ! ವಂದನ ! ಏನು ಮಾಡುತ್ತಿದ್ದೀರಿ" ಎಂದು ಸತಿ ಕೂಗಿದಳು.

"ಇಗೋ ಬಂದೆ ಅತ್ತಿಗೆ" ಎಂದು ದ್ವಿಜದಾಸ ವೇಗವಾಗಿ ಹೆಜ್ಜೆ ಇಡುತ್ತಿರಲು "ಹೀಗೊ, ನನಗೊಂದೂ ಗೊತ್ತಿರಲಿಲ್ಲ. ಧನ್ಯವಾದಗಳು" ಎಂದು ಮೆಲ್ಲನೆ ಅಂದಳು ವಂದನ. ಅವಳ ಮುಖದ ಕಾಂತಿ ಇಳಿದು ಹೋಗಿತ್ತು.

೬

ವಂದನ ಕೆಳಗಿಳಿದು ಬಂದಾಗ ಅವಳ ತಂದೆ ಸುಖವಾಗಿ ಊಟ ಮಾಡುತ್ತಿದ್ದರು. ಅದೇ ಬ್ರೈಕ್‌ಖಾನೆಯಲ್ಲಿ ಒಂದು ಸಣ್ಣ ಮೇಜಿನ

ಮೇಲೆ ಬೆಳ್ಳಿಯ ಹರಿವಾಣದಲ್ಲಿ ಬಡಿಸಿದ್ದರು. ಪಕ್ಕದಲ್ಲಿ ದೀರ್ಘಾಕೃತಿಯ ವ್ಯಕ್ತಿಯೊಬ್ಬನು ನಿಂತಿದ್ದನು. ಅವನ ಅಂಗಕಾಂತಿ, ಬಿಳಿಯ ಬಣ್ಣ, ಮತ್ತು ಸುಂದರವಾದ ಮೈಕಟ್ಟು ಇವುಗಳನ್ನು ನೋಡಿ ವಂದನ ಅವನನ್ನು ವಿಪ್ರದಾಸನೆಂದು ಗುರಿತಿಸಿದಳು. ಅವಳ ಸಂಗಡ ಸತಿ ಬಂದಿದ್ದಳು. ಆದರೆ ಅವಳು ಒಳಕ್ಕೆ ಹೋಗದೆ ಬಾಗಿಲಿನ ಮರೆಯಲ್ಲಿ ನಿಂತು ನಮಸ್ಕರಿಸುವಂತೆ ಸನ್ನೆ ಮಾಡಿ ಅವರು ಯಾರೆಂಬುದನ್ನು ಸೂಚಿಸಿದಳು.

ಭಾರತೀಯ ಮಹಿಳೆಗೆ ಇದನ್ನು ಹೇಳುವ ಅವಶ್ಯಕತೆ ಇರಲಿಲ್ಲ. ಮೊದಲು ಅವಳು ದಯಾಮಯಿಗೆ ನಮಸ್ಕರಿಸಿದಂತೆ ಭಾವನಿಗೂ ನಮಸ್ಕರಿಸುತ್ತಿದ್ದಳು. ಆದರೆ ಏಕೆ ಅವಳ ಮನಸ್ಸು ವಿದ್ರೋಹಕ್ಕೆ ನಿಶ್ಚಯಿಸಿತು ? ವಿಪ್ರದಾಸನ ಅದ್ವಿತೀಯ ಪಾಂಡಿತ್ಯ ಮತ್ತು ಪ್ರತಿಭೆಯ ಅರಿವು ಅವಳಿಗಿರದಿದ್ದರೆ ಬಹುಶ ಈ ಪ್ರಚಲಿತ ಶಿಷ್ಟಾಚಾರವನ್ನು ಉಲ್ಲಂಘಿಸುತ್ತಿರಲಿಲ್ಲ. ಆದರೆ ಆ ಪರಿಚಯವೆ ಅವಳನ್ನು ಕಠೋರವಾಗಿ ಮಾಡಿತು. ಅಕ್ಕನ ಮರ್ಯಾದೆಯನ್ನುಳಿಸುವುದಕ್ಕೋಸ್ಕರ ಅವಳು ಕೈಮುಗಿದರೂ ಆದರಲ್ಲಿ ಅಸಡ್ಡೆ ಎದ್ದು ತೋರುತ್ತಿತ್ತು. ಅವಳು ತಂದೆಯೊಡನೆ ಮಾತನ್ನು ಪ್ರಾರಂಭಿಸಿದಳು "ಏನು ಒಬ್ಬರೆ ಊಟಕ್ಕೆ ಕುಳಿತುಬಿಟ್ಟಿರಿ ನನ್ನನ್ನೇಕೆ ಕರೆಯಲಿಲ್ಲ ?"

ಅವರು ಮುಖವನ್ನೆತ್ತಿ ಉತ್ತರವಿತ್ತರು, "ನನಗೆ ರೈಲಿಗೆ ಹೊತ್ತಾಯಿತು. ನಿನಗೇನು ಅವಸರ. ನಾನು ಹೊರಟುಹೋದಮೇಲೆ ನೀವೆಲ್ಲ ಸುಖವಾಗಿ ನಿಧಾನವಾಗಿ ಊಟಮಾಡಬಹುದು."

ಸತಿಯು ಮರೆಯಲ್ಲಿ ನಿಂತೇ ಅದನ್ನು ಅನುಮೋದಿಸಿದಳು. ವಂದನ ಅವಳನ್ನು ಉದ್ದೇಶಿಸಿ "ಅಕ್ಕ ಇಷ್ಟು ಬೆಲೆ ಬಾಳುವ ಬೆಳ್ಳಿಯ ಪಾತ್ರೆಗಳನ್ನೇಕೆ ಹಾಳು ಮಾಡಿದೆ ? ಇವರಿಗೆ ಎನಾಮಲ್ ಪಾತ್ರೆಗಳಲ್ಲೇ ಬಡಿಸಿದ್ದರೆ ಸಾಕಾಗಿತ್ತು." ಎಂದಳು.

ಅವಳ ತಂದೆಯು ಅಗಿಯುತ್ತಿರುವುದನ್ನು ನಿಲ್ಲಿಸಿದರು. ಸರಳ ಸ್ವಭಾವದವರಾದ ಕಾರಣ ಮಗಳ ಈ ಕೊಂಕು ಅವರಿಗೆ ಅರ್ಥವಾಗಲಿಲ್ಲ. ಅವರಿಗೆ ಏನೋ ಒಂದು ವಿಧವಾದ ಕಳವಳವೂ ನಾಚಿಕೆಯೂ ಆಯಿತು. ತಾನು ಇದನ್ನು ಮೊದಲು ಹೇಳದೆ ತಪ್ಪು ಮಾಡಿದೆನೆಂದು ಅವರು ಭಾವಿಸಿ ಹೇಳಿದರು, 'ನಿಜ ನಿಜ. ಇದನ್ನು ನಾನು ಯೋಚಿಸಲೇ ಇಲ್ಲ. ಸತೀ ! ಬಾ ಇಲ್ಲಿ. ಅಲ್ಲ ನನಗೆ ಗಾಜಿನ ತಟ್ಟೆಯಲ್ಲೇ ಊಟ ಕೊಟ್ಟಿದ್ದರೂ

ಸಾಕಾಗಿತ್ತು. ಈ . . . . ಈ, . . . . , ಅ್ಹ ಅ್ಹ” ಎಂದು.

ವಿಪ್ರದಾಸನ ಮುಖ ಸಿಟ್ಟಿನಿಂದ ಗಂಭೀರವಾಯಿತು.

ಹೊಸದಾಗಿ ಈಗ ತಾನೆ ಬಂದಿರುವ ಈ ಯುವತಿಯಂತೆ ಇದು ವರೆಗೆ ಯಾರೂ ಅವನನ್ನು ಅಪಮಾನ ಮಾಡಿರಲಿಲ್ಲ. ಪಾತ್ರೆಗಳು ಹಾಳಾಗುವುವೆಂಬ ದುರ್ಭಾವನೆ ಕೇವಲ ನೆಪಮಾತ್ರ. ಈ ನಿರ್ಲಜ್ಜ ವ್ಯಂಗ್ಯದ ಮಾತನ್ನು ನಿಜವಾಗಿಯೂ ಆಚಾರನಿಷ್ಠಪರಿವಾರದವರನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಆಡಿದ್ದಿರಬೇಕು. ಆದರೆ ಈ ದುರಭಿಪ್ರಾಯ ವನ್ನು ಅವಳ ಮನಸ್ಸಿನಲ್ಲಿ ತುಂಬಿದವರಾರು ? ಇದು ವಿಪ್ರದಾಸ ನಿಗೆ ಅರ್ಥವಾಗಲಿಲ್ಲ. ಯಾರೇ ಹಚ್ಚಿಕೊಟ್ಟಿರಲಿ ಈ ವೃದ್ಧರನ್ನು ಉಪ ಲಕ್ಷವಾಗಿಟ್ಟುಕೊಂಡ ಜಘನ್ಯ ಮನೋಭಾವವನ್ನು ನೋಡಿ ವಿಪ್ರದಾಸ ನಿಗೆ ಅವಳ ವಿಷಯದಲ್ಲಿ ಸ್ವಲ್ಪ ಜಿಗುಪ್ಸೆಯುಂಟಾಯಿತು. ಆದರೆ ಅವನು ಆ ಭಾವವನ್ನು ಮರೆಮಾಚಿ, ಪ್ರಯತ್ನಪೂರ್ವಕವಾಗಿ ನಕ್ಕು “ ಇದು ಪಕ್ಕಾ ಹಿಂದೂಗಳ ಮನೆ ಎಂದು ಅಕ್ಕ ನಿನಗೆ ತಿಳಿಸಿಲ್ಲವೆ ? ಎನಾಮಲ್ ಅಥವಾ ಚೈನಾಪಾತ್ರೆಗಳು ಮನೆಯ ಒಳಗೆ ಬಂದಾವೆ ? ಏನು ಇದು ನಿನಗೆ ತಿಳಿಯದೂ ? ” ಎಂದು ಹೇಳಿದನು.

ವಂಧನ –“ ಆದರೆ ಇಷ್ಟು ಬೆಲೆ ಬಾಳುವ ಪಾತ್ರೆಗಳು ಹಾಳಾದು ವಲ್ಲ ”

ಇದನ್ನು ಕೇಳಿ ಅವಳ ತಂದೆಯ ಮನಸ್ಸಿಗೆ ವ್ಯಾಕುಲವಾಯಿತು. “ ಆದರೆ ತುಪ್ಪ ಚಿಮುಕಿಸಿ ಬೆಂಕಿಯಲ್ಲಿ ಸ್ವಲ್ಪ ಸುಟ್ಟರೆ ಪುನಃ . . . .” ಎನ್ನುತ್ತಿದ್ದರು.

ವಿಪ್ರದಾಸನು ಆಕಡೆ ಅಷ್ಟು ಲಕ್ಷ್ಯಕೊಡಲಿಲ್ಲ. ಮೊದಲಿನಂತೆ ವಂದನಳನ್ನುದ್ದೇಶಿಸಿಯೆ ಮಾತನ್ನು ಮುಂದುವರಿಸಿದನು.

“ ಈ ಮನೆಯಲ್ಲಿ ಬೆಳ್ಳಿಯ ಪಾತ್ರೆಗಳಿಗೇನೂ ಕಡಿಮೆ ಇಲ್ಲ. ಅಲ್ಲದೆ ಅವು ವಿಶೇಷ ಕೆಲಸಗಳಿಗೆ ಮಾತ್ರ ಬರುವುದಿಲ್ಲ ಅಷ್ಟೆ. ಮತ್ತೆ ನಿಮ್ಮ ತಂದೆ ಸಂಬಂಧದಲ್ಲಿ ದೊಡ್ಡವರು. ಈ ಮನೆಯ ಮಾನ್ಯ ಅತಿಥಿ. ಬೆಳ್ಳಿಯ ಪಾತ್ರೆಗಳ ಬೆಲೆ ಎಷ್ಟೇ ಹೆಚ್ಚಾಗಿರಲಿ ಇವರ ಘನತೆಗೆ ಹೋಲಿಸಿದರೆ ಅದು ಅತಿ ತುಚ್ಛ....ನೀವು ಬಂದುದರಿಂದ ನಾಲ್ಕಾರು ಪಾತ್ರೆಗಳು ನಷ್ಟ ವಾದರೂ ನಷ್ಟವಾಗಲಿ ಬಿಡು.” ಎಂದು ಹೇಳಿ ತುಸು ನಕ್ಕನು....“ ನಿನ್ನ ಅಕ್ಕನಂತೆ ನಿನಗೂ ಒಳ್ಳೆ ಆಚಾರನಿಷ್ಠರ ಮನೆಯಲ್ಲಿ ಮದುವೆ ಆದರೆ ಆಗ

ನೀನು ನಿನ್ನ ತಂದೆಗೆ ಮಣ್ಣಿನ ತಟ್ಟೆಯಲ್ಲಿಯೆ ಬಡಿಸು; ಅದನ್ನು ಬಿಸಾಡಿದರೆ ಯಾರ ಕಣ್ಣೂ ಕೆಂಪಾಗುವುದಿಲ್ಲ ವಂದನ, ಸರಿತಾನೆ ನಾನು ಹೇಳಿದ್ದು."

"ಎಂದಿಗೂ ಇಲ್ಲ. ನಾನು ತಂದೆಗೆ ಅಂತ ಭಂಗಾರದ ಹರಿವಾಣ ವನ್ನು ಮಾಡಿಸಿ ಇಡುತ್ತೇನೆ."

ವಿಪ್ರದಾಸನು ನಕ್ಕು ಹೇಳಿದನು "ಅದೆಂದಿಗೂ ಸಾಧ್ಯವಿಲ್ಲ. ಅಂಥಾದ್ದು ಮಾಡಿಸಿ ಇಡುವವಳ ಬಾಯಲ್ಲಿ ತಂದೆಯನ್ನು ಉಪಲಕ್ಷ್ಯ ವಾಗಿಟ್ಟುಕೊಂಡು ಆಡಿದ ಇಂಥಾ ತುಚ್ಛ ಮಾತುಗಳು ಬರುತ್ತಿರಲಿಲ್ಲ ಏಕೆ ಮತ್ತೆ ಯಾರಿಗಾದರೂ ಅಪಮಾನ ಮಾಡಬೇಕೆಂದು ಎಣಿಸಿದ್ದರೂ ಸಹ ಬರುತ್ತಿರಲಿಲ್ಲ. ನೀನು ನಿನ್ನ ತಂದೆಯನ್ನು ಎಷ್ಟು ಪ್ರೀತಿಸು ತ್ತೀಯೊ ಅದಕ್ಕಿಂತ ಎಷ್ಟೋ ಪಾಲು ಹೆಚ್ಚಾಗಿ ತನ್ನ ಕಕ್ಕನನ್ನು ಪ್ರೀತಿಸುವವಳೊಬ್ಬಳಿದ್ದಾಳೆ ಎಂಬುದು ನೆನಪಿನಲ್ಲಿರಲಿ."

ಇದನ್ನು ಕೇಳಿ ಆ ಮುದುಕರ ಮನಸ್ಸಿನಲ್ಲಿದ್ದ ಹೊರೆ ಇಳಿದುದು ಮಾತ್ರವಲ್ಲ. ಅವರ ಹೃದಯವು ಆನಂದದ ಕಡಲಾಯಿತು. "ನೀನು ಹೇಳುವುದು ಸರಿ, ಮಗು, ಹದಿನಾರಾಣೆ ಸತ್ಯ" ಎಂದು ಪ್ರಾರಂಭಿಸಿದರು ಅವರು. "ಅಕಸ್ಮಾತ್ತಾಗಿ ನನ್ನ ಅಣ್ಣ ಸತ್ತುಹೋದ. ಆಗ ಸತಿ ಇನ್ನೂ ಸಣ್ಣ ಹುಡುಗಿ. ನಾನೋ ಪರದೇಶದಲ್ಲಿ ನೌಕರಿ ಮಾಡುತ್ತಿದ್ದೆ. ಮನೆಗೆ ಹಿಂತಿರುಗಲು ಆಗುತ್ತಲೇ ಇರಲಿಲ್ಲ. ಒಂದುವೇಳೆ ಬಂದರೂ ಸಮಾಜದ ಕಟ್ಟಪ್ಪಣೆಯಂತೆ ಒಬ್ಬಂಟಿಗನಾಗಿರಬೇಕಾಗಿತ್ತು. ಆದರೆ ಅವಕಾಶಸಿಕ್ಕರೆ ಸಾಕು ಸತಿ ನನ್ನ ಹತ್ತಿರ ಓಡಿಬರುತ್ತಿದ್ದಳು........

ಅಷ್ಟರಲ್ಲಿ ವಂದನ ಆ ಮಾತನ್ನು ಅಲ್ಲಿಯೆ ನಿಲ್ಲಿಸುವುದಕ್ಕೋಸ್ಕರ "ಹೋಗಲಿ. ಈಗ್ಗೆ ಆ ಮಾತು ಸಾಕು" ಎಂದಳು.

"ಇಲ್ಲ-ಇಲ್ಲ. ನನಗೆ ಎಲ್ಲವೂ ಜ್ಞಾಪಕವಿದೆ.— ಏನು ಸುಳ್ಳು ಅಂತ ತಿಳಿದೆಯಾ, ಎಂದಿಗೂ ಇಲ್ಲ. ಒಂದು ದಿನ ನನ್ನ ತಟ್ಟೆಯಲ್ಲೇ ಊಟಮಾಡಲು ಕುಳಿತುಬಿಟ್ಟಳು—ಅವಳ ಅಮ್ಮ ಇದನ್ನು ನೋಡಿ....

"ಅಯ್ಯೊ, ನೀನು ಬಾಯಿಗೆ ಬಂದದ್ದನ್ನು ಹೇಳುತ್ತಿದ್ದೀಯ ಅಪ್ಪ ಗೊತ್ತಿಲ್ಲ ಗುರಿ ಇಲ್ಲ. ಅಕ್ಕ ಯಾವಾಗ ನಿನ್ನ ಜೊತೆಯಲ್ಲಿ ನನಗೆ ಏನೂ ಜ್ಞಾಪಕ ಇಲ್ಲ."

ಅವಳ ತಂದೆಯು ತಲೆ ಎತ್ತಿ ಪ್ರತ್ಯುತ್ತರವನ್ನು ಕೊಟ್ಟರು :—

"ವ್ಹಾ, ಜ್ಞಾಪಕ ಏಕಿಲ್ಲ? ಎಲ್ಲಿ ಈ ಘಟನೆ ಎಲ್ಲರಿಗೂ ತಿಳಿದು

ಏನು ಅನರ್ಥಕ್ಕೇ ಕಾರಣವಾಗುತ್ತೊ ಎಂದು ನಿನ್ನ ಅಮ್ಮ ಹೇಗೆ ಹೆದರಿ ಹೆದರಿ ”

ವಂದನ ಪುನಃ ಅದನ್ನು ಅಷ್ಟಕ್ಕೆ ನಿಲ್ಲಿಸಬೇಕೆಂದು “ಅಪ್ಪ, ನಿಜವಾಗಿಯೂ ನಿನಗೆ ಇವತ್ತು ರೈಲು ತಪ್ಪಿಹೋಗುತ್ತೆ. ಎಷ್ಟು ಗಂಟೆ ಹೊಡೀತು ಗೊತ್ತೆ?” ಎಂದಳು.

ಅವರು ಜೇಬಿನಿಂದ ಗಡಿಯಾರವನ್ನು ತೆಗೆದು ನೋಡಿ, ನಿಶ್ಚಿಂತೆಯ ನಿಟ್ಟುಸಿರು ಬಿಡುತ್ತ ‘ ನೀನೂ ಸರಿ ಏನು ಹೆದರಿಸಿ ಕಂಗಾಲು ಮಾಡುತ್ತೀಯ. ಇನ್ನೂ ಬೇಕಾದಷ್ಟು ಹೊತ್ತಿದೆ. ಸುಖವಾಗಿ ರೈಲು ಸಿಗುತ್ತೆ” ಎಂದರು.

ವಿಪ್ರದಾಸನು ನಗುತ್ತಾ ಅವರನ್ನು ಸಮರ್ಥಿಸಿ ಮಾತನಾಡಿದನು–‘ ನಿಜ, ಇನ್ನೂ ರೈಲಿಗೆ ಬೇಕಾದಷ್ಟು ಹೊತ್ತಿದೆ. ನೀವು ಸಾವಕಾಶವಾಗಿ ಊಟಮಾಡಿ. ನಿಮ್ಮನ್ನು ನಾನು ರೈಲಿಗೆ ಕರೆದುಕೊಂಡು ಹೋಗಿ ಬಿಡುತ್ತೇನೆ.” ಇಷ್ಟು ಹೇಳಿ ವಿಪ್ರದಾಸನು ಕೋಣೆಯಿಂದ ಹೊರಟು ಹೋದನು.

ಬಾಗಿಲ ಮರೆಯಲ್ಲಿದ್ದ ಸತಿ ಹೊರಟು ಬಂದು ಅವಳ ಹತ್ತಿರ ನಿಂತ ಕೂಡಲೆ ವಂದನ “ಅಕ್ಕ ಕೇಳಿದೆಯಾ? ಈಗ ಏನು ಅನರ್ಥ ಮಾಡಿಬಿಟ್ಟ ಅಪ್ಪ. ತಿಳಿಯಿತೆ?'' ಎಂದು ಮೃದು ಕಂಠದಿಂದ ಕೇಳಿದಳು.

ಸತಿಯು––‘ ಕೇಳಿದೆ ’ ಎಂದು ಮೌನವಾಗಿ ಉತ್ತರ ಕೊಟ್ಟಳು.

ವಂದನ–“ಎಲ್ಲಾದರೂ ಈ ಸಂಗತಿ ನಿನ್ನ ಅತ್ತೆಯ ಕಿವಿಗೆ ಬಿದ್ದರೆ ನಿನಗೆ ಬಹಳ ಕಷ್ಟಕ್ಕೆ ಕಾರಣವಾಗುತ್ತೆ. ಅಲ್ಲವೆ ಅಕ್ಕ?''

ವಂದನ––“ ಕಷ್ಟ ಬಂದರೆ ಬರಲೀಳು. ಸುಮ್ಮನೆ ಇರು ಈಗ. ಕಕ್ಕನಿಗೆ ಕೇಳಿಸುತ್ತದೆ.''

“ ಆದರೆ ನಿನ್ನ ಗಂಡ––ಅವರಂತೂ ಕಿವಿಯಲ್ಲಿ ಎಲ್ಲವನ್ನೂ ಕೇಳಿದ್ದರೆ–ಬಹುಶಃ ಅವರೂ ಈ ಅಪರಾಧವನ್ನು ಕ್ಷಮಿಸಲಾರರು. ಅಲ್ಲವೆ?”

ಸತಿಯು ನಕ್ಕು ನುಡಿದಳು –“ನಿಜವಾಗಿಯೂ ಅಪರಾಧವಾಗಿದ್ದರೆ ನಾನೇಕೆ ಕ್ಷಮೆಬೇಡಲಿ. ಆ ಭಾರವನ್ನು ಅವರ ಮೇಲೆ ಹಾಕಿ ನಾನು ನಿಶ್ಚಿಂತೆಯಿಂದ ಇದ್ದೇನೆ. ನೀನು ಇಲ್ಲೇ ಇದ್ದರೆ ಕಣ್ಣಾರೆ ನೋಡುತ್ತೀಯಲ್ಲ. ಕಕ್ಕ ನಿಮಗೆ ಏನು ತರಲಿ?''

“ ಸಾಕು, ಸಾಕು. ನನ್ನ ಊಟ ಆಗಿಹೋಯಿತು. ಇನ್ನು

ಏನೂ ಬೇಕಾಗಿಲ್ಲ.'' ಎಂದು ಹೇಳಿ ಅವರು ಎದ್ದುಬಿಟ್ಟರು.

ಸ್ಟೇಷನ್ನಿಗೆ ಹೊರಡುವ ಹೊತ್ತಾಯಿತು. ಕೆಳಗಡೆ ಪೆಡ್ಡಿನಲ್ಲಿ ಕಾರು ಸಿದ್ಧವಾಗಿ ನಿಂತಿದೆ. ಇನ್ನೊಂದರ ಮೇಲೆ ಹಾಸಿಗೆ ಗಂಟು ಮೂಟೆ ಎಲ್ಲ ಹೇರಿದ್ದಾರೆ. ವಂದನೆಯ ತಂದೆ ಮತ್ತು ವಿಪ್ರದಾಸ ಇಬ್ಬರೂ ಮಾತನಾಡುತ್ತ ನಿಂತಿದ್ದಾರೆ. ಅಷ್ಟರಲ್ಲಿ ವಂದನ ಉಡುಪನ್ನು ಧರಿಸಿ ಸಿದ್ಧಳಾಗಿ ಬಂದು ಹತ್ತಿರ ನಿಂತುಕೊಂಡಳು. ಪುನಃ "ಅಪ್ಪ, ನಾನೂ ನಿನ್ನ ಜೊತೆಯಲ್ಲಿ ಹೊರಡುತ್ತೇನೆ." ಎಂದಳು.

ತಂದೆಗೆ ಆಶ್ಚರ್ಯವಾಯಿತು. "ಈ ಬಿಸಿಲಿನಲ್ಲಿ ಸ್ಟೇಷನ್ನಿಗೆ ಏತಕ್ಕಮ್ಮ" ಎಂದರು.

"ಕೇವಲ ಸ್ಟೇಷನ್ನಿನ ತನಕ ಅಲ್ಲ. ಕಲ್ಕತ್ತೆಗೇ ಬರುತ್ತೇನೆ. ನೀನು ಬೊಂಬಾಯಿಗೆ ಹೋಗುವಾಗ ಬೊಂಬಾಯಿಗೂ ಹೊರಡುತ್ತೇನೆ'' ಎಂದಳು.

ವಿಪ್ರದಾಸನು ಆಶ್ಚರ್ಯಚಕಿತನಾಗಿ "ಇದೇನು ಇನ್ನೂ ಕೆಲವು ದಿನ ಇಲ್ಲಿ ಇರುತ್ತಿ ಎಂದು ಮಾಡಿದ್ದೆ'' ಎಂದ.

ವಂದನ ಸುಮ್ಮನೆ ಉಹೂಂ ಎಂತ ಉತ್ತರ ಕೊಟ್ಟಳು.

"ಆದರೆ ನೀನು ಇನ್ನೂ ಊಟ ಸಹ ಮಾಡಿಲ್ಲ''

ಬೇಡ, ಅದರ ಆವಶ್ಯಕತೆ ಇಲ್ಲ. ಕಲ್ಕತ್ತೆಗೆ ಹೋಗಿ ಮಾಡು ತ್ತೇನೆ.''

"ನೀನು ಹೊರಟಿರುವುದು ನಿನ್ನ ಅಕ್ಕನಿಗೆ ಗೊತ್ತೆ?''

"ನನಗೆ ಗೊತ್ತಿಲ್ಲ. ಹೋದಮೇಲೆ ತಾನೇ ತಿಳಿಯುತ್ತೆ.''

"ನೀನು ಊಟ ತಿಂಡಿ ಏನೂ ಇಲ್ಲದೆ ಹೀಗೆ ಹೊರಟುಹೋದರೆ ಅವಳಿಗೆ ತುಂಬಾ ದುಃಖವಾಗುತ್ತದೆ.''

ವಂದನ ತಲೆ ಎತ್ತಿ "ದುಃಖ ಏಕೆ? ನನಗೆ ಔತಣ ಕೊಟ್ಟು ಕರೆ ಸಿದ್ದಳೇ ಊಟ ತಿಂಡಿ ಇಲ್ಲದೆ ಹೊರಟರೆ ಮಾಡಿಟ್ಟುಕೊಂಡಿದ್ದ ಏರ್ಪಾ ಟೆಲ್ಲ ಹಾಳಾಯಿತು ಅನ್ನುವುದಕ್ಕೆ. ಅವಳಿಗೇನು ಗೊತ್ತಾಗುವುದಿಲ್ಲವೆ? ತಿಳಿದುಕೊಳ್ಳುತ್ತಾಳೆ." ಇಷ್ಟು ಹೇಳಿ ಅವಳು ಸುಮ್ಮನೆ ಕಾರಿನಲ್ಲಿ ಹೋಗಿ ಕುಳಿತುಕೊಂಡಳು.

ಏನೋ ನಡೆದಿರಬೇಕೆಂದು ಅವಳ ತಂದೆ ಸುಮ್ಮನಾದರು. ಏನೂ ಕಾರಣ ಇಲ್ಲದೆ ಹೀಗೆ ಮಾಡುವ ಹುಡುಗಿ ಅಲ್ಲ ಅವಳು. ಆದುದರಿಂದ

ಸ್ವಲ್ಪ ಹೊತ್ತಿನಮೇಲೆ ಅವರು "ಸತಿ ಹತ್ತಿರ ನಾಲ್ಕು ದಿನ ಇರುತಾಳೆ ಎಂತ ಮಾಡಿದ್ದೆ. ಒಂದು ಸಲ ಕಾರು ಹತ್ತಿ ಕುಳಿತಮೇಲೆ ಇನ್ನೆಲ್ಲಿ ಇಳಿಯುತ್ತಾಳೆ" ಅಂದರು. ವಿಪ್ರದಾಸನು ಏನೂ ಹೇಳಲಿಲ್ಲ. ಸುಮ್ಮನೆ ಹೋಗಿ ಕಾರಿನಲ್ಲಿ ಕುಳಿತುಕೊಂಡ.

ಕಾರು ಹೊರಟಿತು. ಅಕಸ್ಮಾತ್ತಾಗಿ ತಲೆ ಎತ್ತಿದಾಗ ವಂದನ ದ್ವಿಜದಾಸನನ್ನು ನೋಡಿದಳು. ಲೈಬ್ರರಿ ಹಾಲಿನ ಮುಂದುಗಡೆಯ ಕಟಕಟಿಯನ್ನು ಹಿಡಿದು ನಿಂತಿದ್ದ. ಇಬ್ಬರ ದೃಷ್ಟಿ ಒಂದಾದೊಡನೆ ಕೈ ಎತ್ತಿ ನಮಸ್ಕಾರ ಮಾಡಿದನು.

೭

ಸ್ಟೇಷನ್ನಿಗೆ ಹೋದಮೇಲೆ ಏನೋ ದುರ್ಘಟನೆ ನಡೆದುದರಿಂದ ರೈಲು ಬರಲು ಇನ್ನೂ ತಡವಾಗುವುದೆಂದು ತಿಳಿದು ಬಂದಿತು. ಪರಿಚಿತ ಸ್ಟೇಷನ್ ಮಾಸ್ಟರು ಏನೋ ಕಾಹಿಲೆಯಾಗಿ ರಜತೆಗೆದುಕೊಂಡಿದ್ದ ಕಾರಣ ನಿನ್ನೆಯಿಂದ ಮದ್ರಾಸಿನವರೊಬ್ಬರು ರಿಲೀವಿಂಗ್ ಡ್ಯೂಟಿ ಮೇಲಿದ್ದರು. ಆತ ಸರಿಯಾದ ಉತ್ತರವನ್ನು ಕೊಡಲಾಗದೆ, ಒಂದು ಗಂಟೆಯಾದರೂ ಆಗಬಹುದು, ಎರಡುಗಂಟೆಯಾದರೂ ಆಗಬಹುದು ಎಂದು ಅನಿರ್ದಿಷ್ಟ ಉತ್ತರವನ್ನು ಕೊಟ್ಟನು. ವಿಪ್ರದಾಸನು ಹಿಂತಿರುಗಿ ಬಂದು 'ಕಲ್ಕತ್ತೆಯನ್ನು ಸೇರುವಹೊತ್ತಿಗೆ ರಾತ್ರಿಯಾಗಬಹುದು. ಇವತ್ತು ಹೋಗದೆ ಇರಲು ಸಾಧ್ಯವಿಲ್ಲವೆ?" ಎಂದು ಕೇಳಿದನು. ಅದಕ್ಕೆ ವಂದನಳ ತಂದೆಯು "ನನ್ನದೇನೂ ಅಭ್ಯಂತರವಿಲ್ಲ. ಬೇಕಾದರೆ.... " ಎನ್ನುತ್ತಿದ್ದಾಗ ವಂದನ ಮಧ್ಯದಲ್ಲಿಯೇ ಬಾಯಿಹಾಕಿ 'ಇಲ್ಲ ಅಪ್ಪ, ಅದು ಸಾಧ್ಯವಿಲ್ಲ, ಒಂದು ಸಲ ಮನೆಬಿಟ್ಟು ಹೊರಗೆ ಹೆಜ್ಜೆ ಇಟ್ಟಮೇಲೆ ಪುನಃ ಹಿಂತಿರುಗುವುದೇತಕ್ಕೆ" ಎಂದಳು.

ವಿಪ್ರದಾಸನು ಬಹಳ ವಿನಯವನ್ನೇ ತೋರುತ್ತ ಮೃದುವಾಗಿ ಹೇಳಿದನು, "ಏಕೆ, ಹಿಂತಿರುಗಿ ಹೋಗಬಾರದೇ? ವಂದನ ನೀನು ಊಟ ಸಹ ಮಾಡಿಲ್ಲ. ಉಪವಾಸ ಇರುವೆಯಾ?" ಎಂದನು.

ವಂದನ ತಲೆ ಅಲ್ಲಾಡಿಸುತ್ತ 'ನನಗೆ ಹಸಿವೆ ಆಗಿಲ್ಲ, ಹಿಂದಕ್ಕೆ ಹೋದರೂ ನಾನು ಊಟಮಾಡುವುದಿಲ್ಲ" ಎಂದಳು. ಅವಳ ತಂದೆಯು ದುಃಖಿತರಾದರು. ಪುನಃ ವಿಪ್ರದಾಸನನ್ನು ಕುರಿತು "ಇವರು ಪಡೆದಿರುವ

ಶಿಕ್ಷಣ ಎಂತಹುದು ಗೊತ್ತೇ? ಏನಾದರೂ ಒಮ್ಮೆ ಹಟಹಿಡಿದರು ಅಂದರೆ ಆಯಿತು ಯಾರಿಗೂ ಬಿಡಿಸಲು ಸಾಧ್ಯವಿಲ್ಲ' ಅಂದರು.

ವಿಪ್ರದಾಸನು ಸುಮ್ಮನಾದನು. ಪುನಃ ಅನುರೋಧ ಮಾಡಲೇ ಇಲ್ಲ.

* * * * *

ಸ್ಟೇಷನ್ನು ದೊಡ್ಡದಲ್ಲಿದಿದ್ದರೂ ಅದರಲ್ಲಿ ಒಂದು ಚಿಕ್ಕ ವೇಟಿಂಗ್ ರೂಮು ಇತ್ತು. ಅಲ್ಲಿ ಹೋಗಿ ನೋಡಿದಾಗ ಮೊದಲೆ ಒಬ್ಬ ಬಂಗಾಲಿ ತರುಣನೂ ಅವನ ಹೆಂಡತಿಯೂ ಅದನ್ನು ಆಕ್ರಮಿಸಿದ್ದರು. ಆ ತರುಣನು ಡಾಕ್ಟರೋ ಬ್ಯಾರಿಸ್ಟರೋ ಆಗಿರಬೇಕು; ಇಲ್ಲವೆ ವಿಲಾಯಿತಿಯಿಂದ ಹಿಂತಿರುಗಿದ ಪ್ರೊಫೆಸರ್ ಆಗಿದ್ದರೂ ಆಗಿರಬಹುದು. ಅವನು ಈ ಕಡೆ ಏಕೆ ಬಂದಿದ್ದನೆಂಬುದು ತಿಳಿಯದ ವಿಷಯವಾಗಿದ್ದಿತು. ಆರಾಮುಕುರ್ಚಿಯ ಮೇಲೆ ಎರಡು ಕಾಲನ್ನೂ ಎಸೆದು ಅರ್ಧನಿದ್ರಿಸುವವನಂತೆ ಮಲಗಿದ್ದನು. ಅಕಸ್ಮಾತ್ತಾಗಿ ಯಾರೋ ಒಳಗೆ ಒಂದಂತಾಗಲು ಸ್ವಲ್ಪ ಕಣ್ತೆರದು ನೋಡಿದನು; ಆದರೆ ಅವನ ಶಿಷ್ಟಾಚಾರ ಅಥವ ಸೌಜನ್ಯ ಇದಕ್ಕಿಂತ ಮುಂದೆ ಹೋಗಲಿಲ್ಲ. ಆದೆ ಅವನ ಹೆಂಡತಿ ಜಾಗ್ರತೆ ಕುರ್ಚಿಯನ್ನು ಬಿಟ್ಟು ಮೇಲಕ್ಕೆ ಎದ್ದು ನಿಂತಳು. ಬಹುಶಃ ಅವಳು ಇನ್ನೂ ಪೂರ್ತಿ ಲೇಡಿಸಾಹೇಬ್ ಆಗಿರಲಿಲ್ಲ. ಹಿಮ್ಮಡಿ ಎತ್ತರವಾಗಿರುವ ಬೂಡ್ಸು, ಬಟ್ಟೆ ಬರೆ ಇವುಗಳನ್ನು ನೋಡಿದರೆ ಆಕಡೆ ಪ್ರಯತ್ನ ಸಾಗುತ್ತಿದ್ದಂತೆ ತೋರುತ್ತಿದ್ದಿತು.

ರೂಮಿನಲ್ಲಿ ಇನ್ನೊಂದು ಆರಾಮುಕುರ್ಚಿ ಇತ್ತು. ತಂದೆಯನ್ನು ಅದರಮೇಲೆ ಕೂಡಿಸಿ ವಂದನ ಒಂದು ಬೆಂಚಿನಮೇಲೆ ಹೋಗಿ ಕುಳಿತುಕೊಂಡಳು. ವಿಪ್ರದಾಸನನ್ನು ಸನ್ಮಾನಪೂರ್ವಕವಾಗಿ ಕರೆದು "ಭಾವ, ಸುಮ್ಮನೆ ಏಕೆ ನಿಂತಿದ್ದೀರಿ. ಇಲ್ಲಿ ನನ್ನ ಹತ್ತಿರ ಬಂದು ಕುಳಿತುಕೊಳ್ಳಿ ಮರದಮೇಲೆ ಕುಳಿತರೆ ದೋಷವಿಲ್ಲ, ಅದರಿಂದ ಜಾತಿ ಏನೂ ಹೋಗುವುದಿಲ್ಲ" ಎಂದಳು.

ಇದನ್ನು ಕೇಳಿ ಅವಳ ತಂದೆ ಸ್ವಲ್ಪ ನಕ್ಕರು. 'ಏನು ವಿಪ್ರದಾಸನ ಮಡಿ ಮೈಲಿಗೆ ವಿಚಾರ ಅಷ್ಟು ಹೆಚ್ಚಿನದೆ? ಎಂದರು.

ವಿಪ್ರದಾಸನೂ ನಗುತ್ತ "ವಿಚಾರವೇನೊ ಇದೆ. ಆದರೆ ಏನು ಮಾಡಿದರೆ ಬಹಳ ಹೆಚ್ಚಾಗುತ್ತದೆ ಎಂಬುದು ತಿಳಿಯದೆ ಈ ಪ್ರಶ್ನೆಗೆ

ಉತ್ತರ ಕೊಡುವುದು ಹೇಗೆ” ಎಂದು ಕೇಳಿದನು.

“ವಂದನ ಹೇಳಿದಳಲ್ಲ ಅಷ್ಟು ಎಂತ ತಿಳಿದುಕೊ”

ವಿಪ್ರದಾಸ್ : ‘ವಂದನ ಸಿಟ್ಟಿನಲ್ಲಿದ್ದಾಳೆ. ಹುಡುಗಿಯರು ಸಿಟ್ಟಿನಿಂದ ಆಡಿನ ಮಾತಿನಮೇಲೆ ಟೀಕಿಸುವುದು ಸರಿಯಲ್ಲ.’ ಎಂದ. “ನನಗೇನೂ ಸಿಟ್ಟಿಲ್ಲ—ಸ್ವಲ್ಪವೂ ಇಲ್ಲ” ಎಂದಳು ವಂದನ.

‘ಇದೆ. ಬೇಕಾದಷ್ಟು ಸಿಟ್ಟುಗೊಂಡಿದ್ದೀಯ. ಇಲ್ಲದಿದ್ದರೆ ಈ ದಿನ ಕಲ್ಕತ್ತೆಗೆ ಹೋಗದೆ ಸೀದಾ ಮನೆಗೆ ಹಿಂತಿರುಗುತ್ತಿದ್ದೆ. ಇದಲ್ಲದೆ ಈಗ ತಾನೆ ನಾವೆಲ್ಲ ಒಂದು ಕಾರಿನಲ್ಲಿ ಬಂದೆವು ಎನ್ನುವ ಜ್ಞಾನ ನಿನಗಿರಬೇಕಾಗಿತ್ತು; ಒಂದುವೇಳೆ ಜಾತಿ ಏನಾದರೂ ಹೋಗಿದ್ದರೆ ಆಗಲೇ ಹೋಗಿರಬೇಕು. ಬೆಂಚಿನ ಮೇಲೆ ಕುಳಿತುಕೊಳ್ಳಲು ಹೇಳಿದ ಮಾತು ನಿನ್ನ ಛಲವೇ ಸರಿ”

“ಛಲವೇ ಆಗಲಿ. ಆದರೆ ನಿಜ ಹೇಳಿ. ಮುಖರ್ಜಿ ಮಹಾಶಯರು ನಮ್ಮನ್ನು ಮುಟ್ಟಿಸಿಕೊಂಡು ಮನೆಗೆ ಹೋದರೆ ಪುನಃ ಸ್ನಾನ ಮಾಡಬೇಕಾಗುತ್ತದೆ ಅಲ್ಲವೆ?’

‘ಬಾ, ಮನೆಗೆ ಬಂದು ಕಣ್ಣಾರೆ ನೋಡು.’

“ಬೇಡ ಬೇಡ ನಾನು ನಿಮ್ಮ ತಾಯಿಗೆ ನಮಸ್ಕಾರಮಾಡಿದಾಗ ಎಲ್ಲಿ ತಗಲುತ್ತದೋ ಎಂದು ಸರಿದುಕೊಂಡುದು ನಿಮಗೆ ಗೊತ್ತಿರಬೇಕು” ಎಂದು ಹೇಳುತ್ತಿರುವಾಗ್ಗೆ ವಂದನಳ ಮುಖವು ಸಿಟ್ಟು ಮತ್ತು ಲಜ್ಜೆಯಿಂದ ಕೆಂಪೇರಿತು.

ಇದು ವಿಪ್ರದಾಸನಿಗೆ ಅರ್ಥವಾಯಿತು. ಆದರೂ ಶಾಂತರೀತಿಯಲ್ಲಿ ಅವಳಿಗೆ ಉತ್ತರವನ್ನು ಕೊಟ್ಟನು:—“ಅದು ಸುಳ್ಳಲ್ಲ; ಆದರೆ ನಿಜವೂ ಅಲ್ಲ. ಅದರ ನಿಜವಾದ ಕಾರಣವನ್ನು ಅವಳ ಹತ್ತಿರ ಇರದೆ ತಿಳಿದುಕೊಳ್ಳಲಾರೆ ಆದಕ್ಕೆ ಈಗ ಅವಕಾಶವೆ ಇಲ್ಲವಲ್ಲ”

“ಹೌದು ಈಗ ಅದಕ್ಕೆ ಅವಕಾಶವಿಲ್ಲ”

ಈ ಪ್ರತ್ಯುತ್ತರದ ಕಾರಣ ವಿಪ್ರದಾಸನಿಗೆ ಈಗ ತಿಳಿಯಿತು. ಅವನ ಮನಸ್ಸಿನಲ್ಲುಂಟಾದ ಕೋಪ ಅಷ್ಟಿಷ್ಟಲ್ಲ. ಅದಕ್ಕೆ ಅನೇಕ ಕಾರಣಗಳಿದ್ದರೂ ಮಲತಾಯಿಯ ವಿಷಯವಾಗಿ ಆಡಿದ ಮಾತುಗಳು ಸ್ವಲ್ಪ ಮಟ್ಟಿಗೆ ಸತ್ಯವಾಗಿದ್ದರೂ ಅವನನ್ನು ಅದರಲ್ಲಿ ಸೇರಿಸಿದ್ದಳು. ಇನ್ನೊಂದು ವಿಶೇಷವೆಂದರೆ ಅದನ್ನು ಹೇಳಿ ಕೇಳಿ ತಿಳಿಸುವಷ್ಟು ಸಮಯವಾಗಲಿ

ಅಥವಾ ಅವಕಾಶವಾಗಲಿ ಇರಲಿಲ್ಲ ; ಮತ್ತೊಂದುಕಡೆ ವಂದನಳಲ್ಲಿ ತಿಳಿದುಕೊಳ್ಳುವಷ್ಟು ಪ್ರೈರಣೆಯಾಗಲಿ ಅಥವಾ ತಿಳಿದುಕೊಳ್ಳಬೇಕೆಂಬ ಮನಸ್ಸಾಗಲಿ ಇಲ್ಲ. ಆದುದರಿಂದ ಸುಮ್ಮನೆ ಇರುವುದನ್ನು ಬಿಟ್ಟರೆ ಬೇರೆ ಮಾರ್ಗವೂ ಇರಲಿಲ್ಲ. ಅವನು ಮೌನವಾಗಿಯೇ ಇದ್ದನು. ಆ ತರುಣ ಬಾಬು ಆಕಳಿಸುತ್ತ ತನ್ನ ಕಾಲನ್ನು ಕೆಳಗೆ ಬಿಟ್ಟು, ಕುಳಿತುಕೊಂಡನು. ಮತ್ತು ' ಇಲ್ಲಿಯ ಜಮೀನ್ದಾರ್ ವಿಪ್ರದಾಸ್ ಎನ್ನುವವರು ತಾವೇನೊ, ಎಂದು ಕೇಳಿದರು.

" ಹೌದು "

" ತಮ್ಮ ಹೆಸರನ್ನು ಕೇಳಿದ್ದೆ. ಇಲ್ಲೇ ಹತ್ತಿರದ ಹಳ್ಳಿಯಲ್ಲಿ ನನ್ನ ಹೆಂಡತಿಯ ತೌರುಮನೆ ಇದೆ. ಬಂಗಾಲಕ್ಕೆ ಹೇಗೂ ಬಂದಿದ್ದೇವೆ. ಅವರನ್ನು ನೋಡಿಕೊಂಡೇ ಹೋಗೋಣ ಅನ್ನಿಸಿತು. ಅದಕ್ಕಾಗಿ ಬಂದಿದ್ದೆ ನಾನು ಈಗ ಪಂಜಾಬಿನಲ್ಲಿ ಪ್ರಾಕ್ಟೀಸ್ ಮಾಡುತ್ತಿದ್ದೇನೆ" ಎಂದನು.

ವಿಪ್ರದಾಸನು ಅವನನ್ನು ದೃಷ್ಟಿಸಿ ನೋಡಿದನು. ಸುಮಾರು ತನ್ನಷ್ಟೆ ವಯಸ್ಸು ಎಲ್ಲೋ ವರುಷವೊ ಆರು ತಿಂಗಳೋ ಹೆಚ್ಚುಕಡಿಮೆ ಅದಕ್ಕಿಂತ ಜಾಸ್ತಿ ಇರಲಾರದು. ಅವನು ಮಾತನ್ನು ಮುಂದುವರಿಸಿದನು. " ನಿನ್ನೆ ತಾನೆ ತಮ್ಮ ವಿಷಯವಾಗಿ ಮಾತುಕತೆ ನಡೆಯುತ್ತಿತ್ತು. ಜನಮತವನ್ನು ತೆಗೆದುಕೊಂಡರೆ ತಾವು ಬಹಳ ಉಗ್ರ ಜಮೀನ್ದಾರರಂತೆ, ಎಲ್ಲೋ ಒಬ್ಬಿಬ್ಬ ಬ್ರಾಹ್ಮಣರು ತಾವು ಆಚಾರ ನಿಷ್ಠರಾದುದರಿಂದ ಹೊಗಳಿದರು. ನೋಡುವುದರಲ್ಲಿ ಆ ಮಾತೇನೂ ಸುಳ್ಳಲ್ಲ."

ಅಪರಿಚಿತನೊಬ್ಬನ ಅನಪೇಕ್ಷಿತ ಟೀಕೆಯನ್ನು ಕೇಳಿ ವಂದನ ಮತ್ತು ಅವಳ ತಂದೆ ಇಬ್ಬರಿಗೂ ಆಶ್ಚರ್ಯವಾಯಿತು. ಏನೊಂದು ಉತ್ತರವನ್ನೂ ವಿಪ್ರದಾಸನು ಕೊಡಲಿಲ್ಲ. ಬಹುಶಃ ಅನ್ಯಮನಸ್ಕನಾಗಿದ್ದುದರಿಂದ ಅವನಿಗೆ ಈ ಮಾತುಗಳು ಕೇಳಿಸಿರಲಾರವು.

ತರುಣನು ಹಾಗೆಯೆ ಹೇಳತೊಡಗಿದನು ;—' ನಾನು ಅನೇಕಾವರ್ತಿ ನನ್ನ ಲೆಕ್ಚರಿನಲ್ಲಿ ನಮಗೆ ರಿಯಲ್ ಆದ್ದು ಬೇಕು ; ಸಾಲಿಡ್ ಶಿಕ್ಷಣಬೇಕು, ಆಡಂಬರ ಮತ್ತು ಈ ಕಪಟ ಬೇಕಾಗಿಲ್ಲ' ಎಂದು ಹೇಳಿದ್ದೇನೆ. ತಾವು ಒಮ್ಮೆ ಯೂರೋಪಿಗೆ ಹೋಗಿ ಬರಬೇಕು.

ಅಲ್ಲಿಯ ಗಾಳಿ—ಫ್ರೀ ಏರ್ ಬ್ರೀತ್ ಮಾಡಲು ಮುಂಚೆ ಮನಸ್ಸಿನಲ್ಲಿ ಫ್ರೀಡಂ ಅನ್ನುವುದರ ಕಲ್ಪನೇಯೇಬರುವುದಿಲ್ಲ. ಆಮೇಲೆ ಅಲ್ಲಿನ ಸಂಸ್ಕೃತಿಯನ್ನು ಪ್ರಯತ್ನಪಟ್ಟರೂ ಮರೆಯಲು ಸಾಧ್ಯವಿಲ್ಲ. ನಾನು ಅಲ್ಲಿ ಐದು ವರುಷಗಳ ಕಾಲ ಇದ್ದೆ.''

ವಂದನಳ ತಂದೆ ಅವನ ಕಡೆಯ ಮಾತನ್ನು ಕೇಳಿ ಹರ್ಷಿತರಾದರು. ಅದನ್ನು ಅನುಮೋದಿಸುತ್ತ 'ನಿಜ ನಿಜ ಆ ಮಾತು ಖಂಡಿತ ನಿಜ' ಅಂದರು.

ಪ್ರೋತ್ಸಾಹ ದೊರೆತುದರಿಂದ ಉತ್ತೇಜಿತನಾಗಿ ಅವನು ಮುಂದುವರಿಸಿದನು. "ಈ ಡೆಮೋಕ್ರಸಿಯುಗದಲ್ಲಿ ಎಲ್ಲರೂ ಸರಿಸಮಾನರು. ಯಾರೂ ಕಡಿಮೆಯಾಗಿಲ್ಲ. ಆದರೂ ವಿಧಿಪೂರ್ವಕವಾಗಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಅಧಿಕಾರವನ್ನು ಅಸ್ಸರ್ಟ ಮಾಡಬೇಕು. ಅದರ ಕಾನ್ಸಿಕ್ವೆನ್ಸ್ ಏನುಬೇಕಾದರೂ ಆಗಲಿ. ನನ್ನಲ್ಲಿ ಹಣವಿದ್ದಿದ್ದರೆ ನಿಮ್ಮ ಜಮೀನ್ದಾರಿಯಲ್ಲಿರುವ ಪ್ರತಿಯೊಬ್ಬ ರೈತನನ್ನೂ ಸ್ವಂತ ಖರ್ಚಿನಿಂದ ಯೂರೋಪಿಗೆ ಕಳುಹಿಸುತ್ತಿದ್ದೆ. ಆಗ ಅವರಿಗೆ ತಾನೇ ತಾನಾಗಿ ತಮ್ಮ ರೈಟ್ಸ್ ಎಂದರೆ ಏನು ಎಂತ ತಿಳಿಯುತ್ತಿದ್ದಿತು."

ಇದು ವಂದನಳಿಗೆ ಬಹಳ ಕೆಡುಕೆನ್ನಿಸಿತು. ಅವಳು ನಿಧಾನವಾಗಿ ''ನಮ್ಮ ಭಾವ ಪ್ರಜೆಗಳ ಮೇಲೆ ಅತ್ಯಾಚಾರವನ್ನು ಮಾಡುತ್ತಿರುವರೆಂದು ನಿಮಗೆ ಯಾರು ಹೇಳಿದರು. ಎಲ್ಲೋ, ನಿಮ್ಮ ಮಾವಗೀವನಮೇಲೆ ಅತ್ಯಾಚಾರ ನಡೆದಿರಬೇಕು ಅಲ್ಲವೆ?' ಎಂದು ಕೇಳಿದಳು.

"ಓಹೊ ಇವರು ನಿಮ್ಮ ಭಾವನೊ? ಥ್ಯಾಂಕ್ಸ್. ಇಲ್ಲ ಇಲ್ಲ. ಅವರೇನೂ ದೂರು ಹೇಳಲಿಲ್ಲ'' ಎನ್ನುತ್ತ ತನ್ನ ಹೆಂಡತಿಯ ಕಡೆ ಸನ್ನೆಮಾಡಿ ತೋರಿಸುತ್ತ 'ನಿನ್ನಂತೆ ಇವಳು ಇದ್ದಿದ್ದರೆ' ಅಂದುಕೊಂಡು ಮತ್ತೆ ವಂದನಳ ಜೊತೆಯಲ್ಲಿ ವಾರ್ತಾಲಾಪವನ್ನು ಪ್ರಾರಂಭಿಸಿದನು. 'ಏನು ನೀವು ವಿಲಾಯಿತಿಗೆ ಹೋಗಿದ್ದೀರಾ? ಇಲ್ಲವೆ? ಹೋಗಿ, ನೋಡಿ ಫ್ರೀಡಂ, ಸಾಹಸ, ಶಕ್ತಿ ಅಂತ ಯಾವುದನ್ನು ಕರೆಯುತ್ತಾರೆ; ಅಲ್ಲಿ ಮಹಿಳೆಯರು ವಾಸ್ತವವಾಗಿ ಹೇಗಿದ್ದಾರೆ ಇವನ್ನೆಲ್ಲ ಕಣ್ಣಾರ ಕಂಡು ಬನ್ನಿ. ನಾನು ನೆಕ್ಸ್ಟ ಟೈಂ ಹೋಗುವಾಗ ಇವಳನ್ನೂ ಕರೆದುಕೊಂಡು ಹೋಗಬೇಕೆಂದು ನಿಶ್ಚಯಿಸಿದ್ದೇನೆ."

ಮತ್ತೆ ಯಾರಾದರೂ ಮಾತನಾಡುತ್ತಿದ್ದರೋ ಏನೋ. ಅಷ್ಟರಲ್ಲಿ

ಸ್ಟೇಷನ್ನಿನ ರಿಲೀವಿಂಗ್ ಹ್ಯಾಂಡ್ ಬಂದು ಬಾಗಿಲ ಹತ್ತಿರ ನಿಂತುಕೊಂಡು ಗಟ್ಟಿಯಾಗಿ 'ರೈಲು ಡಿಸ್ಟೆನ್ಸ್ ಸಿಗ್ನಲ್ ದಾಟಿದೆ, ಇನ್ನೇನು ಬಂದಿತು' ಎಂದು ಹೇಳಿ ಹೊರಟು ಹೋದನು.

ಎಲ್ಲರೂ ಕಾತರರಾಗಿ ಪ್ಲಾಟ್‌ಫಾರಂ ಮೇಲೆ ಬಂದು ನಿಂತರು.

ರೈಲು ಬಂದು ನಿಂತಿತು. ರಜ ದಿನವಾದುದರಿಂದ ತುಂಬ ನುಗ್ಗಾಟವಿತ್ತು. ಎಲ್ಲಿ ನೋಡಿದರೂ ಎಳ್ಳಷ್ಟೂ ಜಾಗವಿಲ್ಲ. ಒಂದೇ ಒಂದು ಫಸ್ಟ್‌ಕ್ಲಾಸ್ ಬೋಗಿ ಇದೆ, ಸೆಕೆಂಡ್ ಕ್ಲಾಸ್ ಬೋಗಿಯೂ ಅಷ್ಟೆ. ಸೆಕೆಂಡ್‌ಕ್ಲಾಸ್ ಬೋಗಿಯಲ್ಲಿ ಕಲ್ಕತ್ತೆಗೆ ಏನೊ ಆಟ ನೋಡಲು ಹೊರಟಿರುವ ಕೆಲವು ಪರಂಗೀ ರೈಲ್ವೆ ಸರ್ವೆಂಟ್ಸ್, ಕುಳಿತಿದ್ದಾರೆ; ಅವರಲ್ಲಿ ಕೆಲವರು ಅಲ್ಲಿ ಜಾಗ ಸಾಲದೆ ಫಸ್ಟ್‌ಕ್ಲಾಸ್‌ನಲ್ಲಿ ಹೋಗಿ ಕುಳಿತಿದ್ದಾರೆ. ಮಿತಿಮೀರಿ ಶರಾಬ್ ಮತ್ತು ಬೀರ್ ಕುಡಿದಿದ್ದಕಾರಣ ಅವರ ಮುಖವು ಎಷ್ಟು ಭಯಂಕರವಾಗಿತ್ತೊ ಅವರ ವರ್ತನೆಯೂ ಅಷ್ಟೆ ಅಸಹ್ಯವೂ ಅಸಭ್ಯವೂ ಆಗಿದ್ದಿತು. ಅವರು ಒಳಗಿನಿಂದ ಬಾಗಿಲು ಹಾಕಿಕೊಂಡು ಎಲ್ಲರೂ ಒಟ್ಟಿಗೆ 'ಗೋ ಗೋ, ಜಾವೊ' ಎಂದು ಅರಚಿಕೊಂಡರು. ಸ್ಟೇಷನ್ ಮಾಸ್ಟರು ಬಂದ. ಗಾರ್ಡ್ ಬಂದ. ಆದರೆ ಅವರನ್ನು ಯಾರೂ ಲೆಕ್ಕಿಸಲಿಲ್ಲ.

ಆ ತರುವಾಯ ಬಾಬು 'ಈಗ ಏನು ಮಾಡುವುದು' ಅಂದ. ವಂದನ ಹೆದರುತ್ತ ಹೆದರುತ್ತ 'ನಡೆಯಿರಿ ಮನೆಗೆ ಹೋಗೋಣ' ಎಂದಳು.

ವಿಪ್ರದಾಸನು 'ಸಾಧ್ಯವಿಲ್ಲ' ಎಂದು ಪ್ರತಿಭಟಿಸಿದನು.

'ಸಾಧ್ಯವಿಲ್ಲದಿದ್ದರೆ ಏನುಮಾಡುವುದು. ರಾತ್ರೆ ಟ್ರೈನಿನಲ್ಲಿ........

'ಇಲ್ಲದಿದ್ದರೆಬೇರೆ ಮಾರ್ಗವೇ ಇಲ್ಲ ಕಷ್ಟವಾಗುತ್ತದೆ ಆಗಲಿ' ಎಂದು ತರುಣ ಬಾಬು ಹೇಳಿದ. ವಿಪ್ರದಾಸನು ತಲೆ ಅಲ್ಲಾಡಿಸುತ್ತಾ 'ಉಹೂಂ-ಬೋಗಿಯಲ್ಲಿ ಎಲ್ಲೋ ನಾಲ್ಕೊ ಐದೊ ಜನ ಇದ್ದಾರೆ. ಇನ್ನೂ ನಾಲ್ಕೈದು ಜನಗಳಿಗೆ ಸೀಟ್ ಇರಬೇಕು' ಅಂದ.

'ಇರಬೇಕು ನಿಜ. ನನಗೂ ಗೊತ್ತು ಆದರೆ ಇವರೆಲ್ಲಾ ಕುಡಿದು ಮತ್ತರಾಗಿದ್ದಾರಲ್ಲ' ಎಂದು ವಂದನಳ ತಂದೆ ಉಸುರಿದರು.

ವಿಪ್ರದಾಸನ ಶರೀರ ಕಬ್ಬಿಣದಂತೆ ಕಲ್ಲಾಗಿ ಸೆಟೆದು ನಿಂತಿತು. 'ಅದು ಅವರವರ ಶೋಕಿ. ಅದಕ್ಕೆ ನಾವು ಹೊಣೆಯೆ? ಹತ್ತಿ ಮೇಲಕ್ಕೆ.

ನಾನೂ ಜೊತೆಯಲ್ಲಿ ಬರುತ್ತೇನೆ' ಎಂದು ಜೋರಾಗಿ ಬಾಗಿಲನ್ನು ತಳ್ಳಿ ತೆರೆದುಬಿಟ್ಟ. ಅನಂತರ ವಂದನಳ ಕೈ ಹಿಡಿದು ಒಳಗೆ ಎಳೆದುಕೊಳ್ಳುತ್ತ 'ಬಾ, ಹತ್ತು' ಅಂದ. 'ಎಲ್ಲಿ ರೈಟ್ ಅಸರ್ಟ ಮಾಡಲು ಇಷ್ಟವಿದ್ದರೆ ಹೆಂಡತಿಯನ್ನು ಕರೆದುಕೊಂಡು ಹತ್ತಿ; ಅತ್ಯಾಚಾರಿ ಜಮೀನ್‌ದಾರ ನಿಮ್ಮ ಜೊತೆಯಲ್ಲಿರಬೇಕಾದರೆ ಏನೂ ಭಯವಿಲ್ಲ' ಎಂದು ತರುಣ ಬಾಬುವಿಗೆ ಹೇಳಿದ.

ಮತ್ತರಾಗಿದ್ದ ಪರಂಗಿಯವರು ಈ ಮನುಷ್ಯನ ಮುಖವನ್ನು ನೋಡಿ ತೆಪ್ಪನೆ ಹೋಗಿ ಬೇರೆ ಬೆಂಚಿನಮೇಲೆ ಕುಳಿತುಕೊಂಡರು.

ಗಲಾಟೆಯನ್ನು ಕೇಳಿ ಪಕ್ಕದ ಬೋಗಿಯಲ್ಲಿದ್ದ ಪರಂಗಿಗಳೂ ಪ್ಲಾಟ್‌ಫಾರಂ ಮೇಲೆ ಇಳಿದು ಬಂದರು. ಎಲ್ಲರೂ ಒರಟೊರಟಾಗಿ ಅರಚುತ್ತ wsts up? ಎಂದರು. ಅವರು ಜಗಳಕ್ಕೆ ಸಿದ್ಧರಾಗುವಂತೆ ತೋರಿತು. ತಮ್ಮ ಮಿತ್ರರ ಪಕ್ಷವನ್ನು ವಹಿಸಿ ತಮ್ಮ ಶಕ್ತಿ ಮತ್ತು ಪರಾಕ್ರಮವನ್ನು ತೋರಲು ಸಹ ಅವರು ಸಿದ್ಧರಾಗಿದ್ದರು.

ವಿಪ್ರದಾಸನು ಪಕ್ಕದಲ್ಲಿ ನಿಂತಿದ್ದ ಗಾರ್ಡನ್ನು ಸನ್ನೆಮಾಡಿ ಕರೆದ. 'ನೋಡಿ ಇವರು ಫಸ್ಟ್‌ಕ್ಲಾಸ್ ಪ್ಯಾಸೆಂಜರ್ ಅಲ್ಲ ಅಂತ ಕಾಣುತ್ತೆ. ಇವರನ್ನು ಇಳಿಸುವುದು ತಮ್ಮ ಡ್ಯೂಟಿ' ಎಂದು ಹೇಳಿದನು. ಗಾರ್ಡು ಹಿಂದುಮುಂದು ನೋಡಲು ಪ್ರಾರಂಭಿಸಿದ. ಈ ತಮಾಷೆಯನ್ನು ನೋಡಲು ಜನ ಗುಂಪು ಸೇರಿತು. ಆ ಮದ್ರಾಸಿ ರಿಲೀವಿಂಗ್ ಹ್ಯಾಂಡ್ ಕೂಡ ಅಲ್ಲಿಯೆ ನಿಂತಿದ್ದ. ವಿಪ್ರದಾಸನು ಅವನನ್ನು ಕರೆದು ಅವನಿಗೆ ಐದು ರೂಪಾಯಿಗಳನ್ನು ಕೊಟ್ಟು 'ನನ್ನ ಆಳುಗಳಿಂದ ನಾನು ಯಾರೆಂದು ಕೇಳಿ ತಿಳಿದುಕೊಳ್ಳಿ. ಕೂಡಲೆ ತಮ್ಮ ಮೇಲಿನ ಅಧಿಕಾರಿಗಳಿಗೆ ಹೆಂಡೆ ಕುಡಿದು ಮತ್ತರಾಗಿದ್ದ ಈ ವ್ಯಕ್ತಿಗಳು ಫಸ್ಟ್‌ಕ್ಲಾಸ್‌ನಲ್ಲಿ ಕುಳಿತು, ಇಳಿಯಲು ಒಪ್ಪದೆ ತೊಂದರೆ ಕೊಡುತ್ತಿದ್ದಾರೆ ಎಂತ ತಂತಿ ಕೊಡಿ. ಮತ್ತು ಗಾರ್ಡು ಇದನ್ನು ಸುಮ್ಮನೇ ನೋಡುತಿದ್ದನೇ ಹೊರತು ಏನೊಂದು ಸಹಾಯವನ್ನೂ ಮಾಡಲಿಲ್ಲವೆಂದೂ ತಿಳಿಸಿ' ಎಂದು ಹೇಳಿದನು.

ಗಾರ್ಡಿಗೆ ಮುಂದೇನಾಗುವುದೆಂಬುದರ ಅರಿವು ಇತ್ತು. ಆಗ ಅವನು ಧೈರ್ಯತಾಳಿ ಗಾಡಿ ಹತ್ತಿ ಆ ಫರಂಗಿಗಳನ್ನು ಕುರಿತು Don't you see they are big people ? ನೀವು ರೈಲ್ವೆ ಸರ್ವೆಂಟ್ಸು. ಥರ್ಡ್ ಕ್ಲಾಸ್ ರೈಲ್ವೆ ಪಾಸ್ ನಿಮ್ಮಲ್ಲಿವೆ–be careful ! " ಎಂದು ಹೇಳಿದ. ಅವರು ಇಳಿದು ಹೊರಟುಹೋದರು. ಗಾರ್ಡಿನ ಮಾತನ್ನು ಲೆಕ್ಕಿಸದಷ್ಟು ಸಾಮರ್ಥ್ಯ ಅವರಲ್ಲಿರಲಿಲ್ಲ. ಅವರು ಗೊಣಗಿಕೊಳ್ಳುತ್ತಾ ಹೊರಟುದನ್ನು ಕೇಳಿ ಸುಮ್ಮನಿರುವುದು ಯಾರಿಗಾದರೂ ಕಷ್ಟಸಾಧ್ಯವೆ! ಪಂಜಾಬಿನ ಬ್ಯಾರಿಸ್ಟರ್ ಮಹಾಶಯನು ಗಾರ್ಡಿಗೆ ಧನ್ಯವಾದಗಳನ್ನರ್ಪಿಸುತ್ತಾ ' ತಾವು ಇರದಿದ್ದರೆ ಬಹುಶಃ ನಾವು ಈ ದಿನ ಪ್ರಯಾಣಮಾಡಲಾಗುತ್ತಿರಲಿಲ್ಲ' ಎಂದು ಹೇಳಿದನು.

" Oh No, ಇದು ನನ್ನ duty "

ರೈಲು ಹೊರಡುವ ಹೊತ್ತಾಯಿತು. ಬೆಲ್ ಹೊಡೆಯಿತು. ವಿಪ್ರ ದಾಸನು ಇಳಿಯುತ್ತಾ ' ಇನ್ನು ನಾನೇನು ಜೊತೆಯಲ್ಲಿರಬೇಕಾಗಿಲ್ಲ. ಅವರು ನಿಮಗೆ ಏನೂ ಮಾಡಲಾರರು. ಅವರಿಂದ ನಿಮಗೆ ಏನೂ ತೊಂದರೆಯಾಗಲಾರದು, ಎಂದು ಹೇಳಿದನು.

" ಧೈರ್ಯ ಎಲ್ಲಿಂದ ಮಾಡಬೇಕು ಅವರು. ನೌಕರಿಗೆ ಎಲ್ಲಿ ಏನು ಬರುತ್ತದೋ ಎಂತ ಹೆದರಿಕೆ " ಅಂತ ಬ್ಯಾರಿಸ್ಟರ್ ಸಾಹೇಬರು ಉತ್ತರ ವಿತ್ತರು.

ವಂದನ ಬಾಗಿಲನ್ನು ಅಡ್ಡಗಟ್ಟಿ " ಸಾಧ್ಯವಿಲ್ಲ, ನೌಕರಿಗೆ ಹೆದರುತ್ತಾರೆ ಎಂಬುದು ಒಂದು ಗ್ಯಾರಂಟಿ ಅಲ್ಲ —ತಾವು ಜೊತೆಯಲ್ಲಿ ಹೊರಡಲೇ ಬೇಕು " ಎಂದಳು.

" ಗಂಡಸಾಗಿದ್ದರೆ ನಿನಗೆ ಅದು ಗೊತ್ತಾಗುತ್ತಿತ್ತು " ಎಂದು ವಿಪ್ರ ದಾಸನು ನಕ್ಕು ನುಡಿದನು. " ಪ್ರಪಂಚದಲ್ಲಿ ಇದಕ್ಕಿಂತ ದೊಡ್ಡ ಗ್ಯಾರಂಟಿ ಬೇರೆ ಇಲ್ಲ—ಆದರೂ ನಾನು ಊಟ ತಿಂಡಿ ಏನೂ ಮಾಡಿಲ್ಲ."

" ನಾನೂ ಏನೂ ಊಟ ಮಾಡಿಲ್ಲ. ನಾನೂ ತಿಂಡಿ ತಿಂದಿಲ್ಲ "

" ಅದು ನಿನ್ನ ಇಷ್ಟ. ಅದಲ್ಲದೆ ಇನ್ನು ಸ್ವಲ್ಪದರಲ್ಲಿ ಇದೋ ಸ್ಟೇಷನ್ನು ಹೊಟೆಲ್ ಸಿಗುತ್ತೆ ಅಲ್ಲಿ ಬೇಕಾದ್ದನ್ನು ನೀನು ತಿನ್ನಬಹುದು. "

" ಇಲ್ಲಿ ನನಗೆ ತಿನ್ನಲಿಕ್ಕೆ ಇಚ್ಛೆ ಇಲ್ಲ. ನಾನು ಉಪವಾಸ ಮಾಡಬಲ್ಲೆ."

‘ ಉಪವಾಸ ಮಾಡಬಹುದು. ಆದರೆ ಅದರಿಂದ ಯಾರಿಗೂ ಏನೂ ಲಾಭ ಇಲ್ಲ.’’ ಪುನಃ ಬ್ಯಾರಿಸ್ಟರನ್ನು ಉದ್ದೇಶಿಸಿ “ ತಾವು ಹೇಗೂ ಜೊತೆಯಲ್ಲಿರುತ್ತೀರಿ, ನೋಡಿಕೊಳ್ಳಿ. ಬೇಕೂ ಅಂತ ಕಂಡರೆ ...........” ಅಷ್ಟರಲ್ಲೇ ವಂದನ ಬಾಯಿ ಹಾಕಿ “ ಏನು ಸರಪಳಿ ಎಳೆದು ಗಾಡಿ ನಿಲ್ಲಿಸಬೇಕೊ? ಅದನ್ನು ನಾನು ಬೇಕಾದರೂ ಮಾಡಬಲ್ಲೆ” ಎಂದಳು. ಕಿಟಕಿಯಿಂದ ಹೊರಕ್ಕೆ ತಲೆ ಹಾಕಿ ನೌಕರನನ್ನು ಕುರಿತು “ ನೀವು ಹೋಗಿ, ದೊಡ್ಡ ಬಾಬು . ನಮ್ಮ ಜೊತೆಯಲ್ಲಿ ಕಲ್ಕತ್ತಕ್ಕೆ ಹೊರಟರು. ನಾಳೆ ನಾಳಿದ್ದರಲ್ಲಿ ಬರುತ್ತಾರೆ ಎಂದು ಅಮ್ಮಾವರಿಗೆ ತಿಳಿಸಿ ” ಎಂದು ಹೇಳಿದಳು.

ರೈಲು ಹೊರಟುಬಿಟ್ಟಿತು. ವಿಪ್ರದಾಸನ ಪಕ್ಕದಲ್ಲಿ ವಂದನ ಬಂದು ಕುಳಿತಳು

‘ ಅಲ್ಲ ಮುಖರ್ಜಿಗಳೆ ತಾವೂ ಏನು ಕಡಮೆ ಹಟವಾದಿಗಳಲ್ಲ! ’

‘‘ ಏಕೆ ? ”

‘‘ ತಾವು ಬಲಾತ್ಕಾರವಾಗಿ ರೈಲು ಹತ್ತಿಸಿಯೇ ಬಿಟ್ಟಿರಿ. ಅಲ್ಲ ಅವರು ಚೆನ್ನಾಗಿ ಕುಡಿದು ಪ್ರಜ್ಞೆ ಇಲ್ಲದೆ ಇದ್ದರು; ಅವರು ಇಳಿಯುವು ದನ್ನು ಬಿಟ್ಟು ಹೊಡೆದಾಟಕ್ಕೆ ನಿಂತಿದ್ದರೆ ಗತಿ ? ”

‘‘ ಗತಿ ಏನು . ಅವರ ಕೆಲಸ ಹೋಗುತ್ತಿತ್ತು ”

‘‘ ಆದರೆ ನಮ್ಮದು ಏನು ಹೋಗುತ್ತಿತ್ತು ಗೊತ್ತೆ ? ಮೈಯ ಎಲುಬು ನೌಕರಿಗಿಂತ ಕೀಳೇನು ಅಲ್ಲವಲ್ಲ ! ”

ವಿಪ್ರದಾಸ ಮತ್ತು ವಂದನ ಇಬ್ಬರೂ ನಗಲು ಆರಂಭಿಸಿದರು. ಇನ್ನೊಬ್ಬ ಮಹಿಳೆಯು ಕೊಂಚ ನಕ್ಕು ಅತ್ತ ಕಡೆ ಮುಖ ತಿರುವಿದಳು. ಆದರೆ ಅವಳ ಗಂಡ, ಪಂಜಾಬಿನ ಹೊಸ ಬ್ಯಾರಿಸ್ಟರ್ ಬಹಳ ಗಂಭೀ ರನಾಗಿ ಕುಳಿತಿದ್ದ.

ವಂದನ ಆಡುತ್ತಿದ್ದ ಕುಚೋದ್ಯದ ಮಾತಿನ ಕಡೆ ಅವಳ ತಂದೆ ಗಮನ ಕೊಟ್ಟಿರಲಿಲ್ಲ. ಆದರೆ ಕಡೆಯ ಒಂದೆರಡು ವಾಕ್ಯಗಳನ್ನು ಕೇಳಿದ ಅವರು ಸರಿಯಾಗಿ ನೆಟ್ಟಗೆ ಕುಳಿತು ‘‘ ನಿಜ ನಿಜ. ಈ ಮಾತಿಗೆ ಇಷ್ಟೇಕೆ ನಗು. ಎಷ್ಟೋವೇಳೆ ಇಂಥ ದುರ್ಘಟನೆಗಳು ರೈಲಿನಲ್ಲಿ ನಡೆಯುತ್ತವೆ. ಪೇಪರಿನಲ್ಲಿ ಸಹ ಬೇಕಾದಷ್ಟು ಸಲ ಬಂದಿದೆ. ಅದಕ್ಕೇನೆ ಯಾವಾಗಲೂ ಜೋರುಗೀರು ಮಾಡಲು ಹೋಗಬಾರದು. ರಾತ್ರೆ

ರೈಲಿಗೆ ಬಂದಿದ್ದರೆ ಎಲ್ಲಾ ದೃಷ್ಟಿಯಿಂದಲೂ ಅನುಕೂಲವಾಗಿರುತಿತ್ತು." ಎಂದ.

" ರಾತ್ರಿ ಗಾಡಿಯಲ್ಲೂ ಕುಡುಕರಿರುತ್ತಾರೆ" ಎಂತ ವಂದನ ಹೇಳಿದಳು.

" ಏನು ನಿಜವಾಗಿಯು ಇರುತ್ತಾರೆಯೆ ? ಹಾಗಾದರೆ ಸಭ್ಯರು ರೈಲ್ವೆ ಪ್ರಯಾಣವನ್ನೇಬಿಟ್ಟುಬಿಡಬೇಕು ಅನ್ನು" ಎನ್ನುತ್ತ ಒಂದು ಚುಟ್ಟಿ ಹಚ್ಚಿದರು.

ವಂದನ ಮೆತ್ತಗೆ " ಮುಖರ್ಜಿಗಳೆ ಸಭ್ಯ ಎನ್ನುನ ಪದಕ್ಕೆ ಅರ್ಥವನ್ನು ನಮ್ಮ ತಂದೆಯು ಹತ್ತಿರ ಕೇಳಿ ತಿಳಿದುಕೊಂಡಿರಲ್ಲವೇ" ಎಂದಳು. ವಿಪ್ರದಾಸನು ನಗುತ್ತಾ " ಇಲ್ಲ ಇಲ್ಲ. ನನಗೆ ಅದು ಗೊತ್ತಿದೆ" ಎಂದ.

" ಹೋಗಲಿ, ಮುಖರ್ಜಿಗಳೆ ತಾವು ಚಿಕ್ಕ ವಯಸ್ಸಿನಲ್ಲಿ ಆ ಕೋಟೆಯ ಹತ್ತಿರ ಪರಂಗಿಯವರೊಡನೆ ಹೊಡೆದಾಡಿದ್ದೀರಂತೆ, ನಿಜವೆ ? ನಿಜ ಹೇಳಬೇಕು."

" ಇಲ್ಲ. ಇಲ್ಲ. ನನಗೆ ಅಂತಹ ಸದವಕಾಶ ಒದಗಿಯೇ ಇಲ್ಲ."

" ತಮ್ಮ ಗ್ರಾಮದ ಜನಗಳಿಗೆ ತಾವು ಟೆರರ್ ಅಂತೆ. ಹಾಗೆಂದು ಜನಗಳು ಹೇಳುತ್ತಿರುತ್ತಾರೆ. ಇದಲ್ಲದೆ ಮನೆಯಲ್ಲಿ ಸಹ ಜನಗಳು ನಿಮ್ಮನ್ನು ಕಂಡರೆ ಹುಲಿಯನ್ನು ಕಂಡಂತೆ ಬೆದರುತ್ತಾರೆ ಎಂದು ಕೇಳಿದೆ. ಇದು ಸತ್ಯವೆ ?"

" ಯಾರು ಹೇಳಿದರು ?"

ಕಿರುದನಿಯಲ್ಲಿ " ಅಕ್ಕ."

" ಏನು ಹೇಳಿದಳು ?"

" ಮೈಯಲ್ಲಿನ ರಕ್ತ ಎಲ್ಲ ಬೆವರಾಗಿ ಹರಿಯಲು ಪ್ರಾರಂಭಿಸುತ್ತೆ" ಎಂತ ಹೇಳಿದಳು.

" ಎಂಥ ಬೆವರು. ಈ ಮೈಮೇಲೆ ಪ್ರಜ್ಞೆ ಇಲ್ಲದ ಪರಂಗಿಯವರನ್ನು ಕಂಡು ನಾವೆಲ್ಲ ಬೆವತಿದ್ದೆವಲ್ಲ, ಅಂಥದೊ ?"

ವಂದನ ನಗುತ್ತಾ ತಲೆಯಾಡಿಸಿ " ಹೌದು ಹೌದು ಸ್ವಲ್ಪ ಹೆಚ್ಚು ಕಡಿಮೆ ಹಾಗೇನೇ" ಎಂದು ಹೇಳಿದಳು.

" ಹಾಗೇ ಇರಬೇಕು. ಇಲ್ಲದಿದ್ದರೆ ಹೆಂಗಸರನ್ನು ಹತೋಟಿಯಲ್ಲಿಡು

ವುದೇ ಕಷ್ಟವಾಗುತ್ತದೆ. ನಿನಗೆ ಮದುವೆಯಾಗಲಿ. ನಿನ್ನ ಗಂಡನಿಗೂ ಆ ವಿದ್ಯೆಯನ್ನು ಕಲಿಸಿಕೊಟ್ಟು ಬರುತ್ತೇನೆ."

"ಖಂಡಿತ ಎಲ್ಲರಿಗೂ ಎಲ್ಲಾ ವಿದ್ಯೆಯೂ ಬರುವುದಿಲ್ಲ ಅನ್ನೋದು ನೆನಪಿನಲ್ಲಿರಲಿ. ಅಕ್ಕನ ಸ್ವಭಾವ ಮೊದಲಿನಿಂದಲೂ ಒಳ್ಳೆಯದು. ನಾನೇ ಆಗಬೇಕಾಗಿತ್ತು ಎಲ್ಲರೂ ನನಗೆ ಹೆದರಿ ನಡೆಯಬೇಕಾಗುತ್ತಿತ್ತು.

"ಅಂದರೆ ಮನೆ ಮಂದಿ ಎಲ್ಲ ಹೆದರಿ ಕಂಗಾಲಾಗಿ ಅವರ ರಕ್ತ ಬೆವರಾಗಿ ಹರಿಯುತ್ತಿತ್ತು ಎಂತಲೋ ? ಅದರಲ್ಲೇನೂ ಆಶ್ಚರ್ಯವಿಲ್ಲ. ಇವತ್ತು ಇದ್ದ ಸ್ವಲ್ಪ ಹೊತ್ತಿನಲ್ಲಿಯೇ ನಿನ್ನ ಆ ವರಸೆ ತೋರಿಸಿ ಬಂದಿದ್ದೀ ಯಲ್ಲ ಅದೇ ಸಾಕು. ಅದನ್ನು ನೋಡಿದರೆ ನಿಜವಾಗಿಯೂ ನೀನು ಆಡಿದ ಮಾತು ನಂಬಬೇಕು ಅನ್ನಿಸುತ್ತದೆ. ಕಡೆಯ ಪಕ್ಷ ನಮ್ಮ ಅಮ್ಮನಂತು ಮರೆಯುವ ಹಾಗಿಲ್ಲ."

ವಂದನ ಮನಸ್ಸಿನಲ್ಲಿಯೇ ಉತ್ತೇಜಿತಳಾಗಿ ಹೇಳಿದಳು "ನಿಮ್ಮ ಅಮ್ಮ ಏನು ಮಾಡಿದರು ಗೊತ್ತೆ ನಾನು ನಮಸ್ಕಾರಮಾಡಿ ದಾಗ ಅವರು ಹಿಂದಕ್ಕೆ ಸರಿದರು."

ವಿಪ್ರದಾಸನು ಸ್ವಲ್ಪವೂ ಆಶ್ಚರ್ಯವ್ಯಕ್ತಪಡಿಸಲಿಲ್ಲ. 'ನಮ್ಮ ತಾಯಿಯ ಹತ್ತಿರ ಇದನ್ನು ಮಾತ್ರ ನೋಡಿದೆ ಇನ್ನೇನೂ ತಿಳಿದು ಕೊಳ್ಳಲು ನಿನಗೆ ಹೊತ್ತು ಸಿಗಲಿಲ್ಲ. ಹಾಗೇನಾದರೂ ಅವರ ಸ್ವಭಾವ ತಿಳಿದಿದ್ದರೆ ಈ ಸಣ್ಣದೊಂದು ಮಾತಿಗೆ ಊಟ ತಿಂಡಿ ಎಲ್ಲ ಬಿಟ್ಟು ಹೊರಟುಬಂದೆಯಲ್ಲ. ಅಂತಹ ತಪ್ಪು ಬೇರೆ ಇಲ್ಲ ಎಂದು ತಿಳಿಯು ತ್ತಿದ್ದೆ" ಎಂದನು.

"ಮನುಷ್ಯನಲ್ಲಿ 'ಆತ್ಮಸನ್ಮಾನ' ಅನ್ನುವುದೂ ಒಂದು ಇದೆಯಲ್ಲ."

ವಿಪ್ರದಾಸನು ನಕ್ಕು ಕೇಳಿದನು. "ನಿನಗೆ ಈ ಆತ್ಮಸನ್ಮಾನದ ಭಾವನೆ ಎಲ್ಲಿಂದ ಬಂತು ? ಸ್ಕೂಲು ಕಾಲೇಜುಗಳಲ್ಲಿ ದಪ್ಪ ದಪ್ಪ ಪುಸ್ತಕ ಗಳನ್ನೋದಿದ್ದಕ್ಕೆತಾನೆ ? ನಮ್ಮ ಅಮ್ಮನಿಗೆ ಇಂಗ್ಲೀಷ್ ಬಾರದು. ಅವರು ಪುಸ್ತಕಗಳನ್ನು ಓದುವುದಿಲ್ಲ. ಅವರ ತಿಳುವಳಿಕೆ ಮತ್ತು ನಿನ್ನ ಭಾವನೆ ಹೇಗೆ ಸರಿಹೊಂದಬೇಕು ?"

"ಆದರೆ ನಾನು ನನ್ನ ಭಾವನೆಯಂತೆ ವರ್ತಿಸುತ್ತೇನೆ."

"ಹಾಗೆ ವರ್ತಿಸುವುದರಿಂದ ಅನೇಕಾವರ್ತಿ ಅನೇಕ ಕಡೆಗಳಲ್ಲಿ ತಪ್ಪಾಗುತ್ತದೆ. ಈದಿನ ಆಗಲಿಲ್ಲವೆ, ಹಾಗೇನೆ. ವಿದೇಶೀಪುಸ್ತಕವ

ನ್ನೋದಿ, ಕಲಿತವಿಷಯಗಳನ್ನು ಪೂರ್ಣ ಸತ್ಯವೆಂದು ಭಾವಿಸಿದಕಾರಣ ಇಂದು ಮನೆಯಿಂದ ಹೀಗೆ ಹೊರಟುಬಂದೆ, ಇಲ್ಲದಿದ್ದರೆ ಹೀಗೆ ಎಂದಿಗೂ ಹೊರಟುಬರುತ್ತಿರಲಿಲ್ಲ. ಆಕಾರಣವಾಗಿ ಗುರುಹಿರಿಯರನ್ನು ಅಪಮಾನ ಮಾಡಲು, ಸಂಕೋಚವಾಗುತ್ತಿತ್ತು. ಆತ್ಮಸನ್ಮಾನ ಮತ್ತು ಆತ್ಮಾಭಿಮಾನ ಇವುಗಳಲ್ಲಿರುವ ವ್ಯತ್ಯಾಸವನ್ನು ತಿಳಿಯುತ್ತಿದ್ದೆ."

ಇವುಗಳಲ್ಲಿರುವ ವ್ಯತ್ಯಾಸವನ್ನು ತಿಳಿಯಲಾಗದಿದ್ದರೂ ಈ ದಿನದ ತನ್ನ ವರ್ತನೆಯಿಂದ ವಿಪ್ರದಾಸನಿಗೆ ಬಹಳ ದುಃಖವಾಗಿದೆ ಎಂದು ಅರಿತಳು. ಇದೂ ತನಗೋಸ್ಕರ ಅಲ್ಲ ತನ್ನ ಅಮ್ಮನಿಗಾದ ಅಪಮಾನಕ್ಕೋಸ್ಕರ. ವಂದನೆ ಒಂದೆರಡು ನಿಮಿಷ ಸುಮ್ಮನಿದ್ದು ಪುನಃ ಪ್ರಾರಂಭಿಸಿದಳು :-- ಅಮ್ಮನಂತೆ ನೀವೂ ಬಹಳ ಆಚಾರನಿಷ್ಠರು ಅಲ್ಲವೆ?"

"ಹೌದು."

"ಮಡಿಮೈಲಿಗೆ ವಿಚಾರದಲ್ಲಿ ?"

"ಅದರಲ್ಲೂ"

"ಯಾರಾದರೂ ಕಾಲುಮುಟ್ಟಿ ನಮಸ್ಕಾರ ಮಾಡಬಂದರೆ ಹಿಂದಕ್ಕೆ ಸಾರುತ್ತೀರಾ ?"

"ಹೌದು ಸಾರುತ್ತೇನೆ. ನಾವು ಹೊತ್ತುವೇಳೆ ನೋಡಿಕೊಂಡು ವರ್ತಿಸುತ್ತೇವೆ."

ನಮ್ಮ ಅಣ್ಣನನ್ನೂ ಕೂಡ ನೀವು ಹೀಗೆ ಧರ್ಮಾಂಧರನ್ನಾಗಿ ಮಾಡಿರಬೇಕು."

"ಅದಕ್ಕಾಗಿ ನೀನು ಅಕ್ಕನನ್ನೇ ಕೇಳು. ಮನೆಯ ಆಚಾರ ವಿಚಾರವನ್ನು ಅವನು ಒಪ್ಪಿ ಅದರಂತೆ ವರ್ತಿಸಬೇಕು."

"ಅಂದರೆ ಹುಲಿಗೆ ಹೆದರುವ ಬೇರೆ ಮಾರ್ಗವೇ ಇಲ್ಲ ಅನ್ನಿ" ಎಂದು ಸ್ವಲ್ಪ ನಕ್ಕು ಹೇಳಿದಳು.

ವಿಪ್ರದಾಸನೂ ನಗುತ್ತಾ "ಹೌದು, ಬೇರೆ ಉಪಾಯವೇ ಇಲ್ಲ. ಬೆಳಗ್ಗೆ ಕ್ಷಿತಿನಲ್ಲಿ ಹುಲಿಗೆ ಹೆದರಿ ರಾತ್ರಿಕ್ಕಲಿಗೆ ಹೋಗಬಹುದು. ಇದು ಪ್ರಾಣಿಧರ್ಮದ ಸ್ವಾಭಾವಿಕ ನಿಯಮ. ಆದರೆ ಮನೆಯಲ್ಲಿ ಮಾತ್ರ ಅದು ಸಾಧ್ಯವಿಲ್ಲ."

"ಅಕ್ಕ ಹೆಂಗಸು. ಸ್ವಭಾವತಃ ಅಬಲೆ, ಅವಳ ಮೇಲೆ ಯಾವ ನಿಯಮವನ್ನು ಬೇಕಾದರೂ ಹೊರಿಸಬಹುದು, ಆದರೆ ದ್ವಿಜದಾಸ

ವಿಪ್ರದಾಸನು ಸುಮ್ಮನಿದ್ದನು. ವಂದನ ಅವನ ಕ್ಷುಣ್ಣಮುಖವನ್ನು ನೋಡಿದಳು.

ಹೊರಗಡೆ ಕತ್ತಲು ಕವಿಯುತ್ತಿದ್ದಿತು, ಏನೊಂದೂ ಕಾಣಿಸುತ್ತಿರಲಿಲ್ಲ. ಆದಾಗ್ಯೂ ಕಿಟಕಿಯಿಂದ ಹೊರಗಡೆ ಏನನ್ನೋ ನೋಡುತ್ತ ವಂದನ ಸುಮ್ಮನೆ ಕುಳಿತಿದ್ದಳು. ಎಂದಿನಂತೆ ಇಷ್ಟುಹೊತ್ತಿಗೆ ರೈಲು ಹೌರಾ ಸ್ಟೇಷನ್ ಮುಟ್ಟಿರಬೇಕಾಗಿತ್ತು ಆದರೆ ಇಂದು ಇನ್ನೂ ಮೂರು ಗಂಟೆಗಳು ಬೇಕು. ಹಿಂತಿರುಗಿ ನೋಡಿದಾಗ ವಿಪ್ರದಾಸನು ಸಣ್ಣಪುಸ್ತಕ ಒಂದರಲ್ಲಿ ಏನನ್ನೋ ಬರೆಯುತ್ತಿದ್ದನು. ಅವನನ್ನು ಪ್ರಶ್ನಿಸಿದಳು: “ಮುಖರ್ಜಿ ಮಹಾಶಯ, ನನ್ನ ಒಂದು ಪ್ರಶ್ನೆಗೆ ಉತ್ತರ ಕೊಡುವಿರಾ?” ಎಂದು.

“ಯಾವ ಪ್ರಶ್ನೆಗೆ?”

“ತಾವು ಈಗತಾನೆ ನಮ್ಮಲ್ಲಿರುವ ಆತ್ಮಸನ್ಮಾನದ ಜ್ಞಾನ ಕೇವಲ ಸ್ಕೂಲು ಕಾಲೇಜಿನ ಪುಸ್ತಕಗಳನ್ನು ಓದಿಪಡೆದದ್ದು ಅಂತ ಹೇಳಿದಿರಿ. ಆದರೆ ನಿಮ್ಮ ಅಮ್ಮ ಸ್ಕೂಲು ಕಾಲೇಜಿನಲ್ಲಿ ಏನೂ ಓದಿಲ್ಲ. ಅವರಿಗೆ ಆ ಜ್ಞಾನ ಎಲ್ಲಿಂದ ಬಂತು?”

ವಿಪ್ರದಾಸನಿಗೆ ಸ್ವಲ್ಪ ಆಶ್ಚರ್ಯವಾಯಿತು. ಏನೂ ಉತ್ತರ ಕೊಡದೆ ಇದ್ದ.

ಪುನಃ ವಂದನ: ಅವರ ವಿಚಾರವಾಗಿ ನನಗೆ ತುಂಬ ಕುತೂಹಲವಿದೆ. ಪ್ರಯತ್ನಪಟ್ಟರೂ ಅದನ್ನು ಮರೆಯಲು ಸಾಧ್ಯವಾಗಿಲ್ಲ ಅವರು ಹಿರಿಯರು- ನಾನು ಅಲ್ಲ ಎನ್ನುವುದಿಲ್ಲ ಅಂದಮಾತ್ರಕ್ಕೆ?”

ವಿಪ್ರದಾಸನು ಮೊದಲಿನಂತೆ ಸುಮ್ಮನಿದ್ದನು.

ಪುನಃ ವಂದನ ಮುಂದುವರಿಸಿದಳು - “ಈ ದಿನ ನಾವು ಆಮಂತ್ರಣವಿಲ್ಲದ ಅತಿಥಿಗಳಾಗಿ ಅವರ ಮನೆಗೆ ಬಂದಿದ್ದೆವಷ್ಟೆ ಇದು ನಾನು ಓದಿರುವ ವಿದೇಶೀ ಪುಸ್ತಕಗಳ ಶಿಕ್ಷಣವಂತೂ ಅಲ್ಲ. ಆದಾಗ್ಯೂ, ಇದೆಲ್ಲ ಲೆಕ್ಕಕ್ಕಿಲ್ಲ. ವಯಸ್ಸಿನಲ್ಲಿ ಚಿಕ್ಕವಳಾದಮಾತ್ರಕ್ಕೆ ನನಗಾದ ಅಪಮಾನವನ್ನು ನೀವು ಎಣಿಸುವುದಿಲ್ಲ ಅಲ್ಲವೆ?”

ವಿಪ್ರದಾಸ್ ಇದಕ್ಕೂ ಏನೂ ಉತ್ತರಕೊಡಲಿಲ್ಲ. ಮೊದಲಿನಂತೆ ಸುಮ್ಮನಿದ್ದ.

ಪುನಃ ವಂದನ ಹೇಳತೊಡಗಿದಳು- “ಆದಾಗ್ಯೂ ನಾನೇ ಅವರ ಕ್ಷಮೆಯನ್ನು ಬೇಡುತ್ತೇನೆ. ನನ್ನ ತನದಿಯಿಂದ ಅಕ್ಕನಿಗೆ ದುಃಖವಾಗು

ವುದು ಬೇಡ" ಎಂತ ಹೇಳಿ ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ "ನನ್ನ ತಂದೆತಾಯಿಗಳು ವಿಲಾಯಿತಿಗೆ ಹೋಗಿದ್ದರು ಆದುದರಿಂದ ಅವರು ಲೇಡಿ ಮತ್ತು ಜೆಂಟ್‌ಗಳೇ ಹೊರತು ಅವರ ಪಾಲಿಗೆ ಬೇರೆ ಏನೂ ಅಲ್ಲ. ಈ ಕಾರಣದಿಂದ ಇದುವರೆಗೂ ನಮ್ಮ ಅಕ್ಕನಿಗೆ ಕಳಂಕ ತಪ್ಪಿಲ್ಲವಂತೆ. ನಮ್ಮ ಅವರ ವಿಚಾರ ಹೊಂದುವುದಿಲ್ಲ. ಅವರಿಗೆ ಹೇಳೀ ನನ್ನ ಇಂದಿನ ನಡತೆ ತಪ್ಪಿರಬಹುದು. ಅವರು ಮಾಡಿದ್ದೂ ಅಪಮಾನವೇ ಹೊರತು ಬೇರೆ ಇನ್ನೇನು ಅಲ್ಲ, ನಮ್ಮ ಅಕ್ಕನ ಅತ್ತೆಯವರೇ ಅದನ್ನು ಮಾಡಿದರೂ ಅಪಮಾನವೇ"? ಹೀಗೆ ಹೇಳುತ್ತಾ ಹೇಳುತ್ತಾ ಅವಳ ಕಡೆಗಣ್ಣಿನಲ್ಲಿ ಎರಡು ಹನಿ ನೀರು ತುಂಬಿಬಂತು.

'ಆದರೆ ಅವರು ನಿನಗೆ ಅವಮಾನ ಮಾಡಲಿಲ್ಲ' ಎಂದು ವಿಪ್ರದಾಸನು ನಿಧಾನವಾಗಿ ಹೇಳಿದನು

'ಮಾಡಿಯೇ ಮಾಡಿದರು" ಎಂದು ವಂದನ ಜೋರಾಗಿ ಹೇಳಿದಳು. ವಿಪ್ರದಾಸ್ ಕೂಡಲೇ ಉತ್ತರವನ್ನು ಕೊಡದೆ ಸ್ವಲ್ಪಹೊತ್ತಾದ ಮೇಲೆ ಹೇಳಿದ- "ನಿನಗೆ ಅಮ್ಮ ಎಂದಿಗೂ ಅಪಮಾನವನ್ನು ಮಾಡಿಲ್ಲ. ಈ ಮಾತು ಅವರು ಹೊರತಾಗಿ ಯಾರೂ ನಿನಗೆ ತಿಳಿಸಲಾರರು. ಇದನ್ನು ಚರ್ಚಿಸಿ ತಿಳಿಯಲಾರೆ. ಅವರ ಹತ್ತಿರ ಇದ್ದು ತಿಳಿದುಕೊಳ್ಳಬಲ್ಲೆ"

ವಂದನ ಕಿಟಕಿಯಿಂದ ಹೊರಗೆ ನೋಡುತ್ತಿದ್ದಳು.

"ಒಂದು ದಿನ ಅಪ್ಪನಿಗೂ ಅಮ್ಮನಿಗೂ ಜಗಳ ಆಯಿತು" ಎಂದು ವಿಪ್ರದಾಸ ಮುಂದುವರಿಸಿದ. "ಕಾರಣ ಬಹಳ ತುಚ್ಛವಾದದ್ದು. ಆದರೂ ಅದು ಬಹಳ ದೊಡ್ಡದಾಗಿ ಬೆಳೆಯಿತು. ಎಲ್ಲ ಮಾತು ನಿನ್ನ ಮುಂದೆ ಹೇಳುವಹಾಗಿಲ್ಲ ಆದರೂ ಓದು ಬರಹ ಬಾರದ ನಮ್ಮ ಅಮ್ಮನ ಆತ್ಮಸನ್ಮಾನದ ಜ್ಞಾನ ಎಷ್ಟರಮಟ್ಟಿನದು ಎಂದು ಆ ದಿನ ನಾನು ಅರಿತೆ.

ವಂದನ ಹಿಂತಿರುಗಿ ಅಪರಿಮಿತ ಮಾತೃಭಕ್ತಿಯುತನಾದ ವಿಪ್ರದಾಸನ ಮುಖವನ್ನು ನೋಡಿದಳು. ಆದರೆ ಏನೂ ಮಾತನಾಡದೆ ಪುನಃ ಕಿಟಕಿಯ ಕಡೆ ನೋಡಲು ಪ್ರಾರಂಭಿಸಿದಳು.

ವಿಪ್ರದಾಸನೇ ಮುಂದುವರಿಸಿದನು :—"ಅನೇಕ ದಿನಗಳ ನಂತರ ಒಂದು ದಿನ ಮಾತುಮಾತಿಗೆ–'ಅಮ್ಮ ಇಷ್ಟೊಂದು ಆತ್ಮಸನ್ಮಾನ ಜ್ಞಾನವನ್ನು ಎಲ್ಲಿಂದ ಸಂಪಾದಿಸಿದೆ' ಎಂದು ಕೇಳಿದೆ." ವಂದನ ಮುಖ ಕೂಡ ತಿರುಗಿಸದೆ ಹಾಗೆಯೇ ಕೇಳಿದಳು.--

“ ಏನು ಹೇಳಿದರು ?”

ವಿಪ್ರದಾಸ್ : “ ನಾನು ಅಮ್ಮನ ಔರಸ ಪುತ್ರನಲ್ಲವೆಂದು ನಿನಗೆ ಗೊತ್ತಿರಬಹುದು. ದ್ವಿಜು ಮತ್ತು ಕಲ್ಯಾಣಿ ಇವರು ಅವರ ಮಕ್ಕಳು. ಆಗ ಅಮ್ಮ ಹೇಳಿದಳು ‘ ನಿಮ್ಮ ಮೂವರನ್ನು ಯಾರು ಬೆಳೆಸಿ ದೊಡ್ಡವ ರನ್ನಾಗಿ ಮಾಡುವ ಭಾರವನ್ನು ವಹಿಸಿಕೊಟ್ಟರೋ ಅವರೇ ನನಗೆ ಇದನ್ನು ಹೇಳಿಕೊಟ್ಟರು ಮತ್ತೆ ಯಾರೂ ಅಲ್ಲ ’ ಎಂದು. ಅವರ ಆ ಆತ್ಮ ಸನ್ಮಾನ ಜ್ಞಾನವೇ ಇಂದಿನವರೆಗೂ ಅವರು ನನಗೆ ತಾಯಿಯಲ್ಲ ಮಲ ತಾಯಿ ಎಂದು ಯಾರಿಗೂ ಗೊತ್ತಾಗದಂತೆ ನೋಡಿಕೊಂಡಿದೆ. ಇದರ ಅರ್ಥವೇನು ತಿಳಿಯಿತೆ ?” ಕ್ಷಣಕಾಲ ಸುಮ್ಮನಿದ್ದು ಪುನಃ ಹೇಳ ತೊಡಗಿದ— “ ನಮಸ್ಕಾರಕ್ಕೆ ಪ್ರತಿಯಾಗಿ ಯಾರು ಎಷ್ಟು ಕೈ ಎತ್ತಿದರು, ಎಷ್ಟು ಹಿಂದಕ್ಕೆ ಸರಿದರು ಅಥವಾ ನಮಸ್ಕರಿಸುವಾಗ ತಲೆ ಎಷ್ಟು ಬಾಗಿದರು ಮುಂತಾದುವುಗಳನ್ನೇ ಮರ್ಯಾದೆಯ ಮಾಪದಂಡವಾಗಿಟ್ಟುಕೊಂಡು ಜಗಳವಾಡುವುದು ಎಲ್ಲಾ ದೇಶದಲ್ಲಿಯೂ ಇದೆ. ಪತ್ರ ಪುಸ್ತಕದ ಹಾಳೆ ಹಾಳೆಗಳಲ್ಲಿ ಅಹಂಕಾರದ ಮದ ತುಂಬಿರುವುದು ಕಂಡು ಬರುತ್ತದೆ. ಆದರೆ ಅಂದು ತಾಯಿಯಲ್ಲದಿದ್ದಾಗ್ಯೂ ಬೇರೊಬ್ಬರ ಮಕ್ಕಳ ತಾಯಿಯಾಗಿ ನಮ್ಮ ಮನೆಯಲ್ಲಿ ಅಮ್ಮನು ಕಾಲಿಟ್ಟಾಗ, ಆಶ್ರಿತರು, ಪರಿಜನರು, ಬಂಧು ಬಾಂಧವರು ಎಲ್ಲರ ಹೃದಯದಲ್ಲೂ ವಿಷ ಉಕ್ಕಿ ಹೊರಬೀಳುವಂ ತಿತ್ತು. ಆದಾಗ್ಯೂ ಯಾವ ಶಕ್ತಿಯಿಂದ ಅಮ್ಮನು ಆ ವಿಷವನ್ನು ಅಮೃತ ವನ್ನಾಗಿ ಮಾಡಿದಳೋ ಅದು ಗೃಹಸ್ವಾಮಿನಿಯ ಅಭಿಮಾನವಲ್ಲ, ಗೃಹಿ ಣಿಯ ಸಾಮರ್ಥ್ಯವಲ್ಲ, ಅದು ಅಮ್ಮನದೇ ಆದ ಹಿರಿಮೆ. ಅದು ಎಷ್ಟು ದೊಡ್ಡದೆಂದರೆ ಯಾರೂ ಅದನ್ನು ಉಲ್ಲಂಘಿಸಲಾರದೆ ಹೋದರು. ಆದರೆ ಆ ಹಿರಿಮೆ ನಮ್ಮ ದೇಶದ ಮಹಿಳೆಯರಲ್ಲಿ ಮಾತ್ರ ಇದೆ. ವಿದೇಶೀಯರಿಗೆ ಇದರ ಅರಿವು ಸಹ ಇಲ್ಲ. ಅವರು ವೃತ್ತಪತ್ರಿಕೆಗಳಲ್ಲಿನ ಸಮಾಚಾರ ವನ್ನೇ ಓದಿ ನಮ್ಮ ಮಹಿಳೆಯರನ್ನು “ ದಾಸಿ ” ಎನ್ನುತ್ತಾರೆ, “ ಅಂತಃ ಪುರದ ಸಂಕೋಲೆಗಳಿಂದ ಬಂಧಿತರಾದ ಖೈದಿಗಳು ” ಎನ್ನುತ್ತಾರೆ. ಹೊರ ಹೊರಗೆ ಹಾಗೆ ತೋರಿದರೂ ತೋರಬಹುದು—ಅದು ಅವರ ತಪ್ಪಲ್ಲ— ಮನೆಯ ದಾಸ ದಾಸಿಯರ ಸೇವೆಯಲ್ಲಿ ಅಡಗಿರುವ ಅನ್ನಪೂರ್ಣೆಯ, ರಾಜರಾಜೇಶ್ವರಿಯ ಮೂರ್ತಿಯನ್ನು ಅವರು ಕಾಣದಿದ್ದರೂ ಚಿಂತೆ ಇಲ್ಲ, ಆದರೆ ನೀವು ನೋಡಲಾರಿರಾ ?” ವಂದನ ವಿವಶಳಾದಂತೆ ಅವನ ಮುಖ

ವನ್ನೇ ನೋಡುತ್ತಿದ್ದಳು. ಬ್ಯಾರಿಸ್ಟರ್ ಮಹಾಶಯನು ಇದ್ದಕ್ಕಿದ್ದಂತೆಯೆ ಕೂಗಿ ' ಅಗೋ ಪ್ಲಾಟ್‌ಫಾರಂ ಕಾಣಿಸುತ್ತಿದೆ ' ಎಂದು ಹೇಳಿದ.

ವಂದನಳ ತಂದೆ ಬಹುಶಃ ಅರ್ಧನಿದ್ರಾವಸ್ಥೆಯಲ್ಲಿದ್ದಿರಬಹುದು. ಅವರು ಬೆಚ್ಚಿ ಬಿದ್ದು ' ಬದುಕಿದೆ ' ಎಂದರು.

ಮೆಲುದನಿಯಲ್ಲಿ ವಂದನ ಹೇಳಿದಳು " ಮುಖರ್ಜಿಯವರೆ ನನಗೆ ಕಲ್ಕತ್ತೆಯಲ್ಲಿಳಿಯಲು ಇಷ್ಟವಿಲ್ಲ. ನಿಮ್ಮ ತಾಯಿಯ ಹತ್ತಿರಕ್ಕೆ ಹೋಗಲೇ ಎನ್ನಿಸುತ್ತದೆ. ಹೋಗಿ, ಅಮ್ಮ ನನ್ನಿಂದ ಅನಂತ ಅಪರಾಧವಾಯಿತು ಕ್ಷಮಿಸು, ಎಂದು ಕೇಳುತ್ತೇನೆ" ಎಂದಳು.

ವಿಪ್ರದಾಸ್ ಸುಮ್ಮನೆ ನಕ್ಕ; ಏನೂ ಹೇಳಲಿಲ್ಲ. ಸ್ಟೇಷನ್ನಿನಲ್ಲಿ ಇಳಿದು ' ನೀವು ಎಲ್ಲಿಗೆ ಹೋಗಬೇಕು ಅಂತ ಇದ್ದೀರಿ ' ಎಂದು ಕೇಳಿದ.

ರಾವ್ ಸಾಹೇಬರು ' ನಾನು ಯಾವಾಗ ಬಂದರೂ ಗ್ರ್ಯಾಂಡ್ ಹೊಟೆಲ್‌ನಲ್ಲಿ ಇಳಿದುಕೊಳ್ಳುತ್ತಿದ್ದೆ. ಅವರಿಗೆ ಟೆಲಿಗ್ರಾಂ ಸಹ ಕೊಟ್ಟಿದ್ದೇನೆ ಎಂದರು. ಈ ಮನುಷ್ಯನ ಮುಂದೆ ಗ್ರ್ಯಾಂಡ್ ಹೊಟೆಲ್ ವಿಚಾರವಾಗಿ ಹೇಳಿದ್ದು ವಂದನಳಿಗೆ ಸ್ವಲ್ಪ ನಾಚಿಕೆಯಾಯಿತು. ಪಂಜಾಬಿನ ಬ್ಯಾರಿಸ್ಟರ್ ರೈಲು ಹೊತ್ತಾಗಿ ಬಂದಿತಲ್ಲ ಎಂದು ಸಿಟ್ಟಿನಿಂದ ಅರಚುತ್ತಿದ್ದನು. "ನಾನು ಬಿ. ಎನ್. ಆರ್. ರೈಲಲ್ಲಿ ಹೋಗಬೇಕಿತ್ತು. ವೇಟಿಂಗ್ ರೂಂ ಬಿಟ್ಟರೆ ಬೇರೆ ಗತಿಯಿಲ್ಲ" ಎಂದ. ವಿಪ್ರದಾಸ್ ಸುಮ್ಮನಿದ್ದ ಇದರಿಂದ ರಾವ್‌ಸಾಹೇಬರಿಗೆ ಕೊಂಚ ನಾಚಿಕೆಯಾಯಿತು ಅವರು " ವಿಪ್ರದಾಸ್ ನೀನು—ನೀನು ನಮ್ಮ ಜೊತೆಯಲ್ಲಿ . ..." ಎನ್ನುತ್ತಿರುವಾಗ ವಿಪ್ರದಾಸನು ' ಗ್ರ್ಯಾಂಡ್ ಹೋಟೆಲ್‌ಗೋ " ಎಂದು ನಕ್ಕು " ನನಗೋಸ್ಕರ ಯೋಚಿಸಬೇಡಿ ಬಹೂಬಜಾರಿನಲ್ಲಿ ದ್ವಿಜದಾಸನ ಮನೆ ಇದೆ - —ಆಗಾಗ್ಗೆ ಬಂದು ಹೋಗಿ ಮಾಡಬೇಕಾಗುತ್ತೆ. ಅಲ್ಲಿ ಆಳು ಕಾಳು ಎಲ್ಲ ಇದಾರೆ ಇವತ್ತು ಎಲ್ಲರೂ ಅಲ್ಲಿಗೇ ಏಕೆ ಹೋಗಬಾರದು '' ಅಂದ.

ವಂದನ ಪುಲಕಿತಳಾಗಿ ' ನಡೆಯಿರಿ ಎಲ್ಲರೂ ಅಲ್ಲಿಗೇ ಹೋಗೋಣ, ಎಂದಳು.

ಅವಳಿಗೆ ತಲೆಯಮೇಲಿಂದ ಒಂದು ಹೊರೆ ಇಳಿಸಿದಂತಾಯಿತು. ಆನಂದಪರವಶಳಾಗಿ ಆ ಇಬ್ಬರು ಜೊತೆಯ ಪ್ರಯಾಣಿಕರುಗಳನ್ನೂ ಬರುವಂತೆ ಅವಳೇ ಆದರದಿಂದ ಕರೆದಳು.

ಅನಂತರ ಎಲ್ಲರೂ ಮೋಟಾರನ್ನು ಹತ್ತಿ ಹೊರಟರು.

## ೬

ವಂದನ ಬೆಳಿಗ್ಗೆ ಎದ್ದು ಮನೆಯನ್ನು ನೋಡಿದಾಗ ತಾನು ಊಹಿಸಿದಂತೆ ಅದು ಇರಲಿಲ್ಲ. ಗಂಡುಬಿಡಾರ ಆದ್ದರಿಂದ ಸಂದುಮೂಲೆಯಲ್ಲಿ ಕಸಕಡ್ಡಿ, ಮೆಟ್ಟಲಿನಮೇಲೆ ಉಗುಳು ಗೋಡೆಗಳ ಮೇಲೆ ತಂಬುಲ, ಹರುಕು ಮುರುಕು ಸಾಮಾನು, ಅತ್ತಿತ್ತ ಬಿದ್ದು ಅಲೆದಾಡುತ್ತಿರುವ ಮಾಸಿದ ಹಾಸಿಗೆ, ಇಳಿಬಿದ್ದ ಇಲ್ಲಣ, ಜೇಡರ ಬಲೆ ಒಟ್ಟಿನಲ್ಲಿ ಅವ್ಯವಸ್ಥೆಯು ಅಟ್ಟಹಾಸನೇ ತಾಂಡವವಾಡುತ್ತಿರಬೇಕೆಂದು ಭಾವಿಸಿದ್ದಳು. ಹಿಂದಿನರಾತ್ರಿ ದೀಪದ ಬೆಳಕಿನಲ್ಲಿ ಅವಳು ಮನೆಯನ್ನು ಚೆನ್ನಾಗಿ ನೋಡಿರಲಿಲ್ಲ. ನೋಡುವಷ್ಟು ಅವಕಾಶವೂ ಇರಲಿಲ್ಲ. ಆದರೆ ಬೆಳಿಗ್ಗೆ ಎದ್ದು ನೋಡಿದರೆ ಏನು ವ್ಯವಸ್ಥೆ, ಎಷ್ಟು ನಿರ್ಮಲವಾಗಿದೆ! ಅವಳಿಗೆ ನಿಜವಾಗಿಯೂ ಆಶ್ಚರ್ಯವಾಯಿತು. ದೊಡ್ಡ ಮನೆ, ಅನೇಕ ಕೋಣೆಗಳು, ನಡುಮನೆ, ಪಡಸಾಲೆ ಇವು ಬೇರೆ ಎಲ್ಲವೂ ಸ್ವಚ್ಛವಾಗಿವೆ. ಬಾಗಿಲಿನಿಂದ ಹೊರಗ ಪ್ರೌಢವಯಸ್ಸಿನ ವಿಧವೆಯೊಬ್ಬಳು ನಿಂತಿದ್ದಾಳೆ; ಸದ್ಗೃಹಸ್ಥರ ಮನೆಯವಳಿರಬೇಕು ಅವಳು ಕೊರಳ ಸುತ್ತಲೂ ಸೆರಗನ್ನು ಬಿಗಿದುಕೊಂಡಿದ್ದಳು. ಆಕೆ ನಮಸ್ಕರಿಸಲು ವಂದನ ಸಂಕೋಚದಿಂದ ತಲೆಬಾಗಿದಳು. ಅವಳಿಗೆ ಹೇಗೇಗೋ ಆಯಿತು.

ವಿಧವೆಯು "ಅಮ್ಮಾ, ತಮಗಾಗಿ ಕಾದಿದ್ದೆ ಬನ್ನಿ ಬಚ್ಚಲು ಮನೆಯನ್ನು ತೋರಿಸುತ್ತೇನೆ. ನಾನು ಈ ಮನೆಯ ದಾಸಿ" ಎಂದಳು.

"ತಂದೆಯವರು ಎದ್ದರೋ ?" ವಂದನ ಕೇಳಿದಳು.

"ಇಲ್ಲ. ನಿನ್ನೆ ಅವರು ಮಲಗಿದಾಗ ಬಹಳ ಹೊತ್ತಾಗಿತ್ತು ನೋಡಿ, ಏಳುವುದೂ ಹೊತ್ತಾದೀತು."

"ನಮ್ಮ ಜೊತೆಯಲ್ಲಿ ಇನ್ನಿಬ್ಬರು ಬಂದಿದ್ದರಲ್ಲ, ಅವರು ?

"ಇಲ್ಲ ಅವರಿನ್ನೂ ಎದ್ದಿಲ್ಲ."

"ನಿಮ್ಮ ಈ ಮನೆಯ ಯಜಮಾನರು ಮಲಗಿದ್ದಾರೋ ?"

"ಇಲ್ಲ ಅವರು ಗಂಗಾಸ್ನಾನ ಪೂಜೆ ಪಾಠ ಎಲ್ಲವನ್ನೂ ಮುಗಿಸಿಕೊಂಡು ಆಫೀಸಿಗೆ ಹೋಗಿದ್ದಾರೆ. ಅವರಿಗೆ ಹೇಳಿ ಕಳುಹಿಸಲೆ" ಎಂದು ನಗುತ್ತಾ ಕೇಳಿದಳು.

"ಬೇಡ ಏನೂ ಬೇಕಾಗಿಲ್ಲ"

ಸ್ನಾನದ ಮನೆ ಅಲ್ಲಿಂದ ಸ್ವಲ್ಪ ದೂರವಾಗಿದ್ದು ಒಂದು ಸಣ್ಣ ಅಂಗಳವನ್ನು ದಾಟಿ ಹೋಗಬೇಕಾಗಿತ್ತು. ಹೋಗುತ್ತಾ ಹೋಗುತ್ತ 'ನಿಮ್ಮಲ್ಲಿ ಬಾತ್‌ರೂಮು ಮಲಗುವ ಮನೆಯ ಹತ್ತಿರ ಇರುವುದಿಲ್ಲ ಏಕೆ,' ಎಂದು ವಂದನ ಪ್ರಶ್ನಿಸಿದಳು.

"ಇಲ್ಲಿ ಅಮ್ಮನವರು ಇಲ್ಲಿಗೆ ದೇವಿಯ ದರ್ಶನಕ್ಕೆಂದು ಬಂದಾಗ ಇದೇ ಮನೆಯಲ್ಲಿ ಇಳಿಯುತ್ತಾರೆ. ಅದಕ್ಕೆ ಹಾಗಿರಲು ಸಾಧ್ಯವಿಲ್ಲ" ಎಂದು ದಾಸಿ ಉತ್ತರಕೊಟ್ಟಳು.

'ಇಲ್ಲಿ ನಡು ಅದೇ ಪ್ರಬಲ ಪ್ರತಾಪಿ ಅಮ್ಮ! ಆಚಾರ ಅನಾಚಾರಗಳ ಕಠೋರಶಾಸನ!' ಎಂದು ವಂದನ ಮನಸ್ಸಿನಲ್ಲಿಯೇ ಅಂದುಕೊಂಡಳು. ಬ್ಯಾಗಿನಿಂದ ಸೀರೆ ಕುಪ್ಪಸ ಎಲ್ಲ ತೆಗೆದುಕೊಂಡು ಬಂದು ಪುನಃ ದಾಸಿಯನ್ನು ಕುರಿತು, "ನಿನ್ನನ್ನು ಏನೆಂದು ಕರೆಯಬೇಕು ನೀನಲ್ಲದೆ ಈ ಮನೆಯಲ್ಲಿ ಬೇರೆ ದಾಸಿಯರಿದ್ದಾರೆಯೇ?" ಎಂದು ಕೇಳಿದಳು.

"ಇದ್ದಾರೆ ಅವರಿಗೆ ಬೇರೆ ಕೆಲಸ ಇರುತ್ತೆ. ಮೇಲೆ ಬರಲು ಅವರಿಗೆ ಅಧಿಕಾರವಿಲ್ಲ. ನಿಮಗೇನು ಬೇಕಾದರೂ ನನಗೆ ಹೇಳಿ ನನ್ನ ಹೆಸರು ಅನ್ನದಾ ಅಂತ ಅನ್ನುತ್ತಾರೆ . ನಾನು ಹಳಬಳು. ಏನಾದರೂ ತಪ್ಪಾಗಿದ್ದರೆ ಕ್ಷಮಿಸಿ, ಮನಸ್ಸಿಗೆ ಹಚ್ಚಿಕೊಳ್ಳಬೇಡಿ" ಎಂದಳು.

ಅವಳ ವಿನಯ ವಚನಗಳನ್ನು ಕೇಳಿ ವಂದನ ಮನಸ್ಸಿನಲ್ಲಿ ಹರ್ಷಿತಳಾದಳು. "ಅನ್ನದಾ, ನಿನ್ನ ಮನೆ ಎಲ್ಲಿದೆ? ಮನೆಯಲ್ಲಿ ಯಾರು ಯಾರು ಇದ್ದಾರೆ" ಎಂದು ಕೇಳಿದಳು.

'ನನ್ನ ಮನೆ ಇವರ ಊರಿನಲ್ಲಿ ಅಂದರೆ ಬಲರಾಮಪುರದಲ್ಲಿ ಇದೆ. ನನಗೆ ಒಬ್ಬ ಹುಡುಗ ಇದ್ದಾನೆ ಅವನನ್ನು ಇವರೇ ಓದಿಸಿ ಈಗ ಅವನಿಗೆ ಒಂದು ಕೆಲಸ ಕೊಟ್ಟಿದ್ದಾರೆ. ಹೆಂಡತಿ ಜೊತೆಯಲ್ಲಿ ಅವನು ಊರಿನಲ್ಲಿ ಸುಖವಾಗಿದ್ದಾನೆ.''

"ಹಾಗಾದರೆ ನೀನು ಇನ್ನೂ ಏಕೆ ಕಂಡವರ ಮನೆ ಕೆಲಸ ಮಾಡುತ್ತಿದ್ದೀಯ? ಮಗ ಸೊಸೆಯರ ಜೊತೆಯಲ್ಲಿರಬಾರದೆ?" ಎಂದು ಕುತೂಹಲದಿಂದ ಕೇಳಿದಳು.

"ನಾನೂ ಹಾಗೇ ಮಾಡಬೇಕು ಅಂತ ಇದ್ದೆ. ಆದರೆ ಸಾಧ್ಯವಿಲ್ಲ. ನನಗೆ ಕಷ್ಟಕಾಲ ಬಂದಾಗ ಯಜಮಾನರಿಗೆ ಮಾತುಕೊಟ್ಟಿ

ದ್ದೇನೆ. ನನ್ನ ಮಗ ಓದಿ ದೊಡ್ಡವನಾದರೆ ನಾನು ಇನ್ನೊಬ್ಬರ ಮಕ್ಕಳನ್ನು ದೊಡ್ಡವರಾಗುವವರೆಗೂ ನೋಡಿಕೊಳ್ಳುತ್ತೇನೆ, ಅಂತ. ಆ ಹೊರೆಯನ್ನು ಇಳಿಸಬೇಕು ಅಂದರೂ ಇಳಿಸಲಿಕ್ಕೆ ಆಗೋಹಾಗಿಲ್ಲ. ಊರಿನ ಎಷ್ಟೋ ಹುಡುಗರು ಈ ದೂರ ದೇಶದಲ್ಲಿ ಬಂದು ಓದುತ್ತಿದ್ದಾರೆ. ನಾನು ಅವರನ್ನು ನೋಡಿಕೊಳ್ಳದಿದ್ದರೆ ಇಲ್ಲಿ ಇನ್ನು ಯಾರೂ ಇಲ್ಲ." ಎಂದು ಅನ್ನದಾ ಹೇಳಿದಳು.

"ಅವರು ಈ ಮನೆಯಲ್ಲಿಯೇ ಇದ್ದಾರೆ ಅಲ್ಲವೆ ?"

"ಹೌದು ಇಲ್ಲೇ ಇದ್ದು ಕಾಲೇಜುಗಳಲ್ಲಿ ಓದುತ್ತಾರೆ. ನಿಮಗೆ ಬಹಳ ಹೊತ್ತಾಯಿತು. ನಾನು ಇಲ್ಲೇ ಹೊರಗಡೆ ಇರುತ್ತೇನೆ. ಕರೆದ ಕೂಡಲೆ ಬರುತ್ತೇನೆ"

ವಂದನ ಬಾತ್‌ರೂಂಗೆ ಹೋಗಿ ನೋಡುತ್ತಾಳೆ ಅಲ್ಲಿ ಎಷ್ಟು ತರಹೆ ವ್ಯವಸ್ಥೆ. ಒಂದರ ಪಕ್ಕದಲ್ಲೊಂದು ಹೀಗೆ ಮೂರು ಕೋಣೆಗಳಿವೆ. ಮಡಿ ಮೈಲಿಗೆ ಕಾಪಾಡಲು ಮನುಷ್ಯನ ಬುದ್ಧಿ ಎಷ್ಟೆಷ್ಟು ಉಪಾಯಗಳನ್ನು ಯೋಚಿಸಬಲ್ಲುದೊ ಅವೆಲ್ಲ ಅಲ್ಲಿದೆ. ನೆಲ, ಬಚ್ಚಲು, ಕಟ್ಟೆ ಎಲ್ಲವೂ ಅಮೃತಶಿಲೆಯಿಂದ ಮಾಡಿದವು. ಒಂದು ಕಡೆ ಮೂರು ತಾಮ್ರದ ಹಂಡೆಗಳು. ಬಹುಶಃ ಗಂಗೆಯ ಜಲವನ್ನು ತುಂಬಿಡುವುದಕ್ಕೆ ಇರಬೇಕು- ದಿನವೂ ತೊಳೆದು ಒರಸಿಟ್ಟಿರುವುದರಿಂದ ಥಳಥಳ ಹೊಳೆಯುತ್ತಿವೆ. ಅಮ್ಮನವರು ಯಾವಾಗ ಬಂದಿದ್ದರು, ಎಂದು ಬರುತ್ತಾರೆ ಅನ್ನುವದು ಒಬ್ಬರಿಗಾದರೂ ಗೊತ್ತಿಲ್ಲ ಆದಾಗ್ಯೂ ಸ್ವಲ್ಪವಾದರೂ ಸೋಮಾರಿತನದ ಕುರುಹು ಕಾಣಿಸಬೇಕಲ್ಲ ಅಲ್ಲಿ! ಅಣಿಮಾಡಿಟ್ಟಿರುವ ರೀತಿಯನ್ನು ನೋಡಿದರೆ ಅವರು ಇಲ್ಲೇ ಇದಾರೊಏನೊ ಅನ್ನುವಂತಿದೆ. ಇಂಥ ಕೆಲಸವನ್ನು ಬರೆ ಜೋರು ಮಾಡಿ ಅಥವ ಕಟ್ಟಪ್ಪಣೆಯ ಪಟ್ಟಿನಿಂದಲೇ ಮಾಡಿಸಲು ಸಾಧ್ಯವಿಲ್ಲ. ಇದನ್ನು ನೋಡಿದ ಕೂಡಲೆ ಇವನ್ನು ಮೀರಿದ ಯಾವುದೋ ಶಕ್ತಿ ಈ ಕೆಲಸವನ್ನು ಮಾಡಿಸುತ್ತಿದೆ ಎಂದು ವಂದನ ಅರಿತಳು. ಈ ತಾಯಿ-ಹೆಂಗಸು-ಈ ಮನೆಯಲ್ಲಿ ಅವಳಿಗಿರುವ ಸ್ಥಾನವೇನು ? ಎಷ್ಟು ಗೌರವ ? ಇದನ್ನೆ ಅವಳು ಯೋಚಿಸುತ್ತ ನಿಂತುಕೊಂಡಳು. ಅವಳು ಭಾರತೀಯ ಮಹಿಳೆಯ ದುಃಖದ ಕತೆಗಳನ್ನು ಎಷ್ಟೋ ಓದಿದ್ದಾಳೆ. ಸ್ವತಃ ಹೆಂಗಸಾಗಿ ಹೆಂಗಸರ ದೀನ ಹೀನ ಅವಸ್ಥೆಯನ್ನು ವಿಚಾರಿಸಿ ಮನಸ್ಸಿನಲ್ಲಿಯೇ ಮರುಗಿ ನಾಚಿದ್ದಾಳೆ.

ಇದೇನು ಸುಳ್ಳಲ್ಲ. ಆದರೆ ಅಲ್ಲಿ ಒಬ್ಬಳೇ ನಿಂತು ವಿಚಾರಿಸುತ್ತ ಆ ಮಾತುಗಳ ಯಥಾರ್ಥವನ್ನು ಒಪ್ಪಿಕೊಳ್ಳಲು ಅನುಮಾನಿಸತೊಡಗಿದಳು.

ಅವಳು ಹೊರಕ್ಕೆ ಬಂದೊಡನೆ ಅನ್ನದ ನಸುನಕ್ಕು "ಬಹಳ ಹೊತ್ತಾಯಿತು. ಎಲ್ಲರೂ ಅಡಿಗೆಯ ಮನೆಯಲ್ಲಿ ನಿಮ್ಮ ದಾರಿಯನ್ನೇ ನೋಡುತ್ತಿದ್ದಾರೆ" ಎಂದಳು.

"ನಿಮ್ಮ ಸ್ವಾಮಿ ಆಫೀಸಿಂದ ಬಂದರೆ ?"

"ಹ್ಞೂ, ಅವರೂ ಬಂದಿದ್ದಾರೆ ಕೆಳಗೆ ಇದಾರೆ."

"ಬಹುಶಃ ನಮ್ಮ ಜೊತೆಯಲ್ಲಿ ಏನೂ ತಿನ್ನುವದಿಲ್ಲ ಅಂತ ಕಾಣುತ್ತದೆ ಅಲ್ಲವೆ ?"

ಅನ್ನದ ಸ್ವಲ್ಪ ನಕ್ಕು ನುಡಿದಳು. "ತಿನ್ನುತ್ತಾರೆ ಆದರೆ ಈಗಲ್ಲ ಮಧ್ಯಾಹ್ನದಮೇಲೆ. ಇವತ್ತು ಏನೂ ಇಲ್ಲ. ಏಕಾದಶಿ ಆದ್ದರಿಂದ ಸಾಯಂಕಾಲ ಏನಾದರೂ ಹಣ್ಣೋ ಹಂಪಲೋ ತಿನ್ನಬಹುದು"

ಅನ್ನದ ಕೇವಲ ಮನೆಯದಾಸಿ ಅಲ್ಲವೆಂದು ವಂದನ ಊಹಿಸಿದಳು. "ಅಲ್ಲ ಅವರೇನು ಬ್ರಾಹ್ಮಣ ವಿಧವೆಯೆ ಏಕಾದಶಿ ಉಪವಾಸ ಮಾಡುವುದಕ್ಕೆ ! ಅದಲ್ಲದೆ ನಿನ್ನೆಯ ದಿನ ರೈಲಿನಲ್ಲಿ ಏಕಾದಶಿ ಅಲ್ಲದಿದ್ದರೂ ದಶಮಿ ಉಪವಾಸವೇ ಆಗಿದೆಯಲ್ಲ" ಎಂದಳು.

"ಆದರೇನಂತೆ ಉಪವಾಸಕ್ಕೆ ಅವರೇನು ಜಗ್ಗುವುದಿಲ್ಲ. ಅಮ್ಮಾ ಆಗಾಗ್ಗೆ ಹೇಳುತ್ತಿರುತ್ತಾರೆ. ಎಲ್ಲೋ ನಮ್ಮ ವಿಪ್ರಬಾಬು ಹಿಂದಿನ ಜನ್ಮದಲ್ಲಿ ತಪಸ್ಸುಮಾಡಿ ಉಪವಾಸ ಸಿದ್ಧಿಯ ವರ ಪಡೆದಿದ್ದಾನೆ ಅಂತ ಅವರ ಊಟ ನೋಡಿದರೆ ಆಶ್ಚರ್ಯವಾಗುತ್ತೆ"

ವಂದನ ಕೆಳಗಿಳಿದು ನೋಡುತ್ತಾಳೆ ತಮ್ಮ ವಾಡಿಕೆಯ ಟೀ, ಬ್ರೆಡ್, ಯಗ್ ಎಲ್ಲ ಟೇಬಲ್ ಮೇಲೆ ಸರಿಯಾಗಿ ಇಟ್ಟಿದ್ದಾರೆ. ಅಪ್ಪ, ಬ್ಯಾರಿಸ್ಟರು ಮತ್ತು ಅವನ ಹೆಂಡತಿ ಇವರು ಹಸಿವನ್ನು ತಾಳಲಾರದೆ ಬಳಲುತ್ತಿದ್ದಾರೆ. ಅವರಿಗೆ ಸಹನೆ ಮೀರಿದೆ ಅಷ್ಟರಲ್ಲಿ ವಂದನ ಬಂದದ್ದನ್ನು ನೋಡಿ ಅವಳ ತಂದೆ ಕೈಯಲ್ಲಿದ್ದ ಪತ್ರಿಕೆಯನ್ನು ಕೆಳಕ್ಕೆ ಎಸೆದು "ಓ, ಎಷ್ಟು ಹೊತ್ತು ಮಾಡಿಬಿಟ್ಟೆ. ಇವತ್ತು ಇನ್ನೇನೂ ಕೆಲಸ ಆಗೋದಿಲ್ಲ ಕಾಣುತ್ತೆ" ಎಂದು ಆಕ್ಷೇಪಿಸುವ ದನಿಯಲ್ಲಿ ಹೇಳಿದರು.

ವಿಪ್ರದಾಸ್ ಪಕ್ಕದಲ್ಲಿ ಕುಳಿತಿದ್ದ. ವಂದನ ಅವನನ್ನು ದ್ದೇಶಿಸಿ "ತಾವು ತೆಗೆದುಕೊಳ್ಳುವುದಿಲ್ಲವೆ? " ಎಂದು ಕೇಳಿದಳು. ವಿಪ್ರದಾಸನು ನಗುತ್ತ

" ಟೀಯನ್ನೋ ? ಇಲ್ಲ ನಾನು ಟೀ ಕುಡಿಯುವುದಿಲ್ಲ. ನಾನು ಊಟ ಮಾಡುತ್ತೇನೆ. ಅದಕ್ಕೆ ಇನ್ನೂ ಹೊತ್ತಾಗಿಲ್ಲ. ನನಗೋಸ್ಕರ ಏನೂ ಯೋಚಿಸಬೇಕಾಗಿಲ್ಲ. ನೀನು ತೆಗೆದುಕೋ '' ಎಂದು ಉತ್ತರಕೊಟ್ಟನು.

ವಂದನ ಇದಕ್ಕೆ ಪ್ರತ್ಯುತ್ತರವನ್ನು ಕೊಡದೆ ತಂದೆ ಮತ್ತು ಉಳಿದ ಇಬ್ಬರು ಅತಿಥಿಗಳನ್ನು ಕುರಿತು--'' ನನ್ನಿಂದ ತಪ್ಪಾಯಿತು. ನಾನು ಮೊದಲೆ ಹೇಳಿಕಳುಹಿಸಬೇಕಾಗಿತ್ತು. ಆದರೆ ಮರೆತುಬಿಟ್ಟೆ. ನನಗೆ ಟೀ ತೆಗೆದುಕೊಳ್ಳಲು ಏಕೋ ಇವತ್ತು ಇಷ್ಟವಿಲ್ಲ. ಇನ್ನು ಹೊತ್ತು ಮಾಡಬೇಡಿ. ತಾವೆಲ್ಲ ತೆಗೆದುಕೊಳ್ಳಿ. ನಿಮಗೆ ನಾನು ಟೀ ಸರಿ ಮಾಡಿ ಕೊಡುತ್ತೇನೆ,'' ಎಂದು ಹೇಳಿ ಟೀ ಮಾಡಲು ಪ್ರಾರಂಭಿಸಿದಳು.

ಎಲ್ಲರೂ ತಮ್ಮ ತಮ್ಮ ಕಾರ್ಯದಲ್ಲಿ ತೊಡಗಿದರು. ಮೂಲೆ ಯಲ್ಲಿ ನಿಂತಿದ್ದ ನೌಕರನು ಸಂಕೋಚದಿಂದ ಅಕ್ಕಪಕ್ಕ ನೋಡುತ್ತ ನಿಂತಿದ್ದ. ಆಗ ಅವಳ ತಂದೆ ಉದ್ವೇಗದಲ್ಲಿ " ಏಕಮ್ಮ ವಂದನ, ನಿನ್ನ ದೇಹಸ್ಥಿತಿ ಚೆನ್ನಾಗಿಲ್ಲವೆ ? " ಎಂದು ಕೇಳಿದರು. ವಂದನ ಟೀ ಮಾಡುತ್ತ ಉತ್ತರಕೊಟ್ಟಳು " ಇಲ್ಲ ಇಲ್ಲ. ದೇಹಸ್ಥಿತಿ ಚೆನ್ನಾಗಿದೆ. ಏನೂ ತೆಗೆದು ಕೊಳ್ಳಲು ಇಚ್ಛೆ ಇಲ್ಲ ''

" ಹೋಗಲಿ ಬಿಡು. ನಿನ್ನೆ ರಾತ್ರೆ ಊಟವಾದಾಗ ಬಹಳ ಹೊತ್ತಾಗಿತ್ತು ಅಜೀರ್ಣವಾಗಿರಬಹುದು. ಇದಲ್ಲದೆ ಹೊತ್ತು ಬೇರೆ ಆಗಿದೆ. ಪಿತ್ತೋದ್ರೇಕವಾಗಿದ್ದರೂ ಆಗಿರಬಹುದು "

" ಬಹುಶಃ ಅದೇ ಇರಬೇಕು, ಮಧ್ಯಾಹ್ನ ಮುಖರ್ಜಿಯವರ ಜೊತೆಯಲ್ಲಿ ಊಟಮಾಡುತ್ತೇನೆ. "

ಅವಳ ಮಾತಿನ ಕಡೆ ಯಾರೂ ಅಷ್ಟು ಗಮನ ಕೊಟ್ಟಿರಲಿಲ್ಲ. ಆದರೆ ವಿಪ್ರದಾಸನ ಕಣ್ಣುಮುಂದೆ ಸ್ವಲ್ಪ ಹೊತ್ತು ಮಬ್ಬು ಕವಿದಂತೆ ಆಯಿತು.

ಆ ಜವಾನ ಏನು ಯೋಚಿಸಿ ಹೇಳಿದನೊ ಏನೋ ಅಂತೂ " ಇವತ್ತು ಏಕಾದಶಿ ಆದುದರಿಂದ ಸ್ವಾಮಿಯವರು ಈ ಹೊತ್ತು ಊಟ ಮಾಡುವದಿಲ್ಲ, ಏನಾದರೂ ಹಣ್ಣುಗಿಣ್ಣು ತಿನ್ನುತ್ತಾರೆ " ಅಂದ. ವಂದನ ಇದೇ ಈಗ ಏಕಾದಶಿ ಎಂತ ಕೇಳಿ ಬಂದಿದ್ದಳು. ಆದರೂ ಏನೂ ತಿಳಿಯದವಳಂತೆ " ಏನು ಕೇವಲ ಹಣ್ಣು ಹಾಲು ಅಷ್ಟೇತಾನೆ ? ಅಲ್ಪಾಹಾರ ಚೆನ್ನಾಗಿರುತ್ತದೆ. ನನಗೆ ಇವತ್ತು ಅದೇ ಒಳ್ಳೆಯದು.

ಅಲ್ಲವೆ ಮುಖರ್ಜಿಗಳೆ?''

ವಿಪ್ರದಾಸನು ನಕ್ಕು ತಲೆಯೇನೊ ಹಾಕಿದ. ಆದರೆ ಇಷ್ಟು ಸ್ವಚ್ಛಂದವಾಗಿ, ಎದುರೆದುರಿಗೆ ಯಾರಾದರೂ ಹೀಗೆ ಹಾಸ್ಯ ಮಾಡಬಲ್ಲರೆಂಬುದನ್ನು ಅರಿತು ಮನಸ್ಸಿನಲ್ಲಿಯೆ ಚಕಿತನಾದ. ಅವನ ಕಡೆ ನೋಡಿದ ವಂದನ ಇದನ್ನರಿತಳು.

ಹೊರಗಡೆ ಕೆಲಸ ಕಾರ್ಯವನ್ನೆಲ್ಲಾ ಮುಗಿಸಿಕೊಂಡು ವಂದನ ಮನೆಗೆ ಬಂದಾಗ ಇಳಿಹೊತ್ತಾಗಿತ್ತು. ಹೆಂಡತಿಯೊಡನೆ ತಿರುಗಲು ಹೋಗಿದ್ದ ಬ್ಯಾರಿಸ್ಟರ್ ತಮಾಷೆ ಬಂಗಲೆ, ಚಿಡಿಯಾಖಾನೆ, ಕೋಟೆ, ವಿಕ್ಟೋರಿಯ ಮೆಮೋರಿಯಲ್ ಮುಂತಾಗಿ ನೋಡಬೇಕಾದವುಗಳನ್ನು ನೋಡಲು ಹೋಗಿದ್ದು ಇನ್ನೂ ಹಿಂತಿರುಗಿ ಬಂದಿರಲಿಲ್ಲ. ಆ ರಾತ್ರೆ ರೈಲಿಗೆ ಹೊರಡಬೇಕು ಅನ್ನುತ್ತಿದ್ದವರು ತಮ್ಮ ಪ್ರೋಗ್ರಾಂ ಬದಲಾಯಿಸಿ ಸದ್ಯಕ್ಕೆ ಹೋಗುವುದನ್ನು ಮುಂದುಹಾಕಿದಂತಿತ್ತು. ರಾವ್ ಸಾಹೇಬರು ಬಟ್ಟೆಯನ್ನು ಬದಲಾಯಿಸಲು ತಮ್ಮ ಕೋಣೆಗೆ ಹೋದರು. ವಂದನ ರೂಮಿನ ಎದುರುಗಡೆ ಅನ್ನದಳನ್ನು ಕಂಡಳು. ಅನ್ನದ ಕೊಂಚ ಆಕ್ಷೇಪಿಸುವ ದನಿಯಲ್ಲಿ "ಅಮ್ಮ ದಿನವೆಲ್ಲ ಊಟ ತಿಂಡಿ ಇಲ್ಲದೆ ಕಳೆದುಬಿಟ್ಟಿರಲ್ಲ—ಈಗಲಾದರೂ ಕೈಕಾಲು ತೊಳೆದುಕೊಳ್ಳಿ. ಹಣ್ಣುಹಂಪಲು ಎಲ್ಲ ಸಿದ್ಧವಾಗಿದೆ." ಎಂದು ಹೇಳಿದಳು.

" ಮುಖರ್ಜಿಯವರು! ಅವರೆಲ್ಲಿ?"

'ಅವರಿಗಾಗಿ ಕಾಯಬೇಕಾಗಿಲ್ಲ ದಿನವೂ ಅವರು ಹೀಗೆಯೇ ಊಟಕ್ಕಿಂತ ಊಟಮಾಡದೆ ಇರೋದೆ ಅವರ ನಿಯಮ.''

"ಆಗಲಿ, ಈಗ ಎಲ್ಲಿದ್ದಾರೆ ಅವರು?''

"ದಕ್ಷಿಣೇಶ್ವರ ಕಾಲಿಯ ದರ್ಶನಕ್ಕೆ ಹೋಗಿದ್ದಾರೆ. ಇನ್ನೇನು ಬರುವ ಹೊತ್ತು''

"ಸರಿ, ಹಾಗಾದರೆ ಅವರು ಬಂದಮೇಲೆ ಎಲ್ಲಾ ಸಿದ್ಧಮಾಡು. ಆದರೆ ಮಿಕ್ಕವರಿಗೆ? ಅವರಿಗೇನು ಏರ್ಪಾಟಾಗಿದೆ? ನಡಿ, ನಿಮ್ಮ ಅಡಿಗೆ ಮನೆ ಹೇಗಿದೆ ನೋಡೋಣ.''

"ಬನ್ನಿ. ಆದರೆ ಇವತ್ತು ಅವರ ಊಟಕ್ಕೆ ಅಡಿಗೆಮನೆಯಲ್ಲೇನು ಏರ್ಪಾಟು ಮಾಡಿಲ್ಲ. ಹೊಟೆಲ್‌ಗೆ ಹೇಳಿದ್ದಾರೆ ಅಲ್ಲಿಂದ ಎಲ್ಲ ಸಾಮಾನುಗಳು ಬರುತ್ತವೆ."

ವಂದನಳಿಗೆ ಆಶ್ಚರ್ಯವಾಯಿತು. "ಇದೇನು ಹೀಗೆ ಮಾಡಲು ಯಾರು ನಿಮಗೆ ಹೇಳಿದವರು ?"

"' ಯಜಮಾನರೇ ಹೇಳಿ ಹೋಗಿದ್ದಾರೆ"

"ಆದರೆ ಅಲ್ಲಿಯ ಹೊಲಸು ಪದಾರ್ಥ ಎಲ್ಲಿ ಇಟ್ಟುಕೊಂಡು ತಿನ್ನುತ್ತಾರೆ?''

ಇದೇ ಮನೆಯಲ್ಲಿ.

ಅಮ್ಮಾವ್ರು ಕೇಳಿದರೆ ಏನಂತಾರೆ ?

ಅನ್ನದ ಕಕ್ಕಾಬಿಕ್ಕಿಯಾದಳು. "ಇಲ್ಲ. ಅವರಿಗೆ ಗೊತ್ತಾಗುವುದಿಲ್ಲ. ಕೆಳಗಡೆ ರೂಮಿನಲ್ಲಿ ಏರ್ಪಾಟು ಮಾಡುತ್ತಾರೆ. ಪಾತ್ರೆಗೀತ್ರೆ ಎಲ್ಲ ಹೋಟೆಲಿನಿಂದ ಬರುತ್ತೆ. ಆದ್ದರಿಂದ ಏನೊಂದು ಅಡಚಣೆಯೂ ಇಲ್ಲ."

"ಅವರೇನೊ ಹೇಳಿ ಹೋದರು ಏರ್ಪಾಡು ಮಾಡಿದವರು ಯಾರು ? ಅವರ ಹತ್ತಿರ ನನ್ನನ್ನು ಕರೆದುಕೊಂಡು ಹೋಗು''

"ಬನ್ನಿ"

ಮುಖರ್ಜಿಯವರ ಭಾರಿ ವ್ಯಾಪಾರ ಕಲ್ಕತ್ತೆಯಲ್ಲಿ ನಡೆಯುತ್ತಿತ್ತು. ಅಲ್ಲೆ ಮುಂದುಗಡೆಯ ಮೂರು ಕೋಣೆಯಲ್ಲಿ ಅದರ ಆಫೀಸು. ಗುಮಾಸ್ತರು, ಅಕೌಂಟೆಂಟ್, ಕ್ಲಾರ್ಕ್, ಜವಾನ, ಮೇನೇಜರು ಮುಂತಾಗಿ ಆಫೀಸಿಗೆ ಅತ್ಯಗತ್ಯವಾಗಿ ಬೇಕಾದ ಎಲ್ಲ ಕರ್ಮಚಾರಿಗಳೂ ಇದ್ದರು. ವಂದನಳನ್ನು ನೋಡಿ ಎಲ್ಲರೂ ಎದ್ದು ನಿಂತರು. ವಯಸ್ಸು ಮತ್ತು ಕುಳಿತ ಸ್ಥಾನ ಇವುಗಳಿಂದ ಮೇನೇಜರು ಯಾರೆಂದು ಪತ್ತೆಹಚ್ಚಿ ಅವರನ್ನು ಸನ್ನೆಮಾಡಿ ಕರೆದಳು. ಬಂದನಂತರ "ಏನು ತಾವೇ ಹೋಟೆಲಿಗೆ ಹೋಗಿ ಆರ್ಡರ್ ಕೊಟ್ಟುಬಂದಿರೋ ?'' ಎಂದು ಪ್ರಶ್ನಿಸಿದಳು. ಮೇನೇಜರು ತಲೆಹಾಕಿ ಹೌದೆಂದು ಒಪ್ಪಿಕೊಳ್ಳಲು ಆಕೆಯು "ಪುನಃ ಹೋಗಿ ಅವರಿಗೆ ಬೇಡವೆಂದು ಹೇಳಿ ಬನ್ನಿ'' ಎಂದಳು. ಮೇನೇಜರಿಗೆ ಆಶ್ಚರ್ಯವಾಯಿತು. ಏನು ಮಾತಾಡಬೇಕೆಂಬುದು ಗೊತ್ತಾಗದೆ ಹಿಂದು ಮುಂದು ನೋಡಹತ್ತಿದರು. ಅನಂತರ "ಸಾಹುಕಾರರು ಬರುವುದಕ್ಕೆ ಮುಂಚೆ........ .. ....'' ಎಂದು ಪ್ರಾರಂಭಿಸಿದ್ದರು ಅಷ್ಟರಲ್ಲೆ ವಂದನ ಬಾಯಿಹಾಕಿ "ಇಲ್ಲ ಆಗ್ಗೆ ಬೇಡವೆಂದು ಹೇಳಿದರೂ ಪ್ರಯೋಜನವಿಲ್ಲ. ಮುಖರ್ಜಿಯವರು ರೇಗಿದರೆ ನನ್ನಮೇಲೆ ರೇಗಲಿ. ಇದರಿಂದ ನಿಮಗೇನೂ ಹೆದರಿಕೆ ಬೇಡ ಹೊರಡಿ ಹೊತ್ತು ಮಾಡಬೇಡಿ" ಎಂದು

ಹೇಳಿ ಉತ್ತರವನ್ನೂ ಸಹ ನಿರೀಕ್ಷಿಸದೆ ವಂದನ ಹೊರಟುಬಿಟ್ಟಳು.

ಮ್ಯಾನೇಜರಿಗೆ ಏನು ಮಾಡಬೇಕೆಂಬುದು ತೋಚಲಿಲ್ಲ. ಸರಿ ಆಯಿತು! ವಿಪ್ರದಾಸನ ಆಜ್ಞೆಯನ್ನು ಮೀರುವುದು ಕಷ್ಟ, ಕಷ್ಟವೇನು ಅಸಂಭವ. ಆದರೆ ಈ ಅಪರಿಚಿತ ರಮಣಿಯ ಅಸಂದಿಗ್ಧ ಸುನಿಶ್ಚಿತ ಶಾಸನವನ್ನು ಲೆಕ್ಕಿಸದೆ ಇರುವುದು ಸುಲಭ ಸಾಧ್ಯವಲ್ಲ. ಕ್ಷಣಕಾಲ ಏನೂ ತಿಳಿಯದೆ ಸುಮ್ಮನಿದ್ದು ಪುನಃ ಸಂದಿಗ್ಧ ದನಿಯಲ್ಲಿ "ಏನು ಹೋಗಿ ಬೇಡ ಅಂತ ಹೇಳಿ ಬರಲೆ?… …ಸ್ವಲ್ಪ ಮುಂಗಡ ಕೊಟ್ಟಾಗಿದೆ –…." ಎಂದರು.

ವಂದನ ಹಿಂದಕ್ಕೆ ತಿರುಗಿ "ಅದು ಹೋದರೆ ಹೋಯಿತು ನೀವು ಹೋಗೀ ಮತ್ತೆ ಹೊತ್ತುಮಾಡಬೇಡಿ" ಎಂದಳು.

ಸಾಯಂಕಾಲ ಮನೆಗೆ ಬಂದಾಗ ವಿಪ್ರದಾಸನು ಈ ಸಮಾಚಾರವನ್ನು ಕೇಳಿದನು. ಸಿಟ್ಟುಮಾಡಬೇಕೋ, ಸಂತೋಷಪಡಬೇಕೋ ಅವನಿಗೆ ಏನೂ ತಿಳಿಯಲಿಲ್ಲ. ಅಡಿಗೆ ಮನಗೆ ಹೋಗಿ ನೋಡಿದಾಗ ಮುಕ್ಕಾಲು ಮೂರು ವೀಸೆಪಾಲು ಅಡಿಗೆ ಆಗಿಹೋಗಿತ್ತು. ವಂದನ ಸ್ಟೂಲಿನ ಮೇಲೆ ಕುಳಿತು ಅಡಿಗೆಯವನೊಂದಿಗೆ ಕೆಲಸದಲ್ಲಿ ತೊಡಗಿದ್ದಾಳೆ. ಅವಳು ಎದ್ದು ನಿಂತು ಕೃತ್ರಿಮ ವಿನಯವನ್ನು ತೋರುವ ದನಿಯಲ್ಲಿ "ಸಿಟ್ಟಿನಿಂದ ಮ್ಯಾನೇಜರನ್ನು ಕೆಲಸದಿಂದ ತೆಗೆಯಲಿಲ್ಲ ತಾನೆ?" ಎಂದಳು.

ವಿಪ್ರದಾಸ್—ಮುಖರ್ಜಿಯವರು ಅಷ್ಟು ಸಿಟ್ಟಿನವರೆಂದು ನಿನಗೆ ಯಾರು ತಿಳಿಸಿದರು?

ವಂದನ—ಹುಲಿ ಒಂದು ಯೋಜನದ ಆಚೆ ಇದ್ದರೂ ಅದರ ವಾಸನೆ ಬರುತ್ತಂತೆ.

ವಿಪ್ರದಾಸನು ನಕ್ಕು "ಈಗ ಅತಿಥಿಗಳಿಗೆ ಏನು ಏರ್ಪಾಡಾಗಿದೆ. ಅವರಿಗೆ ರಾತ್ರೆ ಡಿನ್ನರ್‌ನ ಅಭ್ಯಾಸ, ಅದಕ್ಕೆ ಏನುಮಾಡಿದ್ದೀಯ"

"ಡಿನ್ನರ್ ಇಲ್ಲದೆ ಸಾಧ್ಯವಿಲ್ಲ ಅಂತ ಅನ್ನೋರನ್ನ ಯಾರೊಡನೆಯಾದರೂ ಹೋಟೆಲ್‌ಗೆ ಕಳುಹಿಸಿ. ಬಿಲ್ ನಾನು ಕೊಡುತ್ತೇನೆ" ಎಂದಳು.

"ವಂದನ, ಅದು ಸರಿ ಅಲ್ಲ"

"ಬಹುಶಃ ಆ ಸಾಮಾನನ್ನು ಮನೆಗೆ ತರಿಸಿದ್ದರೆ ಆಗುತ್ತಿತ್ತೋ?

ಅಮ್ಮನಿಗೆ ತಿಳಿದಿದ್ದರೆ ಏನು ಮಾಡುತ್ತಿದ್ದರು ಹೇಳಿ ನೋಡೋಣ."

ವಿಪ್ರದಾಸನು ಇದನ್ನು ಯೋಚಿಸದೆ ಇರಲಿಲ್ಲ. ಆದರೆ ಏನೂ ನಿಶ್ಚಯಿಸಲಾಗಿರಲಿಲ್ಲ. ಅದಕ್ಕೆ "ಅವರಿಗೆ ಗೊತ್ತೇ ಆಗುವುದಿಲ್ಲ.'' ಎಂದು ಉತ್ತರ ಕೊಟ್ಟನು

ತಲೆಯಲ್ಲಾಡಿಸುತ್ತಾ ' ಗೊತ್ತಾಗುತ್ತಿತ್ತು ನಾನೇ ಕಾಗದ ಬರೆದು ತಿಳಿಸುತ್ತಿದ್ದೆ' ಎಂದಳು ವಂದನ.

"ಏಕೆ!"

"ಏಕೆ? ಈ ಎರಡು ದಿನಕ್ಕಾಗಿ ಹೊರಗಿನಿಂದ ಬಂದ ಜನಗಳ ಮೆಚ್ಚಿಗೆಗೆಂದು ಎಂದೂ ಮಾಡದ ಕೆಲಸ ಮಾಡಬೇಕೆ? ಖಂಡಿತ ಕೂಡದು."

ಇದನ್ನು ಕೇಳಿ ವಿಪ್ರದಾಸನಿಗೆ ಆನಂದ ಮಾತ್ರವಲ್ಲ ಆಶ್ಚರ್ಯವೂ ಆಯಿತು.

ಸ್ವಲ್ಪಹೊತ್ತು ಸುಮ್ಮನಿದ್ದು ಅವನು ಹೇಳಿದ "ವಂದನ ನಿನ್ನೆ ಬೆಳಿಗ್ಗೆಯಿಂದ ನೀನು ಏನೂ ತಿಂದಿಲ್ಲ. ಇನ್ನೂ ಸಿಟ್ಟು ಇಳಿಯು ವಂತಿಲ್ಲವೇ?" ಅಂದ. ಧ್ವನಿಯಲ್ಲಿ ಸ್ನೇಹ ಬೆರತಿತ್ತು.

ವಂದನ ಮೃದು ಕಂಠದಿಂದಲೇ ಉತ್ತರವಿತ್ತಳು—"ಸಿಟ್ಟು ಏಕೆ? ಆದರೆ ಈಗ ನಿಮ್ಮ ಫಲಾಹಾರಕ್ಕೆ ಹಣ್ಣುಹಂಪಲು ಎಲ್ಲ ಬಂದಿದೆ. ನೀವು ಹೋಗಿ ಸಂಧ್ಯಾವಂದನೆಮಾಡಿ. ಅಷ್ಟರಲ್ಲಿ ನಾನು ಅದನ್ನು ಸರಿಯಾಗಿ ಹೆಚ್ಚಿಗಿಚ್ಚಿ ಇಟ್ಟುಕೊಂಡಿರುತ್ತೇನೆ ಆದರೆ ಒಂದು ಮಾತು ಅದನ್ನು ಇನ್ನು ಯಾರಾದರೂ ಮಾಡಿದರೆ ನಾನು ಇವತ್ತು ಏನೂ ತಿನ್ನುವುದಿಲ್ಲ. ಮೊದಲೇ ಹೇಳಿದ್ದೇನೆ."

"ಆಗಲಿ ಹಾಗಾದರೆ ಬರುತ್ತೇನೆ.'' ಎಂತ ಹೇಳಿ ವಿಪ್ರದಾಸ್ ಮೇಲಕ್ಕೆ ಹೊರಟುಹೋದ. ಸುಮಾರು ಒಂದು ಗಂಟೆಯ ಮೇಲೆ ಅನ್ನತಟ್ಟೆಯ ಪರಿಮಾಣದಲ್ಲಿ ಹಣ್ಣುಹಂಪಲುಗಳನ್ನೂ ಸ್ವಲ್ಪ ಮಿಠಾಯಿ ಯನ್ನೂ ತೆಗೆದುಕೊಂಡು ವಂದನ ವಿಪ್ರದಾಸನ ಕೋಣೆಗೆ ಹೋದಳು. ಅನ್ನದಳ ಕೈಯಲ್ಲಿ ನೀರು ಮತ್ತು ಆಸನ (ಮಣೆ) ಇತ್ತು. ಅವಳು ನೀರು ಚಿಮುಕಿಸಿ, ಮಂಡಲಮಾಡಿ ಮಣೆಹಾಕಿದಳು.

ವಿಪ್ರದಾಸನು ವಂದನಳ ಕಡೆ ನೋಡಿ ಆಶ್ಚರ್ಯದಿಂದ "ಏನು ಪುನಃ ಮೈ ತೊಳೆದುಕೊಂಡು ಬಂದೆಯಾ?" ಎಂದು ಕೇಳಿದನು.

" ನೀವು ಫಲಾಹಾರಕ್ಕೆ ಕುಳಿತುಕೊ " ಎನ್ನುತ್ತಾ ಅವಳು ಹರಿವಾಣವನ್ನು ಮುಂದಿಟ್ಟಳು.

*        *        *        *

೧೨

ವಿಪ್ರದಾಸನು ಮಣೆಯಮೇಲೆ ಕುಳಿತು ಪುನಃ ಅದೇ ಪ್ರಶ್ನೆಯನ್ನು ಹಾಕಿದನು ' ಮತ್ತೆ ಮೈತೊಳೆದುಕೊಂಡೆಯಾ ? ಮೈಗೆ ಒಗ್ಗದೆ ಹೋದರೆ ' ?

" ಅದೇನೇ ಆಗಲಿ ಈಗ ಏನಾದರೂ ಕುಂಟುನೆಪ ತೆಗೆದು ಅಥವಾ ಮೋಸಮಾಡಿ ನನ್ನ ಕೈಯಲ್ಲಿ ಉಣ್ಣಲ್ಲ ತಿನ್ನಲ್ಲ ಅಂದರೆ ನಾನು ಕೇಳೋದಿಲ್ಲ ; ಅದನ್ನು ನಿಶ್ಚಯಿಸಿಕೊಂಡು ಬಂದಿದ್ದೇನೆ. ಇಲ್ಲದಿದ್ದರೆ ಸ್ಪಷ್ಟವಾಗಿ ಹೇಳಿಬಿಡಿ --ನಿನ್ನಕೈಯಲ್ಲಿ ನಾನು ಏನೂ ತೆಗೆದುಕೊಳ್ಳು ವುದಿಲ್ಲ ನೀನು ಮ್ಲೇಚ್ಛರ ಮನೆ ಹುಡುಗಿ ಅಂತ."

ವಿಪ್ರದಾಸನು ನಕ್ಕು " ದುರಾತ್ಮರಲ್ಲಿ ದಗ ಮೋಸಕ್ಕೆ ಏನೂ ಕಡಿಮೆ ಇಲ್ಲ ಎಂತ ಪುಸ್ತಕಗಳಲ್ಲಿ ಓದಿಲ್ಲವೆ ? " ಎಂದು ಕೇಳಿದ.

" ಓದಿದ್ದೇನೆ ಆದರೆ ನೀವು ದುರಾತ್ಮರೂ ಅಲ್ಲ ಅಥವಾ ಭಯಾ ನಕರೂ ಅಲ್ಲ. ನಮ್ಮಂತೆ ನೀವು ಗುಣದೋಷಗಳಿಂದ ಕೂಡಿದ ಸಾಮಾನ್ಯ ಮನುಷ್ಯರು. ಹಾಗಿಲ್ಲದಿದ್ದರೆ ನಾನು ನಿಜವಾಗಿಯೂ ಹೋಗಿ ಪಾಪ ಅವರ ಡಿನ್ನರ್ ಪಾರ್ಟಿ ನಿಲ್ಲಿಸುತ್ತಿರಲಿಲ್ಲ "

" ಹಾಗಾದರೆ ನಿಜವಾದ ಕಾರಣ ಏನು ?"

" ನಿಜವಾದ ಕಾರಣವನ್ನೇ ಹೇಳುತ್ತಿದ್ದೇನೆ. ಅಲ್ಲಿ ನಿಮ್ಮ ಮನೆ ಯಲ್ಲಿ ಆ ಅಭ್ಯಾಸ ಇಲ್ಲ, ಇಲ್ಲಿ ಸಹ ಇಲ್ಲ ಅಂದಮೇಲೆ ಆ ಕೆಲಸ ಏಕೆ ಮಾಡಬೇಕು.?"

" ಅದಕ್ಕೆ ಕಾರಣ ನಿನಗೆ ಗೊತ್ತಿಲ್ಲವೆ? ಅವರೆಲ್ಲ ವಿಲಾಯತಿ ಯಿಂದ ಬಂದಿರುವವರು—ಹಾಗೆ ಊಟಮಾಡಿಯೇ ಅವರಿಗೆ ಅಭ್ಯಾಸ."

" ಅವರಿಗೆ ಏನೇ ಅಭ್ಯಾಸ ಇರಲಿ ಅವರೂ ಭಾರತೀಯರೇ ಅಲ್ಲವೆ ! ಭಾರತೀಯ ಅತಿಥಿಗಳು ಡಿನ್ನರ್ ಗಿನ್ನರ್ ಇಲ್ಲದೆ ಸತ್ತು ಹೋದರು ಎಂಬುದನ್ನಂತೂ ಎಲ್ಲೂ ಕಂಡಿಲ್ಲ ಕೇಳಿಲ್ಲ. ಆದ್ದರಿಂದ ಏನೇ

ಹೇಳಿ, ಆ ಕಾರಣ ನಂಬುವಂತಿಲ್ಲ. ಅವೆಲ್ಲ ಕೆಲಸಕ್ಕೆ ಬಾರದ ಮಾತು".

"ಹಾಗಾದರೆ ಕೆಲಸಕ್ಕೆ ಬರುವ ಮಾತು ಯಾವುದು ?"

"ಅದು ನನಗೇ ಸರಿಯಾಗಿ ಗೊತ್ತಿಲ್ಲ. ಆದರೆ ಇಷ್ಟು ಮಾತ್ರ ನಿಜ. ನೀವು ಹೇಳುತ್ತಿರುವುದರಲ್ಲಿ ನಿಮಗೇ ಪೂರ್ಣ ನಂಬಿಕೆಯಿಲ್ಲ. ಇಲ್ಲದಿದ್ದರೆ ಅಮ್ಮನಿಗೆ ತಿಳಿಯದಂತೆ ಗುಟ್ಟಾಗಿ ಹೀಗೆ ಏರ್ಪಾಟು ಮಾಡುತ್ತಿರಲಿಲ್ಲ. ಜನ ನಿಮಗೆ ಸುಮ್ಮನೆ ಹೆದರುತ್ತಾರೆ. ನ್ಯಾಯವಾಗಿ ಹೆದರಬೇಕಾದದ್ದು ನಿಮಗಲ್ಲ, ನಿಮ್ಮ ಅಮ್ಮನಿಗೆ."

ವಿಪ್ರದಾಸ ಕೋಪಗೊಳ್ಳದೆ—"ಸರಿ, ಇಬ್ಬರನ್ನೂ ನೀನು ಚೆನ್ನಾಗಿ ತಿಳಿದುಕೊಂಡ ಹಾಗಾಯಿತು! ಆದರೆ ಅಮ್ಮನಿಗೆ ಗೊತ್ತಾಗಬಾರದೆಂದು ಗುಟ್ಟಾಗಿ ಈ ಏರ್ಪಾಟು ಮಾಡಿದೆನೆಂದು ನಿನಗೆ ಹೇಳಿದವರು ಯಾರು?" ಎಂದ ನಗುತ್ತಲೇ.

ವಂದನ ಹೆಸರು ಹೇಳಲಿಲ್ಲ. "ವಿಚಾರಿಸಿದೆ. ಗೊತ್ತಾಯಿತು. ಅಂತೂ ಆಗಬಾರದ್ದು ಆಗಿಹೋಗುತ್ತಿತ್ತು. ನಮ್ಮ ಅಕ್ಕ ನನ್ನನ್ನು ಎಂದಿಗೂ ಕ್ಷಮಿಸುತ್ತಿರಲಿಲ್ಲ. ವಂದನಳಿಗೋಸ್ಕರ ಹೀಗಾಯಿತೆ ಎಂದು ಯಾವಾಗಲೂ ಅವಳು ಕೊರಗಬೇಕಾಗುತ್ತಿತ್ತು. ಆದ್ದರಿಂದಲೇ ಅಂತಹ ಕೆಲಸವನ್ನು ಮಾಡಲು ನಿಮಗೆ ನಾನು ಆಸ್ಪದ ಕೊಡಲಿಲ್ಲ" ಎಂದಳು.

"ನೀನು ನಮ್ಮವಳು, ಬಹಳ ಹತ್ತಿರದ ಸಂಬಂಧದವಳು. ನೀನು ಆಡಿದ ಮಾತು ಸರಿ. ಆದರೆ ಮುಚ್ಚುಮರೆ ಇಲ್ಲದೆ ನಿನ್ನ ಕೈಯಲ್ಲಿ ಊಟ ಮಾಡುತ್ತೇನೆಯೇ ಹೊರತು ಅನ್ಯಥಾ ಇಲ್ಲ ಎನ್ನುವುದನ್ನು ಅವರಿಂದ ಕೇಳಿದೆಯಾ? ಇಲ್ಲದಿದ್ದರೆ ಹೋಗಿ ಕೇಳಿ ಬಾ. ನಾನು ಕಾದಿರುತ್ತೇನೆ'' ಎಂದು ಹೇಳಿ ತಟ್ಟೆಯನ್ನು ಸ್ವಲ್ಪ ಸರಿಸಿದ

ವಂದನಳ ಮುಖ ನಾಚಿಕೆಯಿಂದ ಕೆಂಪೇರಿತು. ಕ್ಷಣ ಮಾತ್ರದಲ್ಲಿ ಚೇತರಿಸಿಕೊಂಡು "ಇಲ್ಲ ಈಗ ಅವರಲ್ಲಿ ಹೋಗಿ ಕೇಳಿಬರುವಂತಿಲ್ಲ. ನೀವು ಊಟಮಾಡುವಂತೆಯೂ ಇಲ್ಲ." ಎಂದಳು.

"ಆದರೆ ನಮ್ಮ ಮನೆಯಲ್ಲಿ ನಿನ್ನನ್ನು ಉಪವಾಸವಿಡುವದು ಸಾಧ್ಯವಿಲ್ಲ'' ಎನ್ನುತ್ತಾ ಊಟಮಾಡಲಾರಂಭಿಸಿದ. ವಂದನ ಐದು ನಿಮಿಷ ಸುಮ್ಮನಿದ್ದು "ಈಗ ಇನ್ನೇನು ಮಾಡುತ್ತೀರಿ'' ಎಂದು ಕೇಳಿದಳು. ವಿಪ್ರದಾಸ "ಮನೆಗೆ ಹೋಗಿ ಪಂಚಗವ್ಯ ಪ್ರಾಯಶ್ಚಿತ್ತ ಮಾಡಿ

ಕೊಳ್ಳುತ್ತೇನೆ" ಎಂದು ಹೇಳಿ ನಕ್ಕನು. ಅವನ ನಗೆಯು ಅರ್ಥವಾಗದೆ ವಂದನಾ ಸುಮ್ಮನಿದ್ದಳು.

"ಅಮ್ಮನನ್ನು ಹೇಗಾದರೂ ಒಪ್ಪಿಸಬಹುದು. ಆದರೆ ನಿನ್ನ ಅಕ್ಕನ ಸಜಾ ತಪ್ಪಿಸಿಕೊಂಡರೆ ಸಾಕು. ಅದಕ್ಕಿಂತ ಹೆಚ್ಚಿನದು ಇನ್ನೇನೂ ಇಲ್ಲ" ಎಂದು ವಿಪ್ರದಾಸನು ತುಸು ನಕ್ಕು ಮುಂದುವರಿಸಿದ: "ನನ್ನ ಮಾತಿನಲ್ಲಿ ವಿಶ್ವಾಸವಿಲ್ಲವೇ? ಮೊದಲು ಮದುವೆಯಾಗಲಿ ಆಮೇಲೆ ಮುಖರ್ಜಿಯವರು ಹೇಳಿದ ಮಾತು ಸರಿಯೋ ತಪ್ಪೋ ಗೊತ್ತಾಗುತ್ತೆ" ಎಂದು ಮಾತನಾಡುತ್ತಾ ಮಾತನಾಡುತ್ತಾ ಹರಿವಾಣವನ್ನು ಖಾಲಿಮಾಡಿ ಎದ್ದು ನಿಂತ.

ಡಿನ್ನರ್ ರದ್ದಾದರೂ ಬೇರೆ ಬೇರೆ ತಿಂಡಿಗಳಿದ್ದುದರಿಂದ ಎಲ್ಲರೂ ತೃಪ್ತರಾದರು.

ಕೆಲಸವೆಲ್ಲಾ ಮುಗಿದ ಮೇಲೆ ಹಾಸಿಗೆಯಮೇಲೆ ಮಲಗಿ ವಂದನ ಯೋಚಿಸತೊಡಗಿದಳು. ವಿಪ್ರದಾಸನ ಆಚರಣೆಯನ್ನು ಅಪ್ರತ್ಯಾಶಿತವೆಂದು ಹೇಳುವುದೂ ಕಷ್ಟ; ಅನುಚಿತವೆಂದು ಹೇಳುವುದೂ ಕಷ್ಟ. ಇದಲ್ಲದೆ ಹತ್ತಿರ ಸಂಬಂಧ.. ತಮ್ಮವರೇ ಆದಾಗ್ಯೂ ಇಂದಿನವರೆಗೆ ಅಷ್ಟು ಸ್ನೇಹವಾಗಲೀ ಪರಿಚಯವಾಗಲೀ ಇರದಿರಲು ಕಾರಣವೇನು. ಈ ವಿಚಾರ ಎಷ್ಟು ಹಳೆಯದು. ಅದನ್ನು ಹೊಸದಾಗಿ ನೆನಸಿಕೊಂಡು ದುಃಖಪಡುವುದು ಏಕೆ? ವಂದನ ಕಾಲುಮುಟ್ಟಿ ನಮಸ್ಕಾರ ಮಾಡಲು ಹೋದಾಗ ವಿಪ್ರದಾಸನ ತಾಯಿ ಎಲ್ಲಿ ಮುಟ್ಟಿಬಿಡುವಳೋ ಎಂಬ ಭಯದಿಂದ ಹಿಂದಕ್ಕೆ ಹಾರಿದ್ದರು. ಅದನ್ನು ವಿರೋಧಿಸಲು ವಂದನ ಊಟ ತಿಂಡಿ ಸಹ ಮಾಡದೆ ಹೊರಟುಬಂದಳು. ಒಬ್ಬ ಮೂಢ ಹೆಂಗಸಿನ ಉದ್ಧತ ಧರ್ಮ ಭಾವನೆಯು ಅವಳಿಗೆ ದುಃಖವನ್ನುಂಟುಮಾಡಿತ್ತು ನಿಜ. ಹೇಗಾದರೂ ಆ ಮೌಢ್ಯವನ್ನು ಮರೆತುಬಿಡಬಹುದು. ಆದರೆ ವಿಪ್ರದಾಸನು ಮಾಡಿದ್ದಕ್ಕೆ ಹೇಗೆ ಪ್ರತೀಕಾರ ಮಾಡುವುದು. ಇದೇ ಅವಳಿಗೆ ಹೊಳೆಯದು. ವಿಪ್ರದಾಸನು ಅವಳು ಮುಟ್ಟಿದ ಹಣ್ಣು ಹಂಪಲು, ಮಿಠಾಯಿ ಮುಂತಾದುವನ್ನು ತಿಂದ. ಆದರೆ ತನ್ನ ಇಚ್ಛೆಯಿಂದಲ್ಲ. ಬಲರಾಮಪುರದಲ್ಲಿ ಮಾಡಿದಂತೆ ಇಲ್ಲಿಯೂ ಎಲ್ಲಿ ಅನರ್ಥ ಮಾಡಿಬಿಡುವಳೋ ಎಂಬ ಹೆದರಿಕೆಯಿಂದ ಅಂದರೆ ಹುಚ್ಚರ ಕೈಯಿಂದ ಜೀವ ಉಳಿಸಿಕೊಂಡ ಕತೆ ಇದು ಅಷ್ಟೆ. ಈಗ ಆಗಿರುವ ಅನಾ

ಚಾರಕ್ಕೆ ವಿಪ್ರದಾಸ್ ಮನೆಗೆ ಹೋಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾನೆ. ಇದನ್ನು ಅವಳು ಸತ್ಯವೆಂದೇ ನಂಬಿದ್ದಳು. ಆದುದರಿಂದಲೇ ಅವಳಿಗೆ ನಿದ್ರೆ ಸಹ ಬಾರದು. ಮತ್ತೆ ಯೋಚಿಸಿದಳು. ಇದೇನು ಮಹಾ ದೊಡ್ಡ ವಿಚಾರ. ನಮ್ಮಿಬ್ಬರ ದಾರಿ ಬೇರೆ ಬೇರೆ. ಪ್ರಪಂಚದಲ್ಲಿ ಇಬ್ಬರಿಗೂ ಸ್ಥಾನವಿದೆ. ಏನೋ ದೈವಯೋಗದಿಂದ ಇಬ್ಬರಲ್ಲೂ ಸಂಘರ್ಷಣೆಯಾದರೆ ಆಗಲಿ ಅದಕ್ಕೇಕೆ ಚಿಂತೆ. ಈ ಸಮಸ್ಯೆಗೆ ಉತ್ತರವನ್ನು ಕೊಟ್ಟು ಮುಂದೆ ಹೆಜ್ಜೆ ಇಡೆನ್ನುವವರಾದರೂ ಯಾರು? ವ್ಯರ್ಥವಾಗಿ ಯಾಕೆ ಯೋಚಿಸಬೇಕು ಎಂದು ತನ್ನನ್ನು ತಾನೇ ಸಮಾಧಾನ ಮಾಡಿಕೊಳ್ಳುತ್ತಿದ್ದಳು. ಆದರೂ ಆತನ ಮೌನ ಅವಹೇಳನವನ್ನು ಮನಸ್ಸಿನಿಂದ ಕಿತ್ತೆಸೆಯಲು ಅವಳಿಂದಾಗಲಿಲ್ಲ.

ಈ ಯೋಚನೆಗಳ ಮಧ್ಯೆ ಯಾವಾಗ ನಿದ್ದೆ ಬಂದಿತೋ ಅವಳಿಗೇ ಗೊತ್ತಿಲ್ಲ. ಅಷ್ಟೇನೂ ಒಳ್ಳೆಯ ನಿದ್ರೆ ಬರಲಿಲ್ಲ. ಇದ್ದಕ್ಕಿದ್ದಂತೆಯೆ ಎಚ್ಚರವಾದಾಗ ಇನ್ನೂ ಬೆಳಗಾಗಿರಲಿಲ್ಲ. ನಿದ್ರೆ ಸಾಲದ ಕಾರಣ ನೊಂದ ಕಣ್ಣುಗಳು ಮುಚ್ಚಿಕೊಳ್ಳಲು ಯತ್ನಿಸುತ್ತಿದ್ದವು. ಆದರೆ ಅವಳಿಗೆ ಹಾಸಿಗೆಯ ಮೇಲೆ ಬಿದ್ದುಕೊಂಡಿರುವುದು ಸರಿಹೋಗಲಿಲ್ಲ. ಎದ್ದು ಹೊರಕ್ಕೆ ಬಂದು ಕಟಕಟೆಯನ್ನು ಹಿಡಿದು ಹಾಗೆಯೇ ಮೂಲೆಗೆ ಒರಗಿ ನಿಂತುಕೊಂಡಳು. ನೀಲ ಆಕಾಶವು ನಿಶಾಂತ್ಯದ ಕಾರ್ಗತ್ತಲೆಯಲ್ಲಿ ಇನ್ನೂ ಕಪ್ಪಾಗಿ ಕಾಣುತ್ತಿದೆ; ಬಹಳ ದೂರದಲ್ಲಿ ಸಂಚರಿಸುವ ಗಾಡಿಗಳ ಗಡಗಡ ಶಬ್ದವು ಕೇಳಿ ಬರುತ್ತಿದೆ, ಜನಗಳ ತಿರುಗಾಟ ಪ್ರಾರಂಭವಾಗಲು ಇನ್ನೂ ಬೇಕಾದಷ್ಟು ಹೊತ್ತಿದೆ. ಇಡೀ ಮನೆಯಲ್ಲಿ ನೀರವತೆಯ ಅಟ್ಟಹಾಸವು ಸಾಗಿದೆ. ಆದರೆ ಇದ್ದಕ್ಕಿದ್ದಂತೆ ಅವಳ ದೃಷ್ಟಿಗೆ ಎರಡನೆಯ ಮಹಡಿಯ ದೇವರ ಮನೆಯಿಂದ ಬೆಳಕು ಕಂಡಿತು. ಕಿಟಕಿಯಿಂದ ಹೊರಬಿದ್ದ ಕಿರಣಗಳು ಕಂಭದಮೇಲೆ ಬಿದ್ದಿವೆ. ಬಹುಶಃ ಜವಾನ ದೀಪ ನಂದಿಸುವುದನ್ನು ಮರೆತಿರಬೇಕು ಎಂದುಕೊಂಡಳು ಆದರೆ ಮರುಕ್ಷಣದಲ್ಲಿಯೆ ಅವಳ ಮನಸ್ಸು ಅಲ್ಲಿ ವಿಪ್ರದಾಸನು ಕುಳಿತು ಪೂಜೆಯನ್ನು ಮಾಡುತ್ತಿರಬಹುದೆಂದು ಊಹಿಸಿತು. ಅಲ್ಲಿ ಹೋಗಿ ನೋಡಿದಾಗ ಊಹೆ ನಿಜವಾಗಿತ್ತು.

ಅವಳ ಕುತೂಹಲ ಎಣೆಗಾಣದಾಯಿತು. ಎಲ್ಲಾದರೂ ಅವನ ಕಣ್ಣಿಗೆ ಬಿದ್ದರೆ ಅಪಮಾನವಾದೀತೆಂದು ಹೆದರಿದಳು.

ವಂದನ ಧ್ಯಾನದ ವಿಷಯವಾಗಿ ಪುಸ್ತಕದಲ್ಲಿ ಓದಿದ್ದಳು. ಧ್ಯಾನ

ಸ್ಥರ ಚಿತ್ರಗಳನ್ನು ನೋಡಿದ್ದಳು. ಆದರೆ ಧ್ಯಾನಮಗ್ನರಾದವರನ್ನು ಕಣ್ಣಾರೆ ಕಂಡಿರಲಿಲ್ಲ. ನೀರವರಾತ್ರಿಯ ಏಕಾಂತದಲ್ಲಿ ಆ ದೃಶ್ಯವನ್ನು ಇಂದು ನೋಡಿದಳು ವಿಪ್ರದಾಸನ ಎರಡು ಕಣ್ಣುಗಳೂ ಮುಚ್ಚಿವೆ; ಅವನ ದೀರ್ಘ ಬಲಿಷ್ಠ ದೇಹವು ಆಸನದಲ್ಲಿ ಅಲುಗಾಡದೆ ಕುಳಿತಿದೆ. ಮೇಲಿನಿಂದ ದೀಪದ ಪ್ರಕಾಶವು ಅವನ ಮುಖ ಮತ್ತು ಹಣೆಯಮೇಲೆ ಬಿದ್ದು ಪ್ರತಿಬಿಂಬಿತವಾಗುತ್ತಿದೆ.—ಇಷ್ಟೇ ಇನ್ನೇನೂ ವಿಶೇಷವಿಲ್ಲ. ಮತ್ತೆ ಯಾವುದಾದರೂ ಸಮಯದಲ್ಲಿ ಈ ದೃಶ್ಯವನ್ನು ಕಂಡಿದ್ದರೆ ವಂದನ ನಕ್ಕು ಬಿಡುತ್ತಿದ್ದಳು. ಆದರೆ ಇಂದು ನಿದ್ರೆಯ ಭಾರದಿಂದ ಅರೆಮುಚ್ಚಿದ ಕಣ್ಣುಗಳಿಂದ ಆ ದೃಶ್ಯವನ್ನು ನೋಡಿ ಅವಳು ಮಂತ್ರಮುಗ್ಧಳಾದಂತೆ ನಿಂತುಬಿಟ್ಟಳು. ಅವಳು ಎಷ್ಟು ಹೊತ್ತು ನಿಂತಿದ್ದಳೋ ಅವಳಿಗೇ ತಿಳಿಯದು. ಎಚ್ಚರವಾದಾಗ ಆಕಾಶವು ಕೆಂಪೇರುತ್ತಿತ್ತು. ಮನೆಯ ದಾಸದಾಸಿಯರು ಏಳುವುದರಲ್ಲಿದ್ದರು. ಏನೋ ಅದೃಷ್ಟ ನೆಟ್ಟಗಿತ್ತು ಈ ಮಧ್ಯೆ ಯಾರೂ ಎದ್ದು ಅವಳ ಎದುರಿಗೆ ಬರಲಿಲ್ಲ. ಅವಳು ಅಲ್ಲಿ ಮತ್ತೆ ನಿಲ್ಲದೆ ಮೆಲ್ಲಗೆ ತನ್ನ ಕೋಣೆಗೆ ನಡೆದು ಹಾಸಿಗೆಯಮೇಲೆ ಮಲಗಿದಳು. ಮಲಗಿದ್ದೇ ತಡ ಅವಳಿಗೆ ಗಾಢ ನಿದ್ರೆ ಬಂದಿತು.

ಬಾಗಿಲನ್ನು ತಟ್ಟಿ ಅನ್ನದ ಕೂಗಿಕೊಂಡಳು. "ಅಮ್ಮ ಎಷ್ಟು ಹೊತ್ತಾಯಿತು ಏಳುವುದಿಲ್ಲವೆ?"

ವಂದನ ಗಾಬರಿಯಿಂದ ಬಾಗಿಲು ತೆರೆದು ಹೊರಕ್ಕೆ ಬಂದಳು. ನಿಜವಾಗಿಯೂ ಹೊತ್ತು ಏರಿತ್ತು. ಅವಳು ನಾಚಿಕೆಯಿಂದ ಕಿರುದನಿಯಲ್ಲಿ "ಬಹುಶಃ ಇವತ್ತು ಕೂಡ ನನಗಾಗಿ ಅವರೆಲ್ಲ ಕಾದಿರಬಹುದು. ಇನ್ನು ಸ್ವಲ್ಪ ಮುಂಚೆ ಎಬ್ಬಿಸಬಾರದಾಗಿತ್ತೇ? ಇನ್ನೂ ಮೈತೊಳೆದುಕೊಂಡು ಸಿದ್ಧಳಾಗಲು ಒಂದು ಗಂಟೆಯಾದರೂ ಬೇಕು" ಎಂದು ಅನ್ನದಳಿಗೆ ಹೇಳಿದಳು.

ಬೆದರಿ ಬಾಡಿದ ಅವಳ ಮುಖವನ್ನು ನೋಡಿ ಅನ್ನದ ನಕ್ಕು "ಏಕಮ್ಮ ಹೆದರಿಕೆ? ಇವತ್ತು ಅವರು ಕಾದಿರದೆ ತಮ್ಮ ಕೆಲಸವನ್ನು ಪೂರೈಸಿದ್ದಾರೆ.........ಈಗ ಎಷ್ಟು ಹೊತ್ತು ಬೇಕಾದರೂ ಸ್ನಾನಮಾಡಿ. ಯಾರದ್ದೂ ಅಭ್ಯಂತರವಿಲ್ಲ" ಎಂದಳು.

ಇದನ್ನು ಕೇಳಿ ವಂದನಳಿಗೆ ಜೀವ ಬಂದಂತಾಯಿತು. ಮುಗುಳ್ನಗೆ ನಕ್ಕು "ನನಗೆ ನಿಮ್ಮ ಆಚಾರ ವಿಚಾರ ಸರಿಹೋಗುವುದಿಲ್ಲ; ಆದರೆ ಈ

ವಿಷಯದಲ್ಲಿ ಮಾತ್ರ ನಾನು ನಿಮ್ಮನ್ನು .ಮೆಚ್ಚುತ್ತೇನೆ. ಗಡಿಯಾರದ ಮುಳ್ಳು ನೋಡಿ ಹೊತ್ತು ಬಂದಿತೆಂದರೆ ಸರಿ ಏನು ಸಿಕ್ಕರೆ ಅದನ್ನು ನುಂಗಿ ನೀರು ಕುಡಿದು ಕುಳಿತುಕೊಳ್ಳುವುದಿಲ್ಲ. ಇದರಿಂದ ಬೇಕಾದಷ್ಟು ಪುರಸತ್ತಿರುತ್ತದೆ. ಏನು ಬೇಕಾದರೂ ಮಾಡಬಹುದು" ಎಂದಳು.

"ಏಕಮ್ಮ, ನಿಮಗೆ ಬೆಳಿಗ್ಗೆ ಹಸಿವಾಗುವುದಿಲ್ಲವೆ?"

ಇಲ್ಲ. ನನಗೆ ಹಸಿವಾಗುವುದಿಲ್ಲ. ಆದರೂ ಚಿಕ್ಕಂದಿನಿಂದಲೂ ಬೆಳಿಗ್ಗೆ ತಿಂಡಿ ತಿಂದು ಅಭ್ಯಾಸ. ನಾನು ಹೋಗುತ್ತೇನೆ. ಇನ್ನು ಹೊತ್ತು ಮಾಡುವುದಿಲ್ಲ" ಎಂದು ವಂದನ ಹೊರಟುಹೋದಳು.

ಸುಮಾರು ಎರಡು ಗಂಟೆಯಾದಮೇಲೆ ಕೆಳಗಡೆ ವಿಪ್ರದಾಸನನ್ನು ಕಂಡಳು. ಅವನು ಕಚೇರಿಯ ಕೆಲಸವನ್ನು ಮುಗಿಸಿಕೊಂಡು ಹೊರಟಿದ್ದ. ವಂದನ ಅವನಿಗೆ ನಮಸ್ಕರಿಸಿದಳು.

"ಚಾ ಕುಡಿದಾಯಿತೆ?"

"ಆಯಿತು."

"ಅವರು ಕಾದಿರಲಾರದೆ ಹೋದರು. ನೀನು ಕೂಡ..........."

ವಿಪ್ರದಾಸನ ಆ ಮಾತಿಗೆ ಅಡ್ಡಿಯಾಗಿ ವಂದನ "ಅದಕ್ಕೆ ನಾನೇನೂ ದೋಷಾರೋಪಣೆ ಮಾಡಲಿಲ್ಲವಲ್ಲ" ಎಂದಳು.

ವಿಪ್ರದಾಸ ನಗುತ್ತಾ "ನಿನ್ನ ಸ್ವಭಾವ ಬಹಳ ದೊಡ್ಡದು. ಅದನ್ನು ನಾನು ಅಲ್ಲಗಳೆಯುವುದಿಲ್ಲ. ಏನೋ ಉಚ್ಚ ಶಿಕ್ಷಣವನ್ನು ಪಡೆ ಯುವುದಕ್ಕೋಸ್ಕರ ನೀನು ವಿಲಾಯತಿಗೆ ಹೋಗುತ್ತೀಯಂತೆ. ಹೋಗು. ಹಿಂತಿರುಗಿ ಬಂದ ಮೇಲೆ ಒಂದು ಸಾರಿ ಹೇಳಿ ಕಳುಹಿಸು. ನಿನ್ನನ್ನು ಒಮ್ಮೆ ನೋಡಲು ಬರುತ್ತೇನೆ." ಎಂದನು.

ಇದನ್ನು ಕೇಳಿ ವಂದನ ನಕ್ಕಳು. ಏನೂ ಉತ್ತರ ಕೊಡಲಿಲ್ಲ. ವಿಪ್ರದಾಸನು ಮುಂದುವರಿಸಿದನು. "ಆ ದೇಶದಲ್ಲಿ ಮಧ್ಯಾಹ್ನ ಹನ್ನೆರಡು ಗಂಟೆಯ ತನಕ ಜನಗಳು ಮಲಗಿರುತ್ತಾರೆ ಅಂತ ಕೇಳಿದ್ದೇನೆ. ಅಲ್ಲಿಗೆ ಹೋದರೆ ಹೇಗಪ್ಪ ಅನ್ನಬೇಕಾಗಿಲ್ಲ ಈ ದೇಶದಲ್ಲಿದ್ದೇ ಅದನ್ನು ಸಾಧಿಸುತ್ತಿದ್ದೀಯೆ." ವಂದನ ಪುನಃ ನಕ್ಕಳು. ಅವಳು ಮೊದಲಿನಂತೆಯೇ ಮೌನವಾಗಿ ವಿಪ್ರದಾಸನ ಮುಖವನ್ನು ನೋಡುತ್ತಿದ್ದಳು. ಅತ್ಯಂತ ಸರಳ ಸ್ವಭಾವದ ಸಭ್ಯ ಮುಖ. ಹಾಸ್ಯ ಪರಿಹಾಸ್ಯದಲ್ಲಿ ಸ್ನೇಹದಿಂದ ವರ್ತಿಸುವ ಆತ್ಮೀಯತೆ. ನೀರವ ರಾತ್ರಿಯಲ್ಲಿ ಏಕಾಂತದಲ್ಲಿ

ಮೌನವಾಗಿ ಕುಳಿತಿದ್ದ ಮನುಷ್ಯನನ್ನು ಕಂಡೇ ಎಂತಹ ರಹಸ್ಯಮಯ ವ್ಯಕ್ತಿ ಎಂದುಕೊಂಡಿದ್ದಳು. ಅದನ್ನು ನೆನಸಿಕೊಂಡಾಗ ಅವಳ ಕುತೂಹಲ ನೂರ್ಮಡಿ ಹೆಚ್ಚಿತು.

ವಂದನ—" ಮುಖರ್ಜಿಯವರೆ, ಅವರೆಲ್ಲ ಎಲ್ಲಿ ? ಯಾರೂ ಕಾಣಿಸುವುದಿಲ್ಲವಲ್ಲ ?''

ವಿಪ್ರದಾಸ್—' ಅವರು ಯಾರೂ ಇಲ್ಲವೆಂದರ್ಥ ಅಷ್ಟೇ. ನಿನ್ನ ತಂದೆ ಮತ್ತು ಆ ಬ್ಯಾರಿಸ್ಟರ್ ದಂಪತಿಗಳ ಸೀಟ್ ರಿಜರ್ವ್ ಮಾಡಿಸುವುದಕ್ಕೋಸ್ಕರ ಹೌರಾ ನಿಲ್ದಾಣಕ್ಕೆ ಹೋಗಿದ್ದಾರೆ. "

ವಂದನ ಆಶ್ಚರ್ಯದಿಂದ ಕೇಳಿದಳು : " ಬ್ಯಾರಿಸ್ಟರ್ ದಂಪತಿಗಳು ಸೀಟ್ ರಿಜರ್ವ್ ಮಾಡಿಸಿದರೂ ಮಾಡಿಸಬಹುದು. ಆದರೆ ಅಪ್ಪ ಏತಕ್ಕೆ ಹೋದರು ? ಅವರಿಗೆ ಇನ್ನೂ ಎಂಟು ಹತ್ತು ದಿನ ರಜ ಇದೆ. ಇದಲ್ಲದೆ ನನಗೆ ಹೇಳಿಯೂ ಇಲ್ಲ."

" ಹೇಳಲು ಹೊತ್ತಿರಲಿಲ್ಲ. ಹಿಂತಿರುಗಿ ಬಂದಮೇಲೆ ಹೇಳುತ್ತಾರೆ. ಬೆಳಿಗ್ಗೆ ಬೊಂಬಾಯಿ ಆಫೀಸಿನಿಂದ ಟೆಲಿಗ್ರಾಂ ಬಂದಿತ್ತು—ಅವರ ಮುಖ ನೋಡಿದರೆ ಹೋಗದೆ ಇರಲು ಸಾಧ್ಯವಿಲ್ಲವೆಂದು ತೋರಿತು. "

" ಆದರೆ ನಾನು ? ಇಷ್ಟು ಜಾಗ್ರತೆ ನಾನೇತಕ್ಕೆ ಹೋಗಲಿ ? "

ಅವಳ ದನಿಯಲ್ಲಿ ತನ್ನ ಸ್ವರವನ್ನು ಬೆರಸಿ '' ನಿಜ ನೀನು ಏತಕ್ಕೆ ಹೋಗಬೇಕು ? ನಾನೂ ಅದೇ ಹೇಳೋಣವೆಂದಿದ್ದೆ " ಎಂದನು.

ವಂದನಳಿಗೆ ಇದು ಅರ್ಥವಾಗಲಿಲ್ಲ. ತಿಳಿದುಕೊಳ್ಳಬೇಕೆಂಬ ಆತುರದಿಂದ ಅವಳು ವಿಪ್ರದಾಸನ ಮುಖವನ್ನು ನೋಡುತ್ತಾ ನಿಂತುಕೊಂಡಳು.

" ಅಕ್ಕನಿಗೆ ಟೆಲಿಗ್ರಾಂ ಕೊಡು '' ಎಂದು ವಿಪ್ರದಾಸನು ಮಾತನ್ನು ಮುಂದುವರಿಸಿದ. ''ಮೈದುನನನ್ನು ಜೊತೆಯಲ್ಲಿ ಕರೆದುಕೊಂಡು ಹೊರಟು ಬರಲಿ. ನಿಮ್ಮ ಜೊತೆ ಚೆನ್ನಾಗಿ ಸೇರುತ್ತೆ. ಅತಿಥಿ ಸತ್ಕಾರದ ಹೊರೆಯನ್ನಿಳಿಸಿ ನಾನು ಬದುಕುತ್ತೇನೆ. "

ವಂದನ ಹೆದರುತ್ತಾ ಹೆದರುತ್ತಾ ಉದ್ವಿಗ್ನ ಸ್ವರದಲ್ಲಿ '' ಇದು ಸಾಧ್ಯವೆ ? ಎಂದಾದರೂ ನಿಮ್ಮ ತಾಯಿ ಇದಕ್ಕೆ ಒಪ್ಪುತ್ತಾರೆಯೆ ? ಅವರಿಗಂತೂ ನನ್ನನ್ನು ಕಂಡರೇ ಆಗುವುದಿಲ್ಲ" ಎಂದಳು.

"ಒಂದು ಸಾರಿ ಪ್ರಯತ್ನಪಟ್ಟು ನೋಡು. ಒಂದು ಟೆಲಿಗ್ರಾಫ್ ಫಾರಂ ಕಳಿಸಿಕೊಡಲೋ? ಏನು ಹೇಳುತ್ತೀ?"

ವಂದನ ಉತ್ಸುಕತೆಯಿಂದ ಅವನ ಮುಖವನ್ನು ನೋಡುತ್ತ ಸುಮ್ಮನೆ ನಿಂತುಬಿಟ್ಟಳು. ಸ್ವಲ್ಪ ಹೊತ್ತಾದ ಮೇಲೆ, ಏನು ಯೋಚಿಸಿದಳೋ ಏನೊ, ಅವಳು ವಿಪ್ರದಾಸನನ್ನು ಕುರಿತು "ಹೋಗಲಿ ಬಿಡಿ ಈಗ ನನ್ನಿಂದಲಂತೂ ಅದು ಸಾಧ್ಯವಿಲ್ಲ" ಎಂದಳು.

"ಹಾಗಾದರೆ ಹೋಗಲಿ ಬಿಡು."

"ತಂದೆಯವರ ಜೊತೆಯಲ್ಲಿ ನಾನು ಹೊರಟುಹೋಗುತ್ತೇನೆ."

"ಸರಿ, ಹಾಗೇ ಆಗಲಿ" ಎಂದು ಹೇಳಿ ವಿಪ್ರದಾಸ್ ಹೊರಟು ಹೋದ.

ಅಲ್ಲೇ ಊಟದ ಮೇಜಿನಮೇಲೆ ತನ್ನ ತಂದೆಗೆ ಬಂದ ಟೆಲಿಗ್ರಾಂ ಬಿದ್ದಿತ್ತು. ವಂದನ ಅದನ್ನು ಬಿಚ್ಚಿ ಓದಿದಳು. ಬೊಂಬಾಯಿ ಆಫೀಸಿನದು. ಬಹಳ ತುರ್ತಿನದು. ಹೊತ್ತು ಕಳೆಯುವಂತಿರಲಿಲ್ಲ.

ವಂದನ ತನ್ನ ಕೋಣೆಗೆ ಹೋಗಿ ಸಾಮಾನುಗಳನ್ನು ಕಟ್ಟಿ ಸಿದ್ಧ ಮಾಡತೊಡಗಿದಳು. ಇನ್ನೂ ತಂದೆ ಬಂದಿರಲಿಲ್ಲ.

ಒಂದೆರಡು ಗಂಟೆಗಳಾದಮೇಲೆ ಅನ್ನದ ಬಂದು ಒಂದು ಟೆಲಿಗ್ರಾಂ ವಂದನಳ ಕೈಗೆ ಕೊಟ್ಟು "ನೋಡಿ ಇದು ನಿಮ್ಮ ಹೆಸರಿಗೆ ಬಂದಿದೆ" ಎಂದಳು.

"ಏನು ನನಗೆ ಟೆಲಿಗ್ರಾಮೋ" ಎಂದು ಆಶ್ಚರ್ಯದಿಂದ ಅದನ್ನು ತೆಗೆದುಕೊಂಡು ಒಡೆದು ನೋಡಿದಳು. ನಿಜ, ಬಲರಾಮುಪುರದಿಂದ ದಯಾಮಯಿ ಅವಳ ಹೆಸರಿಗೆ ಟೆಲಿಗ್ರಾಂ ಕೊಟ್ಟಿದ್ದಾಳೆ "ತಂದೆಯ ಜೊತೆಯಲ್ಲಿ ಖಂಡಿತ ಹೋಗಬೇಡ. ನಿನ್ನ ಅಕ್ಕ ಮತ್ತು ದ್ವಿಜದಾಸ ಇಬ್ಬರೂ ರಾತ್ರೆ ರೈಲಿನಲ್ಲಿ ಬರುತ್ತಾರೆ" ಎಂತ ಅದರಲ್ಲಿತ್ತು.

## ೧೧

ರಾತ್ರಿ ಗಾಡಿಯಲ್ಲಿ ಅಕ್ಕ ಬರುತ್ತಾಳೆ. ಜೊತೆಯಲ್ಲಿ ದ್ವಿಜದಾಸ್ ಬೇರೆ. ವಂದನಳಿಗೆ ಹಿಡಿಸಲಾರದಷ್ಟು ಆನಂದ. ಅವತ್ತು ಅಕ್ಕನ ಅತ್ತೆಯ ಮನೆಯಲ್ಲಿ ತಾನು ವರ್ತಿಸಿದುದನ್ನು ನೆನೆನೆನೆದು ಮನಸ್ಸಿನಲ್ಲಿಯೇ ಲಜ್ಜಿತಳಾಗುತ್ತಿದ್ದಳು. ಅದನ್ನು ಮರೆಯಲು ಏನೊಂದು

ಉಪಾಯವೂ ಅವಳಿಗೆ ತೋರುತ್ತಿರಲಿಲ್ಲ. ಇಂದು ಮನಸ್ಸಿಲ್ಲದಿದ್ದರೂ ತಂದೆಯ ಜೊತೆಯಲ್ಲಿ ಹೋಗಬೇಕಾಗಿತ್ತು. ಆದರೆ ಅಕಸ್ಮಾತ್ತಾಗಿ ಅನಿರೀಕ್ಷಿತ ರೀತಿಯಲ್ಲಿ ಆ ಸಮಸ್ಯೆಯು ಪರಿಹಾರವಾದುದನ್ನು ಕಂಡು ಅವಳಿಗೆ ಅಪಾರ ಆನಂದವಾಯಿತು. ಟೆಲಿಗ್ರಾಮನ್ನು ಪುನಃಪುನಃ ಓದಿದಳು. ಅನ್ನದಾಗೆ ಓದಿ ಹೇಳಿದಳು. ತಂದೆ ಬಂದರೆ ಸಾಕು. ಅವರ ಕೈಯಲ್ಲಿ ಈ ಟೆಲಿಗ್ರಾಂ ಕೊಟ್ಟುಬಿಡಬೇಕೆಂದು ಹಾತೊರೆದು ಅವರ ದಾರಿಯನ್ನೇ ಕಾದು ಕುಳಿತಳು. ವಿಪ್ರದಾಸನೂ ಮನೆಯಲ್ಲಿಲ್ಲ. ಆಗತಾನೆ ಎಲ್ಲಿಗೋ ಹೊರಟುಹೋಗಿದ್ದ. ಈ ಏರ್ಪಾಟು ಅವನೇ ಮಾಡಿರಬೇಕು—ಆದುದರಿಂದ ಅವನಿಗೇನು ಇದನ್ನು ಹೇಳಬೇಕಾಗಿಲ್ಲ,—ಆದರೂ ಒಂದು ಮಾತು ತಿಳಿಸಲೇ ಬೇಕು. ಅವಳು ಒಳಒಳಗೇ "ವಿಪ್ರದಾಸರಿಗೆ ಏನೆಂದು ತಿಳಿಸಲಿ" ಎಂದು ಯೋಚಿಸುತ್ತಿದ್ದಳು. ಅವಳಿಗೆ ಯಾವ ಶಬ್ದವೂ ಉಚಿತವಾಗಿ ತೋರುತ್ತಿರಲಿಲ್ಲ. ತನ್ನ ಆನಂದವನ್ನು ಸ್ವಾಭಾವಿಕ ರೀತಿಯಲ್ಲಿ ಹೇಳುವ ಮಾರ್ಗ ಅವಳ ಪಾಲಿಗೆ ಎಂದೋ ಇಲ್ಲದಾಗಿತ್ತು. ಬಹು ನಿಂದಿತರಾದ ಜಮೀನ್ದಾರ್ ಶ್ರೇಣಿಯ ಈ ಕಠೋರ ಮತ್ತು ಆಚಾರ ನಿಷ್ಠ ಮನುಷ್ಯ ಮೊದಲಿನಿಂದಲೂ ಅವಳಿಗೆ ಸರಿಬೀಳುತ್ತಿರಲಿಲ್ಲ. ಈಗಲೂ ಕೂಡ ಅವನು ಅವಳಿಗೆ ದುರ್ಬೋಧ್ಯನಾಗಿದ್ದಾನೆ. ಆದರೂ ಅವಳ ಮನಸ್ಸು ಕ್ರಮೇಣ ಬದಲಾಯಿಸುತ್ತಿದೆ. ಆ ಮನುಷ್ಯನ ಆಚರಣೆ ಪರಿಮಿತವಾದದ್ದು. ಮಾತು ಅತಿ ಸ್ವಲ್ಪ, ಪರಿಷ್ಕೃತವಾದ ನಡೆ ನುಡಿ. ಎಲ್ಲರೂ ಒಪ್ಪುವಂತಹದು,—ಇದನ್ನು ಅವಳು ಕಣ್ಣಾರೆ ಕಂಡಿದ್ದಳು. ಆದರೂ ಏನೋ ಒಂದು ಆತಂಕ ಅವನಿಟ್ಟ ಹೆಜ್ಜೆ ಹೆಜ್ಜೆಯಲ್ಲಿಯೂ ಅವಳಿಗೆ ಕಾಣುತ್ತಿದ್ದಿತು. ಎಲ್ಲರ ಮಧ್ಯೆ ಇದ್ದರೂ ಆ ಮನುಷ್ಯ ಎಲ್ಲರಿಗೂ ದೂರವಾಗಿದ್ದಾನೆ. ಆಶ್ರಿತರು, ದಾಸ-ದಾಸಿಯರು, ಕೆಲಸಗಾರರು ಎಲ್ಲರೂ ಇವನಲ್ಲಿ ಶ್ರದ್ಧೆಯನ್ನಿಟ್ಟಿದ್ದಾರೆ; ಅದಕ್ಕಿಂತ ಮಿಗಿಲಾಗಿ ಭಯ ಇವರಲ್ಲಿದೆ. ಅವರ ಮನೋಭಾವವನ್ನು ಬೇಕಾದರೆ ಈ ರೀತಿ ಹೇಳಬಹುದು. "ದೊಡ್ಡ ಯಜಮಾನರೇ ಅನ್ನದಾತರು, ಅವರೇ ರಕ್ಷಕರು. ಆಪತ್ತಿಗೆ ಒದಗುವವರೂ ಅವರೇ. ಆದರೆ ಅವರು ಯಾರ ಆತ್ಮೀಯರೂ ಅಲ್ಲ. ಪ್ರಿಯ ಜನರ ವಿಯೋಗವಾದಾಗ ಯಾರು ಬೇಕಾದರೂ ಹೋಗಿ ಅವರಲ್ಲಿ ಗೋಳು ತೋಡಿಕೊಳ್ಳಬಹುದು; ಅದೇ ಮಗನ ಮದುವೆ ಎಂದು ಅವರನ್ನು ಕರೆಯಲು ಯಾರಿಗೂ ಸಾಧ್ಯವಿಲ್ಲ. ಅಷ್ಟು ಘನತೆ!"

ನಿನ್ನೆಯ ದಿನ ಅಡಿಗೆಯವಳನ್ನು ಏನೂ ತಿಳಿಯದ ಸರಲ ಸ್ವಭಾವದವಳು ಎಂದು ಭಾವಿಸಿ ಮಾತು ಮಾತಿನಲ್ಲಿ ಇದಕ್ಕೆ ಕಾರಣ ವನ್ನು ಕೇಳಿದಳು. ಎಷ್ಟೆಷ್ಟೊ ಮಾತುಕತೆ ನಡೆದಮೇಲೆ ಅವಳಿಗೆ ತಿಳಿ ದದ್ದು ಇಷ್ಟೆ—ಎಲ್ಲರೂ ಹೆದರುತ್ತಾರೆ ಅವಳೂ ಹೆದರುತ್ತಾಳೆ. ಇದು ಹೊರತು ಅವಳಿಗೆ ಬೇರೆ ಇನ್ನೇನೂ ಗೊತ್ತಿಲ್ಲ. ಬಹುಶಃ ಬೇರೆ ಯಾರನ್ನು ಕೇಳಿದರೂ ಇದೇ ಉತ್ತರ ಸಿಗಬಹುದು. ಅಂತೂ ಮುಖರ್ಜಿ ಪರಿವಾರ ದಲ್ಲಿ ಇದೊಂದು ದೊಡ್ಡ ಸಾಂಕ್ರಾಮಿಕ ರೋಗ. ಆ ದಿನ ರೈಲಿನಲ್ಲಿ ಆ ಒಂದು ಸಣ್ಣ ಘಟನೆಯನ್ನು ಆಧಾರವಾಗಿಟ್ಟುಕೊಂಡು ವಿಪ್ರದಾಸನು ತನ್ನ ಉಗ್ರಮೂರ್ತಿಯನ್ನು ತೋರಿದ್ದ. ಆದರೆ ಬಹುಬೇಗ ಅದನ್ನು ಸಂಪೂರ್ಣವಾಗಿ ಅಡಗಿಸಿಬಿಟ್ಟ. ಆದಿನ ರೈಲಿನಲ್ಲಿ ಹಾಸ್ಯ ಕುಚೋದ್ಯದ ಎಷ್ಟು ಮಾತುಗಳಾದವು—ಆದರೆ ಇವತ್ತು ಅದೇ ಮನುಷ್ಯ ಈ ಮನೆಯ ಯಜಮಾನ. ನಂಬುವುದು ಕೂಡ ಅಸಾಧ್ಯ!

ಇದ್ದಕ್ಕಿದ್ದಂತೆಯೇ ಕೆಳಗಡೆ ಗಲಾಟೆ ಕೇಳಿಸಿತು. ಯಾವನೋ ಒಬ್ಬ ಬಂದು 'ನಿಮ್ಮ ತಂದೆ ಸ್ಟೇಷನ್ನಿನಿಂದ ಕಾಲು ಮುರಿದುಕೊಂಡು ಬಂದಿದ್ದಾರೆ', ಎಂತ ಹೇಳಿದ. ಅಲ್ಲೆ ಕಿಟಕಿಯಿಂದ ಬಗ್ಗಿ ನೋಡಿದಾಗ ಬ್ಯಾರಿಸ್ಟರ್ ದಂಪತಿಗಳು ಅವಳ ತಂದೆಯನ್ನು ಕಾರಿನಿಂದ ಕೆಳಗಿಳಿಸುತ್ತಿ ರುವುದನ್ನು ಕಂಡಳು. ಅವರ ಒಂದು ಕಾಲಿನ ಬೂಡ್ಸು ಕಾಲುಚೀಲ ಬಿಚ್ಚಿ ಅದರಮೇಲೆ ಒದ್ದೆ ಬಟ್ಟೆಯನ್ನು ಸುತ್ತಿದ್ದಾರೆ. ಸ್ಟೇಷನ್ನಿನ ನುಗ್ಗಾಟ ದಲ್ಲಿ ಯಾರೋ ಏನೊ ಒಂದು ದೊಡ್ಡಪೆಟ್ಟಿಗೆಯನ್ನು ಅವರ ಕಾಲಿನಮೇಲೆ ಹಾಕಿಬಿಟ್ಟನಂತೆ. ಅದರಿಂದ ಈ ಅವಸ್ಥೆ. ಜನಗಳು ಅವರನ್ನು ಕೈ ಹಿಡಿದು ಮೇಲಕ್ಕೆ ತಂದು ಹಾಸಿಗೆಮೇಲೆ ಮಲಗಿಸಿದರು. ಜವಾನ ಡಾಕ್ಟರನ್ನು ಕರೆಯಲು ಓಡಿದ. ಡಾಕ್ಟರ್ ಬಂದು ಬ್ಯಾಂಡೇಜ್ ಕಟ್ಟಿ ಔಷಧಿ ಕೊಟ್ಟು 'ಹೆಚ್ಚೇನು ಆಗಿಲ್ಲ. ಆದರೆ ಇನ್ನೊಂದು ಎಂಟುಹತ್ತು ದಿನ ಓಡಾಡುವಂತಿಲ್ಲ.' ಎಂದು ಹೇಳಿ ಹೋದರು.

ಮೂರನೆಯ ದಿನವೇ ಮಧ್ಯಾಹ್ನ ನಾಲ್ಕು ಗಂಟೆಯ ಹೊತ್ತಿಗೆ ಸತಿ ರೈಲಿನಿಂದ ಬಂದಿಳಿದಳು. ವಂದನ ಅವರನ್ನು ಆನಂದದಿಂದ ಬರ ಮಾಡಿಕೊಳ್ಳಬೇಕೆಂದು ಕೆಳಕ್ಕೆ ಇಳಿದವಳು ಪೆಚ್ಚಾಗಿ ನಿಂತುಬಿಟ್ಟಳು. ಅಕ್ಕ ಮಾತ್ರ ಕಾರಿನಿಂದ ಇಳಿಯಲಿಲ್ಲ. ಅವಳ ಅತ್ತೆ—ದಯಾಮಯಿ ಸಹ ಜೊತೆಯಲ್ಲಿದ್ದಾರೆ. ವಂದನಳ ಹರ್ಷಧ್ವನಿಯು ಹಾಗೆಯೆ

ಹಾರಿಹೋಯಿತು. ಅವಳು ಯಂತ್ರದಂತೆ ಹೇಗೊ ನಮಸ್ಕರಿಸಿ ಒಂದು ಕಡೆ ಹೋಗಿ ನಿಲ್ಲಬೇಕು—ಅಷ್ಟರಲ್ಲಿ ದಯಾಮಯಿಯು ಹತ್ತಿರ ಬಂದು ಅವಳ ಗಲ್ಲವನ್ನು ಮುಟ್ಟಿ ಚುಂಬಿಸುತ್ತ ನಕ್ಕು "ಏನಮ್ಮ, ಚೆನ್ನಾಗಿದ್ದೀಯಾ" ಎಂದು ಕೇಳಿದಳು.

ವಂದನ 'ಹೂಂ' ಎಂದು ತಲೆ ಅಲ್ಲಾಡಿಸಿ "ಚೆನ್ನಾಗಿದ್ದೇವೆ. ಏನು ತಾವು ಅಕಸ್ಮಾತ್ತಾಗಿ ದಯಮಾಡಿಸಿದಿರಿ ?" ಎಂತ ಪ್ರಶ್ನಿಸಿದಳು.

"ಬಾರದೆ ಇನ್ನೇನು ಮಾಡಲಿ ಹೇಳು ! ಒಬ್ಬ ಹುಚ್ಚು ಹುಡುಗಿ ಕೋಪಿಸಿಕೊಂಡು ಊಟ ತಿಂಡಿ ಸಹ ಬಿಟ್ಟು ಓಡಿಬಂದಿರುವಾಗ ಅವಳನ್ನು ಸಮಾಧಾನ ಪಡಿಸಿ ಮನೆಗೆ ಕರೆದುಕೊಂಡು ಹೋಗದೆ ಇದ್ದರೆ ನನಗೆಲ್ಲಿಯ ಶಾಂತಿ ?" ಎಂದು ದಯಾಮಯಿ ನುಡಿದಳು.

ವಂದನ ನಕ್ಕು ಹೇಳಿದಳು—"ನಾನು ಕೋಪಿಸಿಕೊಂಡು ಬಂದೆನೆಂದು ನಿಮಗೆ ಹೇಗೆ ಗೊತ್ತು ?" ದಯಾಮಯಿ—"ನಿನಗೂ ಮಕ್ಕಳು ಮರಿ ಆಗಲಿ ; ಅವರನ್ನು ಬೆಳಸಿ ದೊಡ್ಡವರನ್ನಾಗಿ ಮಾಡು. ಆಗ ನಿನ್ನ ಮಗಳೇನಾದರೂ ಕೋಪಿಸಿಕೊಂಡರೆ ಅಮ್ಮ ಹೇಗೆ ತಿಳಿದುಕೊಳ್ಳುತ್ತಾಳೆ ಎನ್ನುವುದು ಗೊತ್ತಾಗುತ್ತದೆ."

ದಯಾಮಯಿ ಈ ಮಾತುಗಳನ್ನು ಎಷ್ಟು ಮೃದುಮಧುರವಾಗಿ ಹೇಳಿದಳೆಂದರೆ ವಂದನಳಿಗೆ ಏನೊಂದು ಉತ್ತರವನ್ನೂ ಕೊಡಲಾಗದೆ ಅವಳ ಕಾಲುಮುಟ್ಟಿ ನಮಸ್ಕರಿಸಿದಳು. ಅನಂತರ ಎದ್ದು ನಿಂತು "ತಂದೆಯವರ ಮೈಯಲ್ಲಿ ಚೆನ್ನಾಗಿಲ್ಲ ಅಮ್ಮ" ಎಂದು ಹೇಳಿದಳು.

"ಮೈಯಲ್ಲಿ ಚೆನ್ನಾಗಿಲ್ಲವೆ ? ಏಕೆ ? ಏನಾಯಿತು ?"

"ಕಾಲಿಗೆ ಏಟು ಬಿದ್ದು ಮೇಲಕ್ಕೆ ಏಳಲು ಸಹ ಆಗದೆ ಮಲಗಿದ್ದಾರೆ" ಎಂದು ಒದಗಿಬಂದ ದುರ್ಘಟನೆಯನ್ನು ವಿವರಿಸಿ ಹೇಳಿದಳು.

ದಯಾಮಯಿ ಗಾಬರಿಗೊಂಡು "ಔಷಧಿ ಗಿವುಷಧಿ ಸರಿಯಾಗಿ ನಡೆದಿದೆಯೆ? ನಿನ್ನ ತಂದೆ ಎಲ್ಲಿ ಮಲಗಿದ್ದಾರೆ ? ಎಲ್ಲಿ ನಡೆ ಅಲ್ಲಿಗೆ ಹೋಗೋಣ. ಮೊದಲು ಅವರನ್ನು ನೋಡಿ ಆಮೇಲೆ ಮಿಕ್ಕ ಕೆಲಸ" ಎಂದು ಹೇಳಿ ಸತಿಯೊಡಗೂಡಿ ವಂದನಳ ಹಿಂದೆ ಹೊರಟು ಮಹಡಿ ಮೇಲಿದ್ದ ರಾವ್ ಸಾಹೇಬರ ಕೊಠಡಿಗೆ ಬಂದರು. ಕಾಲಿನಲ್ಲಿ ಹೆಚ್ಚು ನೋವಿಲ್ಲದ ಕಾರಣ ರಾವ್ ಸಾಹೇಬರು ಹಾಸಿಗೆಯಮೇಲೆ ಕುಳಿತುಕೊಂಡು ಆಗಂತುಕರಿಗೆ ನಮಸ್ಕಾರ ಮಾಡಿದರು. ದಯಾಮಯಿ ಕೈ ಎತ್ತಿ ಪ್ರತಿ

ನಮಸ್ಕಾರವನ್ನು ಮಾಡಿ ನಗುತ್ತಾ "ಓಹೋ ಎಲ್ಲೋ ಹೋಗಿ ಕಾಲು ಮುರಿಸಿಕೊಂಡು ಬಂದಿದ್ದೀರಲ್ಲ ಎಲ್ಲಿ ನುಗ್ಗಿದ್ದಿರಿ?" ಎಂದು ಕೇಳಿದಳು.

ಸತಿಯೂ ವಂದನಳೂ ತಮ್ಮ ಮುಖಗಳನ್ನು ಬೇರೆ ಕಡೆ ತಿರುಗಿಸಿದರು. ರಾವ್‌ಸಾಹೇಬರು ಬಹಳ ಒಳ್ಳೆಯ ಸ್ವಭಾವದವರಾದ ಕಾರಣ ಪ್ರತಿವಾದಿಸುವ ಧ್ವನಿಯಲ್ಲಿ ಸ್ಟೇಷನ್ನಿನ ನುಗ್ಗಾಟದಲ್ಲಿ ತಾನಾಗಿ ಬಂದು ಒದಗಿದ ದುರ್ಗತಿಯನ್ನು ಸವಿಸ್ತಾರವಾಗಿ ತಿಳಿಸಿದರು.

ದಯಾಮಯಿಯು ನಗುತ್ತಾ, "ಏನೋ ಹಣೆಯಲ್ಲಿ ಬರೆದದ್ದು ಆಗಿಹೋಯಿತು ಇನ್ನು ಈ ಬಂಧನದಲ್ಲಿ ಕೆಲವು ದಿನ ಮನೆಯಲ್ಲಿಯೇ ಇರಿ. ನಿಮ್ಮನ್ನು ಹತೋಟಿಯಲ್ಲಿಟ್ಟುಕೊಳ್ಳಲು ಸಾಧ್ಯವಾಗುವುದೋ ಇಲ್ಲವೋ ಎಂದು ಯೋಚಿಸಿ ಮತ್ತೊಬ್ಬಳನ್ನು ಕರೆದುಕೊಂಡು ಬಂದಿದ್ದೇನೆ. ಇಬ್ಬರೂ ಸರದಿಯಿಂದ ನಿಮ್ಮ ಸೇವೆ ಮಾಡಲಿ" ಎಂದು ಹೇಳಿದಳು.

ರಾವ್‌ಸಾಹೇಬರು ಆ ಮಾತನ್ನು ನಿಜವೆಂತಲೇ ನಂಬಿದ್ದೂ ಅಲ್ಲದೆ ಇಂತಹ ಸಹಾನುಭೂತಿಯುತ ಅನುಗ್ರಹಕ್ಕಾಗಿ ಧನ್ಯವಾದವನ್ನು ಅರ್ಪಿಸಿದರು.

"ಪುನಃ ಬಂದು ಕಾಣುತ್ತೇನೆ ಹೋಗಿ ಸ್ವಲ್ಪ ಮೈ ತೊಳೆದುಕೊಳ್ಳಬೇಕು" ಎಂದು ಹೇಳಿ ಅವರಿಂದ ಬೀಳ್ಕೊಂಡು ದಯಾಮಯಿ ಕೋಣೆಯಿಂದ ಹೊರಟುಹೋದಳು,

ದ್ವಿಜದಾಸ ಮತ್ತು ಅವನ ಅಣ್ಣನ ಮಗ ವಾಸುದೇವ ಇಬ್ಬರೂ ಬೇರೆ ಮೋಟಾರಿನಲ್ಲಿ ಬಂದಿಳಿದರು. ಅದಕ್ಕೆ ಹಿಂದೆ ವಂದನ ತನ್ನ ಅಕ್ಕನ ಮಗನನ್ನು ನೋಡಿರಲಿಲ್ಲ. ಅವನು ಸ್ಕೂಲಿಗೆ ಹೋಗಿದ್ದ. ಅವನು ಸ್ಕೂಲಿನಿಂದ ಬರುವ ಹೊತ್ತಿಗೆ ವಂದನ ಅಲ್ಲಿಂದ ಹೊರಟು ಬಿಟ್ಟಿದ್ದಳು. ಅಜ್ಜಿಯನ್ನು ಬಿಟ್ಟು ವಾಸು ಅರೆನಿಮಿಷವೂ ಇರಲಾರ. ಆದುದರಿಂದ ಅವರ ಜೊತೆಯಲ್ಲಿ ಹೊರಟುಹೋಗಿದ್ದ.

ಕಕ್ಕ ವಂದನಳ ಪರಿಚಯ ಮಾಡಿಸಿಕೊಟ್ಟ ಮೇಲೆ ವಾಸುದೇವನು ಅವಳಿಗೆ ನಮಸ್ಕಾರ ಮಾಡಿದನು. ಅವಳ ಕಾಲಿನಲ್ಲಿ ಬೂಡ್ಸು ಇದ್ದುದನ್ನು ಕಂಡು ಅವನು ಮನಸ್ಸಿನಲ್ಲಿಯೇ ಆಶ್ಚರ್ಯಪಟ್ಟುಕೊಂಡನು; ಆದರೆ ಏನೂ ಹೇಳಲಿಲ್ಲ. ಇನ್ನೂ ಎಂಟು-ಒಂಬತ್ತು ವರ್ಷದ ಹುಡುಗ ಆದರೂ ಎಲ್ಲಾ ಗೊತ್ತಿದೆ.

ವಂದನ ಪ್ರೀತಿಯಿಂದ ಅವನನ್ನು ಎದೆಗೆ ಅಪ್ಪಿಕೊಂಡು " ಏನೊ, ನನ್ನ ಗುರುತು ಸಿಕ್ಕಲಿಲ್ಲವೇನೊ ವಾಸು " ಎಂದು ಕೇಳಿದಳು.

" ಗುರುತು ಹಿಡಿದೆನಲ್ಲ, ಚಿಕ್ಕಮ್ಮ "

" ಆಗ ಇನ್ನೂ ಐದಾರು ವರ್ಷದ ಹುಡುಗ ಆಗಿದ್ದೆ-ನಿನಗೆ ಹೇಗೆ ನೆನಪಿದ್ದೀತು ?

" ಆದರೂ ನೆನಪಿದೆ ನೋಡು. ಚಿಕ್ಕಮ್ಮ ನಿನ್ನನ್ನು ನೋಡಿದ ಕೂಡಲೆ ಗುರುತುಹಿಡಿದೆ. ನೀನು ನಮ್ಮ ಮನೆಯಿಂದ ಸಿಟ್ಟುಮಾಡಿ ಕೊಂಡು ಹೊರಟು ಬಂದಿದ್ದೀಯ. ಸ್ಕೂಲಿನಿಂದ ಬಂದು ನೋಡುತ್ತೇನೆ. ನೀನು ಅಲ್ಲಿ ಇಲ್ಲವೇ ಇಲ್ಲ."

" ಸಿಟ್ಟಿನಿಂದ ಹೊರಟು ಬಂದೆ ಎಂತ ನಿನಗೆ ಯಾರು ಹೇಳಿದರು ? "

" ಅಜ್ಜಿ ಹತ್ತಿರ ನನ್ನ ಕಕ್ಕ ಹೇಳುತ್ತಿದ್ದ." ವಂದನ ದ್ವಿಜದಾಸನ ಕಡೆ ನೋಡಿ " ನಾನು ಸಿಟ್ಟುಗೊಂಡಿದ್ದು ನಿಮಗಾದರೂ ಏನು ಗೊತ್ತು ?" ಎಂದು ಕೇಳಿದಳು.

ದ್ವಿಜದಾಸ್- ನನಗೆ ಮಾತ್ರ ಅಲ್ಲ ಮನೆ ಮಂದಿಗೆಲ್ಲ ಗೊತ್ತು. ಅಲ್ಲದೆ ನೀನೇನೂ ಮರೆಮಾಚಲು ಹೆಚ್ಚು ಪ್ರಯತ್ನವನ್ನೂ ಮಾಡಿಲ್ಲ.

ವಂದನ -ನನಗೆ ಸಿಟ್ಟು ಬಂದಿರುವುದು ಎಲ್ಲರಿಗೂ ಗೊತ್ತೇ ಹೊರತು, ಅದಕ್ಕೆ ಕಾರಣವೇನು ಎಂದು ಯಾರಿಗಾದರೂ ಗೊತ್ತೆ ?

ದ್ವಿಜದಾಸ್—ಎಲ್ಲರಿಗೂ ಗೊತ್ತಿಲ್ಲದೆ ಇರಬಹುದು. ಆದರೆ ನನಗೆ ಗೊತ್ತು. ನಿಮ್ಮ ತಂದೆಗೆ ಬೇರೆ ಮೇಜಿನ ಮೇಲೆ ಊಟಕ್ಕೆ ಬಡಿಸಿದರು ಅದಕ್ಕೆ "

ವಂದನ—ಒಂದು ವೇಳೆ ಅದೇ ಕಾರಣವಾಗಿದ್ದರೆ ನಾನು ಸಿಟ್ಟು ಮಾಡಿದ್ದು ಉಚಿತವೊ, ಅನುಚಿತವೋ ? "

ದ್ವಿಜದಾಸ್—ಉಚಿತವೇ ಆದರೆ ಅವರಿಗೂ ಬೇರೆ ಉಪಾಯ ಇರಲಿಲ್ಲ.

" ನೀವು ನನ್ನ ತಂದೆಯ ಜೊತೆಯಲ್ಲಿ ಕುಳಿತು ಊಟ ಮಾಡು ವಿರೊ ? "

" ಓ ಹೋ, ಊಟ ಮಾಡುತ್ತೇನೆ. ಆದರೆ ಅಣ್ಣಾ ಏನಾದರೂ ಬೇಡ ಎಂದರೆ ಸಾಧ್ಯವಿಲ್ಲ " .

"ಊಟ ಮಾಡಲು ಸಾಧ್ಯವಿಲ್ಲವೆ? ಅಂದರೆ ನಿಮಗೆ ಬೇಡ ಎಂದು ಹೇಳುವ ಅಧಿಕಾರ ನಿಮ್ಮ ಅಣ್ಣನಿಗೆ ಇದೆ ಎಂದು ನೀವು ತಿಳಿದಿದ್ದೀರಾ?"

"ಅದು ಅವರಿಗೆ ಸಂಬಂಧಪಟ್ಟದ್ದು. ನನಗಲ್ಲ. ಅಣ್ಣನ ಆಜ್ಞೆಯನ್ನು ಮೀರುವುದು ಅನುಚಿತ ಎಂದು ನನ್ನ ಭಾವನೆ"

"ನೀವು ಕರ್ತವ್ಯವೆಂದು ತಿಳಿದಿರುವುದನ್ನು ಮಾಡುವ ಸಾಹಸ ನಿಮ್ಮಲ್ಲಿಲ್ಲವೆ?"

ದ್ವಿಜದಾಸನು ಕ್ಷಣಕಾಲ ಸುಮ್ಮನಿದ್ದು ಪುನಃ ಹೇಳಿದ– "ನೋಡಿ, ಸಾಹಸ ಇದೆ ಅಥವಾ ಇಲ್ಲ ಅನ್ನುವ ಪ್ರಶ್ನೆಯಲ್ಲ ಇಲ್ಲಿ. ಸ್ವಭಾವತಃ ನಾನೇನೂ ಹೆದರುವನಲ್ಲ; ಆದರೆ ಅಣ್ಣನು ಬೇಡವೆಂದು ಹೇಳಿದಮೇಲೆ ಅದನ್ನು ಮೀರಲಾರೆ. ಆ ಯೋಚನೆಯನ್ನು ಸಹ ಮಾಡಲಾರೆ. ಚಿಕ್ಕ ಹುಡುಗನಾಗಿದ್ದಾಗ ನಾನು ಅಪ್ಪನ ಎಷ್ಟೋ ಮಾತುಗಳನ್ನು ಕೇಳಿಲ್ಲ; ಅಂದಮಾತ್ರಕ್ಕೆ ಅದಕ್ಕೆ ಹೊಡೆತ ಬಿದ್ದಿಲ್ಲ ಅಂತಲೂ ಅಲ್ಲ–ಆದರೆ ನಮ್ಮ ಅಣ್ಣನ ಸ್ವಭಾವವೇ ಬೇರೆ ಅವರು ಆಡಿದ ಮಾತನ್ನು ಯಾರೂ, ಯಾವಾಗಲೂ ಉಲ್ಲಂಘಿಸಲಾರರು"

"ಉಲ್ಲಂಘಿಸಿದರೆ ಏನಾಗುತ್ತದೆ?"

"ಏನಾಗುತ್ತೊ ಅದು ನನಗೆ ಗೊತ್ತಿಲ್ಲ; ಆದರೆ ನಮ್ಮ ಪರಿವಾರದಲ್ಲಿ ಇಂದಿನವರೆಗೆ ಈ ಪ್ರಶ್ನೆ ಎದ್ದಿಲ್ಲ".

"ಅಕ್ಕ ಕಾಗದದಲ್ಲಿ ನೀವು ದೇಶದ ಹಿತಕ್ಕೋಸ್ಕರ ಏನೇನೋ ಮಾಡುತ್ತಿದ್ದೀರೆಂದೂ ಅದು ನಿಮ್ಮ ಅಣ್ಣನ ಇಚ್ಛೆಗೆ ವಿರುದ್ಧವಾಗಿದೆಯೆಂದೂ ಮುಂತಾಗಿ ಬರೆದಿದ್ದಾಳೆ. ಹಾಗಾದರೆ ಅದನ್ನೆಲ್ಲ ಹೇಗೆ ಮಾಡುತ್ತೀರಿ."

"ಅವರ ಇಚ್ಛೆಗೆ ವಿರುದ್ಧವಾಗಿದ್ದರೂ ಅವರ ನಿಷೇಧಕ್ಕೆ ವಿರುದ್ಧವಾಗಿಲ್ಲ. ಹಾಗೇನಾದರೂ ಆಗಿದ್ದ ಪಕ್ಷಕ್ಕೆ ನನ್ನಿಂದ ಅದೂ ಸಾಧ್ಯವಿರಲಿಲ್ಲ."

ವಂದನ ಒಂದೆರಡು ನಿಮಿಷ ಸುಮ್ಮನಿದ್ದು ಹೇಳಿದಳು—ಅಕ್ಕನ ಕಾಗದ ಓದಿ ನಾನು ನೀವು ಹೇಗಿರಬಹುದೆಂದು ಊಹಿಸಿದ್ದೆನೋ ನೀವು ಹಾಗಿಲ್ಲ. ಈಗ ಬೇಕಾದರೆ ನಿಮ್ಮಿಂದ ಅವರು ಎಳ್ಳಷ್ಟೂ ಹೆದರಬೇಕಾಗಿಲ್ಲ ಎಂದು ಬರೆದುಕೊಡಬಲ್ಲೆ. ನಿಮ್ಮ ಸ್ವದೇಶಪ್ರೇಮದ ಅಭಿನಯದಿಂದ ಮುಖರ್ಜಿ ವಂಶದ ವಿಪುಲ ಸಂಪತ್ತಿನಲ್ಲಿ ಒಂದು ಬಿಡಿಕಾಸು ಕೂಡ

ಹಾಳಾಗಲಾರದು. ಇದರಿಂದ ಅಕ್ಕ ನಿಶ್ಚಿಂತಳಾಗಿರಬಹುದು''

ದ್ವಿಜದಾಸನು ನಕ್ಕು "ಅಕ್ಕನದು ಹಾಳಾಗುತ್ತಿರಲಿ ಅಂತ ಯೋಚಿಸುತ್ತಿರುತ್ತೀರೋ ನೀವು'' ಎಂದನು.

ವಂದನ ಒಳ್ಳೆ ಸಂಕಟದಲ್ಲಿ ಸಿಕ್ಕಿಬಿದ್ದು "ಇಲ್ಲ. ನಾನೇಕೆ ಅದನ್ನು ಹಾರೈಸಲಿ.? ಅಲ್ಲ ಇವರ ಹೆದರಿಕೆ ದೂರವಾಗಲಿ ಎಂದು ನನ್ನ ಬಯಕೆ. ಎಲ್ಲರೂ ನಿರ್ಭಯರಾಗಿರಲಿ ಎಂದು'' ಎಂದಳು.

ದ್ವಿಜದಾಸ್—"ನಿಮಗೇಕೆ ಅಷ್ಟು ಚಿಂತೆ. ಎಲ್ಲರೂ ನಿರ್ಭಯರಾಗಿದ್ದಾರೆ. ಅಣ್ಣನ ವಿಷಯವಾಗಿ ನಾನು ಹೇಳಬಲ್ಲೆ. ಹೆದರಿಕೆ-ಬೆದರಿಕೆ ಅನ್ನುವುದರ ಹೆಸರು ಸಹ ಅವರಿಗೆ ಗೊತ್ತಿಲ್ಲ. ಇದು ಅವರ ಪ್ರಕೃತಿಗೆ ವಿರುದ್ಧ.'' ವಂದನ ನಗುತ್ತ ಅದನ್ನು ಸಮರ್ಥಿಸಿದಳು. "ಅಂದರೆ ಭಯ ಅನ್ನುವುದನ್ನು ನೀವೆಲ್ಲ ಹಂಚಿಕೊಂಡಿದ್ದೀರಿ ಅವರಿಗೆ ಅವರಿಗೆ ಅದರಲ್ಲಿ ಒಂದು ಅಂಶವೂ ಸಿಕ್ಕಲಿಲ್ಲ. ಇದೇ ತಾನೆ ?'' ಇದನ್ನು ಕೇಳಿ ದ್ವಿಜದಾಸನೂ ನಕ್ಕು ಹೇಳಿದ "ಹೆಚ್ಚು ಕಡಿಮೆ ಸ್ವಲ್ಪ ಹಾಗೆಯೇ ಆದರೆ ನಿಮ್ಮನ್ನು ನಾವು ವಂಚಿಸುವುದಿಲ್ಲ. ಉಳಿದಿರುವುದೆಲ್ಲ ನಿಮ್ಮದೇ ಈಗ ಮೂರು ನಾಲ್ಕು ದಿವಸದಿಂದ ಅವರ ಜೊತೆಯಲ್ಲಿದ್ದಿರಲ್ಲ. ಇನ್ನೂ ಅವರ ಪರಿಚಯ ಆಗಲಿಲ್ಲವೆ ?"

"ಇಲ್ಲ ; ನಿಮ್ಮಿಂದ ಅವರನ್ನು ಗುರುತಿಸಲು ಕಲಿಯುತ್ತೇನೆ. ಅದೇ ಆಸೆಯಲ್ಲಿದ್ದೆ.''

"ಹಾಗಾದರೆ ಮೊದಲನೆಯ ಪಾಠ-ಈ ಬೂಡ್ಸನ್ನು ಬಿಚ್ಚಿಬಿಡಿ."

ಅಷ್ಟರಲ್ಲಿ ಜವಾನ ಬಂದು" ದೊಡ್ಡಮ್ಮಾವರು ನಿಮ್ಮನ್ನು ಕರೆಯುತ್ತಿದ್ದಾರೆ. ಮೇಲಕ್ಕೆ ಬರಬೇಕಂತೆ ''ಎಂದು ಹೇಳಿದ.

ಹೋಗುತ್ತ ಹೋಗುತ್ತ ವಂದನ ಕೇಳಿದಳು-ಇದ್ದಕ್ಕಿದ್ದಂತೆ ಅಮ್ಮ ಏಕೆ ಹೊರಟು ಬಂದರು ?

"ಒಂದನೆಯದು ಕೈಲಾಸಯಾತ್ರೆ ವಿಷಯವಾಗಿ ಅವರ ಸೋದರತ್ತೆಯರ ಜೊತೆಯಲ್ಲಿ ಮಾತನಾಡುವುದು. ಎರಡನೆಯದು ನಿಮ್ಮನ್ನು ಬಲರಾಮಪುರಕ್ಕೆ ಕರೆದೊಯ್ಯುವುದು. ನೋಡಿ ಎಲ್ಲಾದರೂ 'ಆಗದು' ಎಂದುಬಿಟ್ಟೀರಿ."

ವಂದನ: "ಒಳ್ಳೆಯದು-ಹಾಗೇ ಆಗಲಿ.''

ದ್ವಿಜ: ಅಮ್ಮನ ಎದುರಿಗೆ ನಿಮ್ಮನ್ನು "ಮಿಸ್ ರಾಯ್" ಎಂದು

ಕರೆಯುವಂತಿಲ್ಲ. ನೀವು ನನಗಿಂತ ವಯಸ್ಸಿನಲ್ಲಿ ಚಿಕ್ಕವರು ಮತ್ತು ನನ್ನ ಅತ್ತಿಗೆಯ ತಂಗಿ ಬೇರೆ. ಆದ್ದರಿಂದ ನಾನು ನಿಮ್ಮನ್ನು ಹೆಸರು ಹಿಡಿದೇ ಕರೆಯುತ್ತೇನೆ. ಸಿಟ್ಟುಗಿಟ್ಟು ಮಾಡಿಕೊಂಡು ಇನ್ನೇನಾದರೂ ಉಪದ್ರವ ಗಿಪದ್ರವ ಮಾಡಿದರೆ ಕಷ್ಟ.''

ವಂದನ: ಇಲ್ಲ ಇಲ್ಲ. ಅದಕ್ಕೇಕೆ ಸಿಟ್ಟು ಮಾಡುತ್ತೇನೆ. ನನ್ನನ್ನು ಹೆಸರು ಹಿಡಿದೇ ಕರೆಯಿರಿ. ಆದರೆ ನಾನು ನಿಮ್ಮನ್ನು ಏನೆಂದು ಕರೆಯಲಿ ?" ಎಂದು ನಕ್ಕು ಕೇಳಿದಳು.

ದ್ವಿಜ: ನನ್ನನ್ನು ದ್ವಿಜಬಾಬು ಎಂತಲೇ ಕರೆಯಿರಿ. ಆದರೆ ಅಣ್ಣನನ್ನು ನೀವು ಮುಖರ್ಜಿಗಳೇ ಎಂದು ಕರೆಯುವಿರಲ್ಲ ಅದು ಚೆನ್ನಾಗಿಲ್ಲ. ಅವರನ್ನು ನೀವು ಭಾವ ಎಂದೋ ಅಥವ ಇನ್ನೇನಾದರೂ ಕರೆಯಿರಿ– ಇದು ನಿಮಗೆ ಎರಡನೆಯ ಪಾಠ"

"ಏಕೆ ?"

"ತರ್ಕ ಮಾಡಿ ಇದನ್ನೆಲ್ಲ ಹೇಳಿಕೊಡಲು ಸಾಧ್ಯವಿಲ್ಲ. ಒಪ್ಪಿಕೊಳ್ಳಬೇಕು. ಈ ಪಾಠ ಅಭ್ಯಾಸವಾಗಲಿ ಆಮೇಲೆ ಇದಕ್ಕೆ ಕಾರಣ ಹೇಳುತ್ತೇನೆ. ಈಗ ಹೇಳಲು ಸಾಧ್ಯವಿಲ್ಲ.

"ಇದರಿಂದ ಮುಖರ್ಜಿಗಳೇ ಕಕ್ಕಾಬಿಕ್ಕಿಯಾಗುತ್ತಾರೆ!''

"ಆದರೂ ಆಗಲಿ. ಆದರಿಂದ ಅವರಿಗೆ ಏನೂ ನಷ್ಟ ಇಲ್ಲ. ಅಮ್ಮ ಅತ್ತಿಗೆ ಮುಂತಾದವರೆಲ್ಲ ಸಂತೋಷಪಡುತ್ತಾರೆ. ವಾಸ್ತವವಾಗಿ ಈಗ ಇದು ಬೇಕು''

"ಸರಿ. ಹಾಗೇ ಆಗಲಿ.''

ಮೆಟ್ಟಲಿನ ಮೂಲೆಯಲ್ಲಿ ಬೂಡ್ಸು ಬಿಚ್ಚಿಟ್ಟು ವಂದನ ದಯಾಮಯಿಯ ಕೋಣೆಯೊಳಕ್ಕೆ ಹೋದಳು. ಹಿಂದೆ ಹಿಂದೆ ದ್ವಿಜದಾಸ್ ಮತ್ತು ವಾಸುದೇವ ಇಬ್ಬರೂ ಹೋದರು. ದಯಾಮಯಿ ಟ್ರಂಕ್ ಬಿಚ್ಚಿಟ್ಟುಕೊಂಡು ಏನೋ ಮಾಡುತ್ತಿದ್ದಳು. ಹತ್ತಿರ ನಿಂತಿದ್ದ ಅನ್ನದ ಬಹುಶಃ ಮನೆ ಆಡಳಿತದ ವಿವರಣೆಯನ್ನು ಒಪ್ಪಿಸುತ್ತಿದ್ದಳು. ದಯಾಮಯಿ ಮುಖ ಎತ್ತಿ ವಂದನಳ ಕಡೆ ನೋಡಿ ಪುನಃ ಏನೊಂದು ಪೀಠಿಕೆಯೂ ಇಲ್ಲದೆ ಸಹಜರೀತಿಯಿಂದ "ಏನಮ್ಮ, ನೀನು ಮೈ ತೊಳೆದಾಗಿದೆಯೆ ?'' ಎಂದು ಕೇಳಿದಳು.

"ಹೂಂ, ಆಗಿದೆ.''

“ಹಾಗಾದರೆ ಕೊಂಚ ಅಡಿಗೆ ಮನೆಗೆ ಹೋಗು. ಇಷ್ಟು ಜನಕ್ಕೆ ಅಡಿಗೆಯುವನು ಏನು ಮಾಡಿದ್ದಾನೋ ಬಿಟ್ಟಿದ್ದಾನೋ ಒಂದೂ ಗೊತ್ತಿಲ್ಲ. ನಾನು ಪೂಜೆ ಪುನಸ್ಕಾರ ಎಲ್ಲ ಪೂರೈಸಿಕೊಂಡು ಬರುತ್ತೇನೆ.”

“ವಂದನ ಸುಮ್ಮನೆ ಅವಳ ಮುಖದಕಡೆ ನೋಡಹತ್ತಿದಳು. ಆದರೆ ದಯಾಮಯಿ ಅವಳ ಕಡೆ ನೋಡಲೇ ಇಲ್ಲ. ಹಾಗೇ ತನ್ನ ಕೆಲಸ ವನ್ನು ಮಾಡುತ್ತ, “ದ್ವಿಜೂಗೆ ಮೈಯಲ್ಲಿ ಚೆನ್ನಾಗಿಲ್ಲ. ಬೆಳಿಗ್ಗೆ ಊಟ ತಿಂಡಿ ಏನೂ ಇಲ್ಲದೆ ಬಂದಿದ್ದಾನೆ. ಆದ್ದರಿಂದ ನೋಡಮ್ಮ ಅವನಿಗೆ ಏನು ಬೇಕೋ ಅದನ್ನು ಮುಂಚೆ ಮಾಡಿಬಿಡು” ಎಂದು ಹೇಳಿ ಅನ್ನದ ಳನ್ನು ಜೊತೆಗೆ ಕರೆದುಕೊಂಡು ದೇವರ ಮನೆ ಕಡೆ ಹೊರಟಳು. ವಂದನ ಏನು ಹೇಳುವಳೆಂದು ಕೇಳಲು ಕೂಡ ನಿಲ್ಲಲಿಲ್ಲ.

“ಏನು ನಿಮ್ಮ ಆರೋಗ್ಯ ಚೆನ್ನಾಗಿಲ್ಲವೆ?” ಎಂದು ವಂದನ ದ್ವಿಜ ದಾಸನನ್ನು ಕೇಳಿದಳು.

‘ಎಲ್ಲೊ ಸ್ವಲ್ಪ ಜ್ವರ ಬಂದಂತಿದೆ’ ಎಂದು ಅವನು ಉತ್ತರ ಕೊಟ್ಟ.

“ನಿಮಗೆ ಈಗ ಏನು ಮಾಡಿಕೊಡಲಿ”

“ಬಾರ್ಲಿ ಮತ್ತು ಸೀಮೆ ಅಕ್ಕಿ ಗಂಜಿ ಇವೆರಡು ಬಿಟ್ಟು ಬೇರೆ ಏನು ಬೇಕಾದರೂ.”

“ಮೊದಲು ಅಡಿಗೆ ಮನೆಗೆ ಹೋಗುತ್ತೇನೆ. ಆದರೆ ಆಮೇಲೆ ಏನೂ ಗಲಾಟೆ ಹತ್ತಲಾರದು ತಾನೆ?”

“ಏನೂ ಆಗೋದಿಲ್ಲ ಬಹುಶಃ ಅನ್ನದಾ ಕಕ್ಕಿ ನಿಮ್ಮ ಪರಿಚಯ ಹಾಗೆ ಮಾಡಿಕೊಟ್ಟಿರಬೇಕು. ಅವಳ ಮಾತನ್ನು ಅಮ್ಮ ಮೀರುವುದೇ ಇಲ್ಲ. ಅವಳನ್ನು ಕಂಡರೆ ಅಷ್ಟು ಇಷ್ಟ. “ಮ್ಲೇಂಛ” ಎಂಬ ನಿಮ್ಮ ಮೇಲಿನ ಅಪವಾದ ತಪ್ಪಿತು ಅಂತ ಕಾಣುತ್ತೆ.” ಅಂದ ದ್ವಿಜದಾಸ್.

ವಂದನ ಸ್ವಲ್ಪ ಹೊತ್ತು ಮೌನವಾಗಿದ್ದು ಅನಂತರ “ಬಹಳ ಆಶ್ಚರ್ಯ” ಅಂದು.

ದ್ವಿಜದಾಸನು ಅದನ್ನು ಒಪ್ಪುತ್ತ “ನಿಜ ಈ ಮಧ್ಯೆ ನೀವೇನು ಮಾಡಿದಿರಿ, ಅನ್ನದಾ ಕಕ್ಕಿ ಅಮ್ಮನ ಮುಂದೆ ನಿಮ್ಮ ವಿಷಯವಾಗಿ ಏನು

ಹೇಳಿದಳೋ ಅದೊಂದೂ ನನಗೆ ಗೊತ್ತಿಲ್ಲ; ಆದರೂ ನಿಮಗಿಂತ ಹೆಚ್ಚು ಆಶ್ಚರ್ಯ ನನಗಾಗಿದೆ. ಹೋಗಲಿ ಈಗ ಹೊತ್ತುಮಾಡಬೇಡಿ. ಹೋಗಿ ಊಟ ತಿಂಡಿ ಏರ್ಪಾಟುಮಾಡಿ; ಮತ್ತೆ ಸೇರೋಣ." ಎಂದು ಹೇಳಿದನು. ಅನಂತರ ಇಬ್ಬರೂ ದಯಾಮಯಿಯ ಕೋಣೆಯನ್ನು ಬಿಟ್ಟು ಹೊರಟು ಹೋದರು.

೧೨

ಕೈಲಾಸ ಯಾತ್ರೆಗೆ ಹೋಗುವ ಮಾರ್ಗ ಬಹಳ ದುರ್ಗಮವೆಂದು ಕೇಳಿ ದಯಾಮಯಿಯ ಸೋದರತ್ತೆಯರು ಹಿಂದೇಟು ಹೊಡೆದರು. ಸ್ವತಃ ದಯಾಮಯಿಗೂ ಕೂಡ ಅಷ್ಟು ಉತ್ಸಾಹವಿರಲಿಲ್ಲ. ಇವತ್ತು ದಕ್ಷಿಣೇಶ್ವರ, ನಾಳೆ ಕಾಲಿಘಾಟ್, ನಾಳಿದ್ದು ಗಂಗಾಸ್ನಾನ ಮುಂತಾಗಿ ಕಲ್ಕತ್ತೆಯಲ್ಲೇ ಐದಾರು ದಿನಗಳಾದವು. ಕೆಲಸಮಾಡುವವರ ಮೇಲೆ ಕೆಲಸ ಬೀಳುವುದು ಸಹಜ; ಈ ಮನೆಯ ಎಲ್ಲಾ ಜವಾಬ್ದಾರಿಯೂ ವಂದನಳ ಮೇಲೆ ಬದ್ದಿದೆ. ಸತಿ ಏನೊಂದು ಕೆಲಸವನ್ನೂ ಮಾಡುತ್ತಿರಲಿಲ್ಲ; ಎಲ್ಲ ಕೆಲಸಕ್ಕೂ ವಂದನಳನ್ನು ಮುಂದೊಡ್ಡಿ ತಾನು ಹಿಂದೆ ಉಳಿದುಕೊಳ್ಳುತ್ತಾಳೆ. ಅಷ್ಟೇ ಅಲ್ಲ ಅತ್ತೆಯ ಸಂಗಡ ಇಲ್ಲಿ ಅಲ್ಲಿ ತಿರುಗಾಡುವುದರಲ್ಲಿ ಕಾಲ ಕಳೆಯುತ್ತಾಳೆ. ಯಾವಾಗಲಾದರೂ ಹೊರಕ್ಕೆ ಹೊರಡುವುದಾದರೆ "ಬಾರಮ್ಮ ವಂದನ, ನೀನು ಜೊತೆಯಲ್ಲಿದ್ದರೆ ಯಾರನ್ನೂ ಏನೂ ಕೇಳಬೇಕಾಗುವುದಿಲ್ಲ" ಎಂದು ಸತಿ ಕರೆಯುತ್ತಿದ್ದಳು.

ಆ ಕೆಲಸ ಈ ಕೆಲಸ ಅಂತ ಒಟ್ಟಿನಲ್ಲಿ ವಿಪ್ರದಾಸನಿಗೆ ಮನೆಗೆ ಹೋಗುವುದಕ್ಕೆ ಆಗುತ್ತಿಲ್ಲ. ಇದಲ್ಲದೆ ವಿಪಿನ್ ಹೊರಟುಹೋದರೆ ನನ್ನನ್ನು ಮನೆಗೆ ಕರೆದುಕೊಂಡು ಹೋಗುವರು ಯಾರು ಎಂದು ಅಮ್ಮ ಬೇರೆ ಅನ್ನುತ್ತಿರುತ್ತಾಳೆ. ಒಟ್ಟಿನಲ್ಲಿ ಅವನು ಕಲ್ಕತ್ತಾದಲ್ಲಿಯೆ ಇದ್ದಾನೆ. ಒಂದು ದಿನ ಸಂಜೆ 'ವಿಕ್ಟೋರಿಯ ಮೆಮೋರಿಯಲ್' ನೋಡುವುದಕ್ಕೆ ಹೋಗಿದ್ದ ಅವನ ಅಮ್ಮ ಹಿಂತಿರುಗಿ ಬಂದು ಬಹಳ ಉದ್ವೇಗದಿಂದ "ವಿಪಿನ್ ನೀನು ಏನು ಬೇಕಾದರೂ ಹೇಳು. ಓದಿ ಬರೆದು ಮಾಡಿರೋ ಹುಡುಗಿಯರ ನಡೆ ನುಡಿಯೇ ಬೇರೆ" ಎಂದು ಹೇಳಿದಳು.

ವಿಪ್ರದಾಸನು ಇದು ವಂದನಳ ಸಮಾಚಾರ ಎಂತ ತಿಳಿದು "ಏನಮ್ಮ ಏನಾಯಿತು ?" ಎಂದು ಕೇಳಿದ.

ದಯಾಮಯಿ—ಏನಾಯಿತೆ ? ಇವತ್ತು ಒಬ್ಬ ಕೆಂಪು ಮೂತಿ ಸಾರ್ಜೆಂಟ್ ಬಂದು ನಮ್ಮ ಕಾರ್ ನಿಲ್ಲಿಸಿದ. ನಮ್ಮ ಅದೃಷ್ಟ ವಂದನ ಜೊತೆಯಲ್ಲಿದ್ದದ್ದು. ಏನೇನೋ ಇಂಗ್ಲೀಷ್‌ನಲ್ಲಿ ಒಂದೆರಡು ಮಾತು ಹೇಳಿದಳು, ಅವನು ಕಾರು ಬಿಟ್ಟು ಹೊರಟುಹೋದ. ಇಲ್ಲದಿದ್ದರೆ ಏನಾಗಿರಬೇಕಿತ್ತು ಹೇಳು ನಮ್ಮ ಗತಿ. ನಮ್ಮನ್ನೇನು ಸುಲಭ ಸಾಧ್ಯಕ್ಕೆ ಬಿಡುತ್ತಿರಲಿಲ್ಲ; ಪೋಲೀಸ್ ಠಾಣೆ ತನಕ ಎಳೆದುಕೊಂಡು ಹೋಗುತ್ತಿದ್ದ. ಏನು ಅವಸ್ಥೆ ಆಗುತ್ತಿತ್ತು! ನಿನ್ನ ಆ ಹೊಸ ಪಂಜಾಬಿ ಡ್ರೈವರೋ ಶುದ್ಧ ಕತ್ತೆ.

ವಿಪ್ರದಾಸನು ನಕ್ಕು "ನೀವೇನು ಮಾಡಿದಿರಿ—ಕಾರು ಯಾರಿಗಾದರೂ ಢಿಕ್ಕಿ ಹೊಡೆಯಿತೆ ?" ಎಂದು ಕೇಳಿದನು.

ವಂದನ ಬಂದು ನಿಂತಳು. ದಯಾಮಯಿ ತಲೆ ಅಲ್ಲಾಡಿಸಿ ಅವನ ಮಾತನ್ನು ಅನುಮೋದಿಸುತ್ತ ದೀರ್ಘೋಚ್ಛ್ವಾಸವನ್ನು ಬಿಟ್ಟು "ನಿನ್ನ ಮಾತೇ ಈಗ ವಿಪಿನ್ ಹತ್ತಿರ ಹೇಳುತ್ತಿದ್ದೆ—ಓದಿ ಬರೆದು ಮಾಡಿರೋ ಹುಡುಗಿಯರ ನಡೆ ನುಡಿಯೇ ಬೇರೆ ಅಂತ—ನೀನು ಜೊತೆಯಲ್ಲಿಲ್ಲದಿದ್ದರೆ ಇವತ್ತು ನಾವೆಲ್ಲ ಎಂಥ ಕಷ್ಟದಲ್ಲಿ ಸಿಕ್ಕಿ ಬೀಳುತ್ತಿದ್ದೆವು ಹೇಳು? ತಪ್ಪು ಆ ಲೇಡಿಯದೆ—ಕಾರು ನಡೆಸಲು ಬರದಿದ್ದರೂ ನಡೆಸಲು ಹೋಗುತ್ತಾಳೆ. ಗೊತ್ತಿಲ್ಲ ಗುರಿಯಿಲ್ಲ. ಆದರೂ ಅವಳ ದೊಡ್ಡಸ್ತಿಕೆ ನೋಡು" ಎಂದಳು.

ವಿಪ್ರದಾಸನು ನಗುತ್ತ "ನಿಜ ಅಮ್ಮ ಓದು ಬರಹ ಕಲಿತ ಹುಡುಗಿಯರು ಹೀಗೇನೆ ಮಾಡೋದು. ಆ ಲೇಡಿ ನಿಜವಾಗಿಯೂ ಓದು-ಬರಹ ಬಲ್ಲವಳಿರಬೇಕು" ಎಂದ.

ಅವನ ತಾಯಿ ಹಾಗೂ ವಂದನ ಇಬ್ಬರೂ ನಕ್ಕರು.

ವಂದನ ಹೇಳಿದಳು—"ಮುಖರ್ಜಿಯವರೆ, ಅದು ಆ ಲೇಡಿಯ ತಪ್ಪೇ ಹೊರತು ಓದು ಬರಹದ್ದಲ್ಲ. ಅಮ್ಮ, ನಾನು ಒಂದು ಸಲ ಅಡಿಗೆ ಮನೆಗೆ ಹೋಗಿ ನೋಡಿಕೊಂಡು ಬರುತ್ತೇನೆ. ನಿನ್ನೆ ದ್ವಿಜೂ ಬಾಬುಗೆ ಅಂತ ದಪ್ಪ ಹಿಟ್ಟಿನ ರೊಟ್ಟಿ ಮಾಡಲಿಕ್ಕೆ ಹೇಳಿದರೆ ಸ್ವಲ್ಪ ಗರಿಗರಿ ಮಾಡಿ

ಬಿಟ್ಟಿದ್ದ. ಅವರು ಸರಿಯಾಗಿ ಊಟ ಸಹ ಮಾಡಲಿಲ್ಲ" ಎಂತ ಹೇಳಿ ಹೊರಟು ಹೋದಳು.

ದಯಾಮಯಿ ವಂದನಳನ್ನು ಸ್ನೇಹದೃಷ್ಟಿಯಿಂದ ಕ್ಷಣಕಾಲ ನೋಡುತ್ತ, ನಿಂತಿದ್ದು ಪುನಃ ಹೇಳಿದಳು—ನಾಲ್ಕೂ ಕಡೆ ಗಮನ ಇರುತ್ತೆ ವಿಪಿನ್ ಈ ಹುಡುಗಿಗೆ. ಓದು ಬರಹ ಮಾತ್ರ ಅಲ್ಲ; ಇವಳಿಗೆ ಗೊತ್ತಿಲ್ಲದ ಕೆಲಸಾನೆ ಇಲ್ಲ. ಮಾತೂ ಅಷ್ಟೆ, ಅಷ್ಟೇ ಚೆನ್ನಾಗಿ ಆಡುತ್ತಾಳೆ. ಏನು ಕೆಲಸ ಬೇಕಾದರೂ ಒಪ್ಪಿಸಿ ನಿಶ್ಚಿಂತೆಯಿಂದ ಇರಬಹುದು. ಆಮೇಲೆ ಮನೆ ಗಿನೆ ಅಂತ ಏನೂ ಯೋಚಿಸಬೇಕಾದ್ದಿಲ್ಲ.

ವಿಪ್ರದಾಸ್—"ಮ್ಲೇಚ್ಛರ ಹುಡುಗಿ ಅಂತ ನಿನಗೆ ಈಗ ಜಿಗುಪ್ಸೆ ಏನು ಇಲ್ಲ ತಾನೆ?"

ದಯಾಮಯಿ—ನಿನಗೆ ಅದೊಂದೇ ಮಾತು! ಮ್ಲೇಂಛರ ಹುಡುಗಿ ಹೇಗೆ ಹೇಳು—ಒಂದು ಸಲ ಅವಳ ಅಮ್ಮಾ ವಿಲಾಯಿತಿಗೆ ಹೋಗಿದ್ದಳು. ಅದಕ್ಕೆ ಜನಗಳೆಲ್ಲ ಅವಳನ್ನು ಲೇಡಿ ಲೇಡಿ ಎಂದು ಅಪವಾದ ಹೊರಸಿದ್ದರು. ಇಲ್ಲದಿದ್ದರೆ ನಮ್ಮಂತೆ ಅವಳೂ ಬಂಗಾಲಿ ಹುಡುಗಿ. ವಂದನ ಬೂಟ್ಸು ಹಾಕುತ್ತಾಳೆ—ಹಾಕಲಿ ಬಿಡು. ಬೇರೆ ದೇಶದ ಹೆಂಗಸರೆಲ್ಲ ಹಾಕಿಕೊಳ್ಳುತ್ತಾರಂತೆ. ಜನಗಳ ಮುಂದೆ ಬರುತ್ತಾಳೆ ಅಂತ—ಇದರಲ್ಲಿ ತಪ್ಪೇನಿದೆ. ಬೊಂಬಾಯಲ್ಲಿ ಯಾರೂ ಪರದೆಯಲ್ಲಿರುವುದಿಲ್ಲವಂತೆ—ಲೋಕಾಚಾರ. ಆದ್ದರಿಂದ ಚಿಕ್ಕಂದಿನಿಂದ ಏನು ಕಲಿತಳೊ ಅದು ಬಂದಿದೆ. ನನ್ನ ಸೊಸೆ ಹೇಗೋ ಇವಳೂ ಹಾಗೆಯೇ? ಅಪ್ಪನ ಜೊತೆಯಲ್ಲಿ ಊರಿಗೆ ಹೋಗುತ್ತಾಳಂತೆ. ಅದನ್ನು ಕೇಳಿದಾಗಿನಿಂದ ಮನಸ್ಸು ಹೇಗ್ಹೇಗೊ ಆಗಿದೆ."

ವಿಪ್ರದಾಸ್—ಹೇಗ್ಹೇಗೊ ಅನ್ನಿಸುತ್ತೆ ಅಂದರೆ ಕೆಲಸ ನಡಿಯುವುದು ಹೇಗೆ ಹೇಳು. ವಂದನ ಇರಲಿಕ್ಕೇನೂ ಬಂದಿಲ್ಲ. ಇಂದಲ್ಲ ಇನ್ನು ನಾಲ್ಕು ದಿನಕ್ಕಾದರೂ ಅವಳು ಹೋಗಲೇಬೇಕೋ.."

ದಯಾಮಯಿ—"ಹೋಗುತ್ತಾಳೆ. ನಿಜ ಆದರೆ ಅವಳನ್ನು ಬಿಟ್ಟಿರುವುದಕ್ಕೆ ಮನಸ್ಸಿಲ್ಲ. ಅವಳನ್ನು ಯಾವಾಗಲೂ ಇಲ್ಲೇ ಹಿಡಿದು ಇಟ್ಟುಕೊಳ್ಳಲೋ ಅನ್ನಿಸುತ್ತದೆ."

ವಿಪ್ರದಾಸನು ಕ್ಷಣಕಾಲ ಸುಮ್ಮನಿದ್ದು ಹೇಳಿದ—"ಅಂದೆಂದಿಗೂ ಸಾಧ್ಯವಿಲ್ಲದ ಮಾತು—ಬೇರೆ ಮನೆ ಹುಡುಗಿಯನ್ನು ಇಷ್ಟು ಹಚ್ಚಿ ಕೊಳ್ಳಬಾರದು. ನಾಲ್ಕಾರು ದಿನಕ್ಕೆ ಬಂದಿದ್ದಾಳೆ—ಹೊರಟುಹೋಗು ತ್ತಾಳೆ—ಅದೇ ಒಳ್ಳೆಯದು." ಇಷ್ಟು ಹೇಳಿ ಅನ್ಯ ಮನಸ್ಕನಂತೆ ಹೊರಕ್ಕೆ ಹೊರಟು ಹೋದನು.

ಈ ಮಾತುಗಳು ದಯಾಮಾಯಿಗೆ ಸರಿ ತೋರಲಿಲ್ಲ. ಆದರೆ ಅದು ಕ್ಷಣಿಕ. ಬಲರಾಮ ಪುರಕ್ಕೆ ಹಿಂದಿರುಗುವ ಮಾತನ್ನು ಒಬ್ಬರೂ ಎತ್ತು ತ್ತಿಲ್ಲ; ಮನೆಯಲ್ಲಿ ದಿನಬೆಳಗಾದರೆ ಉತ್ಸವದಂತೆ ಇರುತ್ತದೆ. ಹಾಸ್ಯ—ಕುಚೋದ್ಯ, ಆಟ, ಊಟ, ಹರಟೆ, ಅಲ್ಲಿ ಇಲ್ಲಿ ಸುತ್ತಾಡುವುದು ಮುಂತಾ ದುವುಗಳಲ್ಲಿ ದಯಾಮಯಿ ಎಂದೂ ಇಷ್ಟು ಸರಸವಾಗಿರುವುದನ್ನು ಯಾರೂ ನೋಡಿರಲಿಲ್ಲ. ಅವಳ ಮನಸ್ಸಿನಲ್ಲಿ ಏನೋ ಒಂದು ಬಗೆಯ ಆನಂದದ ರಸ ಸ್ರೋತವು ಹರಿಯುತ್ತಿರಬೇಕು—ಅದು ಅವಳ ವಯೋಧರ್ಮಕ್ಕನು ಗುಣವಾದ ಗಾಂಭೀರ್ಯವನ್ನು ಕೊಚ್ಚಿಕೊಂಡು ಹೋಗಲು ಯತ್ನಿಸು ವಂತಿದೆ. ಸತಿಯ ಸಂಗಡ ಸನ್ನೆ ಸಂಕೇತಗಳಿಂದ ಆಡುತ್ತಿದ್ದ ದಯಾ ಮಯಿಯ ಮಾತುಗಳು ಅತ್ತೆ ಸೊಸೆ ಇಬ್ಬರಿಗೆ ಮಾತ್ರ ಗೊತ್ತಾಗು ತ್ತಿತ್ತು—ಬಹುಶಃ ಅನ್ನದ ಸ್ವಲ್ಪ ತಿಳಿದುಕೊಳ್ಳುತ್ತಿದ್ದಳೋ ಏನೋ. ಬ್ಯಾರಿಸ್ಟರ್ ದಂಪತಿಗಳು ಇಷ್ಟು ದಿನ ಇದ್ದು ನಿನ್ನೆ ತಾನೆ ತಮ್ಮ ಊರಿಗೆ ಹೊರಟುಹೋದರು. ಅವರಿಬ್ಬರ ಹೆಸರೂ 'ವಸಂತ' ಎಂತ. ಅದನ್ನೆ ಹಿಡಿದು ದಯಾಮಯಿ ಅವರು ಹೊರಟು ಹೋಗುವಾಗ ಸಹ ಹಾಸ್ಯ ಮಾಡಿದಳು; ಇದಲ್ಲದೆ ಪಂಜಾಬಿಗೆ ಹೊರಡುವುದಕ್ಕೆ ಮುಂಚೆ ಕಲ್ಕತ್ತೆ ಯಲ್ಲೋ, ಬಲರಾಮಪುರದಲ್ಲೋ ಎಲ್ಲೋ ಇರಲಿ ಒಂದು ಸಲ ಬಂದು ಹೋಗಬೇಕೆಂದು ಮಾತುತೆಗೆದುಕೊಂಡಿದ್ದಳು. ರಾವ್‌ಸಾಹೇಬರ ಕಾಲು ಗುಣವಾಗಿದೆ. ಮುಂದಿನ ವಾರ ಅವರು ಬೊಂಬಾಯಿಗೆ ಹೊರಡುತ್ತಾರೆ. ಈ ಮಧ್ಯೆ ಒಂದು ದಿನ ಎಲ್ಲರೂ ನೆರೆದಾಗ ದಯಾಮಯಿ ಸ್ವತಃ ಹೋಗಿ ಇನ್ನು ಕೆಲವು ದಿನಗಳವರೆಗೆ ವಂದನಳನ್ನು ಅಲ್ಲಿಯೇ ಇಟ್ಟುಕೊಳ್ಳಲು ಅನುಮತಿಯನ್ನು ಪಡೆದಿದ್ದಾಳೆ. ಅಂದರೆ ವಂದನ ಸಧ್ಯಕ್ಕೆ ಬೊಂಬಾಯಿಗೆ ಹೋಗದೆ ಬಲರಾಮಪುರದಲ್ಲಿ ಸತಿಯ ಸಂಗಡ ಇನ್ನೂ ಒಂದು ತಿಂಗಳಾ

ದರೂ ಇರುವಳೆಂದು ನಿಶ್ಚಿತವಾಗಿದೆ.

ಮುಖರ್ಜಿಯವರ ಕೇಸುಗಳು ಹೈಕೋರ್ಟಿನಲ್ಲಿ ಇದ್ದೇ ಇರುತ್ತೆ. ಒಂದು ದೊಡ್ಡ ಕೇಸಿನ ಹಿಯರಿಂಗು ಸಮೀಪಿಸಿತು. ಆದುದರಿಂದ ಅಲ್ಲಿಯ ವರೆಗೆ ಇಲ್ಲೇ ಇದ್ದು, ಅನಂತರ ಎಲ್ಲರನ್ನೂ ಕರೆದುಕೊಂಡು ಬಲರಾಮ ಪುರಕ್ಕೆ ಹೋದರಾಯಿತು ಎಂದು ವಿಪ್ರದಾಸನು ನಿರ್ಧರಿಸಿದ್ದನು. ಕಾರ್ಯಭಾರ ನಿಮಿತ್ತ ವಿಪ್ರದಾಸನು ಯಾವಾಗಲೂ ಮನೆಯೇ ಸೇರು ವಂತಿಲ್ಲ. ಈ ದಿನ ಭಾನುವಾರವಾದುದರಿಂದ ಮನೆ ಬಿಟ್ಟಿರಲಿಲ್ಲ. ದಯಾಮಯಿ ಬಂದು ನಗುತ್ತ ನಗುತ್ತ " ವಿಪಿನ್ ಇವತ್ತು ಒಂದು ತಮಾಷೆ ನಡೀತು ಗೊತ್ತೇ ? '' ಎಂದು ಕೇಳಿದಳು.

ವಿಪ್ರದಾಸ್ ಕೋರ್ಟಿನ ಕಾಗದ ಪತ್ರಗಳನ್ನು ನೋಡುತ್ತಿದ್ದವನು ಕುರ್ಚಿಯಿಂದ ಎದ್ದು " ಏನಮ್ಮ ಅಂಥಾದ್ದು " ಎಂದು ಕೇಳಿದನು.

ದಯಾಮಯಿ—ದ್ವಿಜೂದು ಇವತ್ತು ಏನೋ ಒಂದು ಜಗಳದ ಮೀಟಿಂಗ್ ಇತ್ತು. ಪೋಲೀಸರು ಅದನ್ನು ತಡೆಗಟ್ಟಬೇಕು ಅಂತ ಇದ್ದರು. ಇವರು ಆದನ್ನು ಮಾಡಿಯೇ ತೀರುವೆವೆಂದು ನಿಶ್ಚಯಿಸಿದ್ದರು. ಹೊಡೆದಾಟ ಕೂಡ ಆಗುವುದರಲ್ಲಿತ್ತು. ಎಷ್ಟು ಜನರ ತಲೆ ಒಡೀಬೇಕಾ ಗಿತ್ತೊ, ಏನೋ, ನಾನಂತು ಹೆದರಿ........"

" ಏನು ದ್ವಿಜು ಹೋಗಿದ್ದಾನೇನು ? "

" ಇಲ್ಲ. ಆದನ್ನೇ ಹೇಳೋದಕ್ಕೆ ನಿನ್ನ ಹತ್ತಿರ ಬಂದದ್ದು. ಯಾರು ಬೇಡ ಎಂದರೂ ಕೇಳುತ್ತಿರಲಿಲ್ಲ. ಅವನ ಅತ್ತಿಗೆ ಕೂಡ ಬೇಡ ಅಂದಳು. ಅವನು ಕೇಳಿದ್ದರೆ ! ಕಡೆಗೆ ವಂದನ ಹೇಳಿದ ಕೂಡಲೆ ಒಪ್ಪಿ ಸುಮ್ಮನಾದ."

ಇದರಲ್ಲಿ ಏನೇ ತಮಾಷೆ ಇರಲಿ, ಇದು ತಾಯಿಯ ಚಿರಪರಿಚಿತ ಗೌರವಕ್ಕೆ ಧಕ್ಕೆ ತಗಲುವಂತೆ ಮಾಡಿದ್ದಿತು. ವಿಪ್ರದಾಸನು ಮನಸ್ಸಿ ನಲ್ಲಿ ಆಶ್ಚರ್ಯಗೊಂಡರೂ " ಏನು ಇದು ನಿಜವೆ ?" ಎಂದು ಮಾತ್ರ ಕೇಳಿದನು. ದಯಾಮಯಿ ನಗುತ್ತ ಜವಾಬು ಕೊಟ್ಟಳು :—" ನೋಡು ವುದಕ್ಕೆ ಹಾಗೆ ತೋರಿತು, ಇವರಿಬ್ಬರೂ ಷರತ್ತು ಮಾಡಿಕೊಂಡಿದ್ದಾರೊ ಏನೊ ಇಲ್ಲಿರುವವರೆಗೆ ಅವಳು ಬೂಡ್ಸು ಹಾಕುವುದಿಲ್ಲವಂತೆ, ನಮ್ಮ ಮನೆಯ ಆಚಾರ ವಿಚಾರಗಳನ್ನು ಉಲ್ಲಂಘಿಸುವುದಿಲ್ಲವಂತೆ, ಇದಕ್ಕೆ

ಬದಲು ಅವನು ಅವಳ ಮಾತಿನಂತೆ ನಡೆಯುತ್ತಾನಂತೆ ; ಮಂದನ ದ್ವಿಜೂ ರೂಮಿಗೆ ಹೋಗಿ " ದ್ವಿಜೂಬಾಬು ಷರತ್ತು ಜ್ಞಾಪಕ ಇದೆ ತಾನೆ? ಇವತ್ತು ನೀವು ಖಂಡಿತ ಹೋಗಕೂಡದು" ಎಂದಳು. ಸರಿ ದ್ವಿಜು ಅದನ್ನು ಒಪ್ಪಿ ಆಗಲಿ, ಹೋಗುವುದಿಲ್ಲ ಎಂತ ಹೇಳಿದ. ಇದನ್ನು ಕೇಳಿ ನನಗೆ ಸ್ವಲ್ಪ ಸಮಾಧಾನವಾಯಿತು. ಏನು ಮಾಡಿಕೊಂಡು ಬರುತ್ತಿದ್ದನೊ, ಯಾವ ಜಗಳದಲ್ಲಿ ಸಿಕ್ಕಿ ಬೀಳುತ್ತಿದ್ದನೊ ಏನೊ........ ನನಗೆ ಅವನದೇ ಸದಾ ಚಿಂತೆ. ''

ವಿಪ್ರದಾಸನು ಮೌನವಾಗಿದ್ದನು. ಅಮ್ಮನೇ ಮಾತನ್ನು ಮುಂದು ವರಿಸಿದಳು. " ಮೊದಲು ಅವನಿಗೆ ಸ್ಕೂಲು ಕಾಲೇಜು ಇತ್ತು ; ಓದಿ ಬರೆದು ಪರೀಕ್ಷೆ ಪಾಸು ಮಾಡಬೇಕಾಗಿತ್ತು ; ಈಗಂತು ಅವನಿಗೆ ಬೇರೆ ಬದುಕೇ ಇಲ್ಲದ ಕಾರಣ ಯಾವಾಗ ಯಾವ ಹೊರಗಿನ ಮಾರಿಯನ್ನು ಒಳಗೆ ಎಳೆದು ತರುತ್ತಾನೋ ಗೊತ್ತಿಲ್ಲ. ಒಟ್ಟಿನಲ್ಲಿ ಇಂಥ ದೊಡ್ಡ ವಂಶಕ್ಕೆ ಎಲ್ಲಿ ಕೆಟ್ಟ ಹೆಸರು ತರುತ್ತಾನೋ ಎಂತ ಹೆದರುತ್ತೇನೆ.'' ವಿಪ್ರ ದಾಸನು ನಕ್ಕು, ತಲೆಯಲ್ಲಾಡಿಸಿ ಇಲ್ಲ " ಅಮ್ಮ ಎಂದಿಗೂ ಇಲ್ಲ. ಏನೂ ಹೆದರ ಬೇಡ. ದ್ವಿಜು ಅಪಕೀರ್ತಿಯನ್ನು ತರುವ ಕೆಲಸ ಎಂದಿಗೂ ಮಾಡಲಾರ '' ಎಂದು ಹೇಳಿದ.

" ಒಂದು ವೇಳೆ ಜೈಲುಗಿಯಿಲು ಆದರೆ! ಆ ಹೆದರಿಕೆ ಇದೆಯೋ ಇಲ್ಲವೋ ಹೇಳು ನೋಡೋಣ ? '' ಎಂದು ತಾಯಿ ಕೇಳಿದಳು.

" ಆ ಹೆದರಿಕೆ ಏನೋ ಇದೆ ನನಗೂ ಗೊತ್ತು. ಆದರೆ ಜೈಲಿಗೆ ಹೋಗುವುದು ಒಂದು ಕಲಂಕವಲ್ಲ. ಕಲಂಕ ಇರುವುದು ಕೆಲಸದಲ್ಲಿ. ಅಂಥ ಕೆಲಸ ಅವನು ಮಾಡುವುದಿಲ್ಲ. ಒಂದು ವೇಳೆ ನನಗೆ ಜೈಲ್ ಆದರೆ—ಆಗಲೂಬಹುದು –ನನಗೋಸ್ಕರ ನೀನು ನಾಚಿಕೆ ಪಟ್ಟುಕೊಳ್ಳು ತ್ತೀಯ–ವಿಪಿನ್ ವಂಶಕ್ಕೆ ಕಳಂಕಪ್ರಾಯ ಎಂದು ಹೇಳುವೆಯಾ ? ''

ಈ ಮಾತುಗಳು ದಯಾಮಯಿಗೆ ಬಾಣದಂತೆ ನಾಟದವು. ಇದರಲ್ಲಿ ಏನಾದರೂ ಸಂಕೇತ ಅಡಗಿದೆಯೇ ? ಯಾರು ತಾನೆ ಬಲ್ಲರು ! ಇವನನ್ನು ಎದೆಗೆ ಅಪ್ಪಿಕೊಂಡು ಇಷ್ಟು ದೊಡ್ಡವನನ್ನಾಗಿ ಮಾಡಿದ್ದಾಳೆ. ಸತ್ಯ ಅಥವ ಧರ್ಮದ ರಕ್ಷಣೆಗೆಂದರೆ ವಿಪ್ರದಾಸನು

ಮಾಡದ ಕೆಲಸವೇ ಇಲ್ಲ. ಇದು ಅವಳಿಗೆ ಗೊತ್ತು. ಅನ್ಯಾಯವನ್ನು ಎದುರಿಸುವಾಗ ಅವನು ಯಾವ ವಿಪತ್ತನ್ನೂ ಲೆಕ್ಕಿಸುವನಲ್ಲ. ಅದರ ಫಲಾಫಲವನ್ನು ಸಹ ನೋಡುವುದಿಲ್ಲ. ಇನ್ನೂ ಹದಿನೆಂಟು ವರ್ಷ ಸಹ ಆಗಿರಲಿಲ್ಲ. ಆಗ ಒಂದು ಮುಸಲ್ಮಾನ್ ಪರಿವಾರದ ಪಕ್ಷವನ್ನು ವಹಿಸಿ ಒಬ್ಬಂಟಿಗನೇ ಹೋರಾಡಿದ್ದ. ಅಂದು ಇವನು ತನ್ನ ಪ್ರಾಣವನ್ನು ಹೇಗೆ ಉಳಿಸಿಕೊಂಡುಬಂದ ಎಂಬುದು ದಯಾಮಯಿಗೆ ಇಂದಿಗೂ ರಹಸ್ಯ ಮಯವಾಗಿದೆ. ಆ ದಿನ ರೈಲಿನಲ್ಲಿ ನಡೆದ ಸಮಾಚಾರವನ್ನು ವಂದನ ಹೇಳಿದಾಗ ಅವಳು ದಂಗುಬಡಿದು ನಿಂತುಕೊಂಡಳು. ಏನೇನೋ ಶಂಕೆ ಅವಳ ಮನಸ್ಸಿನಲ್ಲಿ ಏಳುತ್ತಿತ್ತು. ದ್ವಿಜೂ ವಿಚಾರವಾಗಿ ಅವಳು ಉದ್ವಿಗ್ನಳಾಗಿರುತ್ತಾಳೆ ನಿಜ. ಆದರೆ ಒಳಒಳಗೆ ದೊಡ್ಡ ಮಗನ ವಿಷಯ ದಲ್ಲೇ ಅವಳಿಗೆ ಹೆಚ್ಚು ಭಯ. ಇವನ್ನೆಲ್ಲ ಅವಳು ಮನಸ್ಸಿನಲ್ಲಿ ಯೋಚಿಸುತ್ತಿದ್ದಳು. ಅಷ್ಟರಲ್ಲಿ ವಿಪ್ರದಾಸನು "ಏನಮ್ಮಾ, ಕೆಟ್ಟ ಹೆಸರು ಬರುವುದೆಂಬ ಭಯ ಈಗಲಾದರೂ ದೂರವಾಯಿತೋ ? ಜೈಲು ಎಂದಾದರೂ ನನಗೂ ಆಗಬಹುದು" ಎಂದು ಹೇಳಿದನು.

ದಯಾಮಯಿ ಬಹಳ ವ್ಯಾಕುಲಳಾಗಿ—"ಥೂ ಬಿಡತು ಅನ್ನು. ಇಂಥ ಅವಲಕ್ಷಣದ ಮಾತುಗಳನ್ನು ಆಡಬೇಡ" ಎಂದು ಹೇಳಿ ಮುಂದುವರಿಸಿದಳು—"ನಿನಗೆ ಜೈಲೆ? ಅದೂ ನಾನು ಬದುಕಿರುವಾಗ! ಹಾಗಾದರೆ ಇಷ್ಟು ದಿನದವರೆಗೂ ನಾನು ದೇವರು ದಿಂಡರು ಅಂತ ಪೂಜೆ ಮಾಡಿದ್ದು ವ್ಯರ್ಥವೆ? ಇಷ್ಟು ಆಸ್ತಿ ಇರೋದು ಏತಕ್ಕೆ—ಇಡೀ ಆಸ್ತಿಯೇ ಮಾರಿಹೋದರೂ ಅದಕ್ಕೆ ಮಾತ್ರ ಎಡೆ ಕೊಡುವುದಿಲ್ಲ."

ವಿಪ್ರದಾಸನು ಬಗ್ಗಿ ಅವಳ ಪದರಜವನ್ನು ತೆಗೆದುಕೊಂಡನು.

ದಯಾಮಯಿಯು ಅವನನ್ನು ಅಪ್ಪಿಕೊಳ್ಳುತ್ತ, "ದ್ವಿಜೂನ ಹಣೇಲಿ ಬರದದ್ದು ಆಗಲಿ, ಆದರೆ ನೀನು ನನ್ನ ಕಣ್ಣಿಂದ ಕೊಂಚ ಮರೆಯಾದರೂ ನೋಡು ನಾನು ಗಂಗಾನದಿಯಲ್ಲಿ ಬಿದ್ದು ಸಾಯುತ್ತೇನೆ. ಇದನ್ನು ಮಾತ್ರ ನಾನು ಸಹಿಸಲಾರೆ, ಜ್ಞಾಪಕವಿರಲಿ" ಎಂದು ಹೇಳುತ್ತಿರುವಾಗ ಅವಳ ಕಣ್ಣುಗಳಲ್ಲಿ ಕಣ್ಣೀರು ಉಕ್ಕಿ ಬಂದವು.

"ಅಮ್ಮ, ಈಗ............" ಎನ್ನುತ್ತ ವಂದನ ಅಲ್ಲಿಗೆ ಬಂದಳು.

ದಯಾಮಯಿ ಮಗನನ್ನು ಬಿಟ್ಟು ತನ್ನ ಕಣ್ಣುಗಳನ್ನು ಒರೆಸಿಕೊಂಡಳು. ವಂದನಳ ಆಶ್ಚರ್ಯಚಕಿತ ಮುಖವನ್ನು ನೋಡಿ, ಮತ್ತೆ ಹೇಳಿದಳು "ಮಗನನ್ನು ಅಪ್ಪಿ ಮುದ್ದಾಡಿ ಬಹಳ ದಿನಗಳಾಗಿದ್ದವು. ಆದ್ದರಿಂದ ಸ್ವಲ್ಪ ಎದೆಗೆ ಅಪ್ಪಿಕೊಳ್ಳೋಣ ಅನ್ನಿಸಿತು" ಎಂದು.

ವಂದನ—ಹಾಗಾದರೆ ನಾನು ಎಲ್ಲರ ಮುಂದೂ ಇವರನ್ನು ಮುದಿಗೂಸು ಮುದಿಗೂಸು ಎಂತ ಹೇಳುತ್ತೇನೆ.

ದಯಾಮಯಿ ಪ್ರತಿವಾದಿಸುತ್ತ "ಏನು ಬೇಕಾದರೂ ಹೇಳು; ಆದರೆ ಮುದಿ ಎಂಬ ಶಬ್ದವನ್ನು ಮಾತ್ರ ಹೇಳಬೇಡ. ಅವತ್ತು—ಆಗ ತಾನೆ ನನ್ನ ಮದುವೆ ಆಗಿತ್ತು. ನಾನು ಮನೆ ಅಂಗಳದಲ್ಲಿ ನಿಂತಿದ್ದೆ. ಆಗ ನನ್ನ ಅತ್ತೆ, ಮುದುಕರು, ಇನ್ನು ಬದುಕಿದ್ದರು. ಅವರು ಈ ವಿಪಿನನನ್ನು ನನ್ನ ಮಡಲಿನಲ್ಲಿ ಹಾಕಿ "ನೋಡು ತಾಯಿ, ಇದು ನಿನ್ನ ಹಿರೇಮಗ. ಕೆಲಸ ಕಾರ್ಯದ ಗಲಾಟೆಯಲ್ಲಿ ಇದುವರೆಗೂ ಇವನ ಹೊಟ್ಟೆಗೆ ಏನೂ ಹಾಕಿಲ್ಲ; ಇವನ ಹೊಟ್ಟೆಗೆ ಮೊದಲು ಏನಾದರೂ ಹಾಕು. ಆಮೇಲೆ ಮಿಕ್ಕ ಕೆಲಸ ಎಂತ ಹೇಳಿದರು. ಬಹುಶಃ ಅದು ನನ್ನಿಂದ ಸಾಧ್ಯವೋ ಅಸಾಧ್ಯವೋ ನೋಡಬೇಕೆಂದು ಅವರು ಪರೀಕ್ಷಿಸಬೇಕೆಂದಿದ್ದರೆಂದು ಕಾಣುತ್ತದೆ" ಎಂತ ಹೇಳಿ ನಗಲಾರಂಭಿಸಿದಳು.

ವಂದನ—"ಆಗ ನೀವು ಏನು ಮಾಡಿದಿರಿ?"

ದಯಾಮಯಿ—"ಆಗ ಮುಸುಕಿನಿಂದಲೇ ನೋಡಿದೆ. ಭಂಗಾರದ ಸಜೀವ ಪ್ರತಿಮೆ—ದೊಡ್ಡ ದೊಡ್ಡ ಕಣ್ಣುಗಳಿಂದ ನನ್ನ ಕಡೆ ನೋಡುತ್ತಿದೆ. ನಾನು ಅದನ್ನು ಎದೆಗೆ ಅವಚಿಕೊಂಡು ಅಲ್ಲಿಂದ ಓಡಿದೆ—ಇನ್ನೂ ಏನೇನೋ ಆಚಾರ ಅನುಷ್ಠಾನ ಬಾಕಿ ಇತ್ತು. ಹೇ ಹೇ ಎಂದು ಜನರೆಲ್ಲ ಕೂಗಿಕೊಂಡರು. ಆದರೆ ನಾನು ಮಾತ್ರ ಒಂದನ್ನೂ ಲೆಕ್ಕಿಸಲಿಲ್ಲ..ಅಡಿಗೆಮನೆ ಎಲ್ಲಿದೆ ಬಾಗಿಲು ಎಲ್ಲಿದೆ ಎಂದು ಸಹ ಗೊತ್ತಿರಲಿಲ್ಲ; ನನ್ನ ಜೊತೆಯಲ್ಲಿ ಓಡಿಬಂದ ದಾಸಿ ಮನೆ ತೋರಿಸಿದಳು. ನಾನು ಅವಳಿಗೆ ಹೇಳಿದೆ 'ಹೋಗಿ ನನ್ನ ಕಂದಮ್ಮನ ಹಾಲು ಕುಡಿಯುವ ಒಳಲೆ ತೆಗೆದುಕೊಂಡು ಬಾ ಅವನ ಹೊಟ್ಟೆಗೆ ಹಾಕದೆ ನಾನು ಒಂದು ಹೆಜ್ಜೆಯನ್ನೂ ಇಡುವುದಿಲ್ಲ' ಎಂದು. ಅವತ್ತು ಕೇರಿಯ ಹೆಂಗಸರೆಲ್ಲ ಏನು ನಾಚಿಕೆ ಇಲ್ಲದ ಹೆಣ್ಣು

ಅಂದರು,—ನಾನು ಮಾತ್ರ ಅದೊಂದನ್ನೂ ಕಿವಿಯಮೇಲೆ ಹಾಕಿಕೊಳ್ಳ ಲಿಲ್ಲ. ಬೇಕಾದ್ದು ಅಂದುಕೊಳ್ಳಲಿ ನನ್ನ ಮಡಿಲಿನಲ್ಲಿ ಬಿದ್ದ ರತ್ನವನ್ನೇನೂ ಯಾರೂ ಕಿತ್ತುಕೊಳ್ಳುವಂತಿಲ್ಲ ನನಗೇನು ಎಂದುಕೊಂಡೆ. ಅದೇ ನನ್ನ ಮಗುವನ್ನು ನೀನು 'ಮುದಿ' ಅನ್ನುತ್ತೀಯಾ ?"

ಮೂವತ್ತು ವರುಷಗಳ ಹಿಂದಿನ ಮಾತನ್ನು ಜ್ಞಾಪಕಕ್ಕೆ ತಂದು ಕೊಂಡ ಅವಳ ದುಃಖಮಿಶ್ರಿತ ಆನಂದದಿಂದ ಕೂಡಿದ ಮುಖ ವಂದನಳಿಗೆ ಬಹಳ ಅಪೂರ್ವವಾಗಿ ತೋರಿತು. ಸಹಜಸ್ನೇಹದ ಗಾಂಭೀರ್ಯ ಇಷ್ಟೆಂಬು ದರ ಅನುಭವ ಅವಳಿಗೆ ಇದುವರೆಗೂ ಲಭಿಸಿರಲಿಲ್ಲ. ಅಭಿಭೂತ ದೃಷ್ಟಿಯಿಂದ ಅವಳನ್ನೇ ನೋಡುತ್ತ ನಿಂತುಬಿಟ್ಟಳು. ಸ್ವಲ್ಪಹೊತ್ತಾದ ಮೇಲೆ ಚೇತರಿಸಿ ಕೊಂಡು ನಗುತ್ತ 'ಅಮ್ಮ, ನಿಮ್ಮ ಇಬ್ಬರು ಮಕ್ಕಳಲ್ಲಿ ನೀವು ಯಾರನ್ನು ಹೆಚ್ಚು ಪ್ರೀತಿಸುತ್ತೀರಿ. ನಿಜ ಹೇಳಿ,' ಎಂದು ಕೇಳಿದಳು.

ಇದನ್ನು ಕೇಳಿ ದಯಾಮಯಿ ನಕ್ಕು "ಅಸಂಭವವಾದದ್ದು ಸಂಭವಿ ಸಿದರೂ ಇಂತಹ ವಿಷಯಗಳನ್ನು ಹೇಳಬಾರದು ಎಂತ ಶಾಸ್ತ್ರ ಇದೆ" ಎಂದಳು.

ವಂದನ ಹೊರಗಿನವಳು, ಈಗತಾನೆ ಅವಳ ಪರಿಚಯವಾಗಿದೆ. ಅವಳ ಮುಂದೆ ಹಿಂದಿನ ಮಾತುಗಳನ್ನೆಲ್ಲ ಬಿಚ್ಚಿ ಹೇಳುವುದು ವಿಪ್ರದಾಸ ನಿಗೆ ಸರಿ ಎಂದು ತೋರಲಿಲ್ಲ. ಆದುದರಿಂದ ಅವನು 'ವಂದನ ಒಂದು ವೇಳೆ ಹೇಳಿದರೂ ಕೂಡ ನಿನಗೆ ಅರ್ಥವಾಗುವುದಿಲ್ಲ. ನಿನ್ನ ಕಾಲೇಜಿನ ಇಂಗ್ಲೀಷ್ ಪುಸ್ತಕದಲ್ಲಿ ಈ ವಿಚಾರವೆಲ್ಲ ಇರುವುದಿಲ್ಲ—ಅವುಗಳ ಜೊತೆ ಯಲ್ಲಿ ನೀನು ಇವನ್ನು ಹೋಲಿಸಿ ನೋಡಿದರೆ ಅಮ್ಮನ ಈ ಮಾತುಗಳು ನಿನಗೆ ಬಹಳ ಅದ್ಭುತವಾಗಿ ತೋರುವುದು. ಆದುದರಿಂದ ಈ ವಿಚಾರ ವನ್ನು ಇಲ್ಲಿಗೆ ಬಿಡು' ಎಂದು ಹೇಳಿದನು.

ಇದನ್ನು ಕೇಳಿ ವಂದನ ಸಂತೋಷಪಡಲಿಲ್ಲ. "ಇಂಗ್ಲೀಷ್ ಪುಸ್ತಕಗಳನ್ನು ನೀವೂ ಓದಿಲ್ಲವೆ? ಆದರೂ ನೀವು ಹೇಗೆ ತಿಳಿದು ಕೊಳ್ಳುತ್ತೀರಿ" ಎಂದು ವಾದಿಸಿದಳು. ನಾನು ಅಮ್ಮನನ್ನು ಅರ್ಥಮಾಡಿ ಕೊಂಡಿದ್ದೇನೆ ಅಂತ ನಿನಗೆ ಯಾರು ಹೇಳಿದರು ವಂದನ? ನಾನು ಆಕೆ ಯನ್ನು ಅರಿತಿಲ್ಲ. ಈ ವಿಚಾರವೆಲ್ಲ ನಮ್ಮ ಅಮ್ಮನ ಪುಸ್ತಕದಲ್ಲಿ ಮಾತ್ರ

ಇವೆ. ಅದರ ಭಾಷೆಯೇ ಬೇರೆ, ಅಕ್ಷರ ಬೇರೆ, ಅದರ ವ್ಯಾಕರಣವೂ ಬೇರೆ. ಅದನ್ನು ಕೇವಲ ಅಮ್ಮ ಮಾತ್ರ ತಿಳಿಯುಬಲ್ಲಳು; ಮತ್ತೆ ಯಾರಿಗೂ ಅದರ ಅರಿವು ಸಾಧ್ಯವಿಲ್ಲ ಎಂದು ಪ್ರತಿಪಾದಿಸಿದನು. ಅನಂತರ ತಾಯಿಯನ್ನು ಕುರಿತು ‘ ಅಮ್ಮಾ ನೀನು ಏನು ಹೇಳಲು ಬಂದಿದ್ದೆಯೋ ಅದನ್ನು ಹೇಳಲೇ ಇಲ್ಲವಲ್ಲಾ, ಎಂದನು.

ವಿಪ್ರದಾಸನು ಯಾರನ್ನು ಕುರಿತು ಈ ಮಾತು ಹೇಳಿದನೆಂದು ವಂದನ ಅರಿತು “ ಅಮ್ಮಾ ಮಧ್ಯಾಹ್ನಕ್ಕೆ ಏನು ಮಾಡಬೇಕು ಅದನ್ನು ಕೇಳಲು ಬಂದಿದ್ದೆ—ಇನ್ನು ನಾನು ಹೋಗುತ್ತೇನೆ. ನೀವೂ ಬೇಗ ಬನ್ನಿ-ಎಲ್ಲವನ್ನೂ ಮರೆತು ಮಗುವನ್ನು ಎತ್ತಿಕೊಂಡು ಕುಳಿತುಬಿಟ್ಟೀರಾ” ಎಂದು ಹೇಳಿ ವಿಪ್ರದಾಸನ ಕಡೆ ನೋಡುತ್ತ ಹೊರಟುಹೋದಳು.

ಅವಳು ಹೊರಟುಹೋದ ಕೂಡಲೆ ದಯಾಮಯಿಯ ಮುಖದ ಮೇಲೆ ಅದೇ ದುಶ್ಚಿಂತೆಯು ಕಳೆ ಕಾಣಿಸಿಕೊಂಡಿತು. ಕ್ಷಣಕಾಲ ಅಂ ಊಂ ಎಂದು ಸಂದಿಗ್ಧ ಸ್ವರದಲ್ಲಿ “ ವಿಪಿನ್ ನೀನು ಬಹಳ ಧರ್ಮಿಷ್ಠ, ಅಪ್ಪ-ಅಮ್ಮನಿಗೆ ಮೋಸಮಾಡಬಾರದು ಎಂತ ಗೊತ್ತಿದೆಯಲ್ಲ........” ಎಂದು ಹೇಳುತ್ತಿರುವಾಗಲೆ, “ ಅಮ್ಮ ಸಾಕು. ನಿನ್ನ ಈ ಪೀಠಿಕೆ ಏನೂ ಬೇಕಾಗಿಲ್ಲ. ಏನು ಕೇಳಬೇಕು ಅಂತ ಇದ್ದೀಯೆ ಅದನ್ನು ನೇರವಾಗಿ ಕೇಳು '' ಎಂದು ಹೇಳಿದನು.

ದಯಾಮಯಿ :—ಇದ್ದಕ್ಕಿದಂತೆ ಇವತ್ತು ನನಗೂ ಜೈಲು ಆಗ ಬಹುದು ಎಂದು ಏಕೆ ಹೇಳಿದೆ? ಕೈಲಾಸಕ್ಕೆ ಹೋಗಬೇಕೆಂಬ ಸಂಕಲ್ಪ ವನ್ನು ನಾನು ಇನ್ನೂ ಬಿಟ್ಟಿರಲಿಲ್ಲ, ಆದರೆ ಇನ್ನು ಒಂದು ಹೆಜ್ಜೆಯನ್ನು ನಾನು ಇಡಲಾರೆ.”

ವಿಪ್ರದಾಸ್ ನಕ್ಕು ಬಿಟ್ಟು—“ ನಿನ್ನನ್ನು ಕೈಲಾಸಕ್ಕೆ ಕಳುಹಿಸಲು ನಾನೇನೂ ಕಾತುರನಾಗಿಲ್ಲ. ಆ ದೋಷವನ್ನು ನನ್ನ ತಲೆಯ ಮೇಲೆ ಮಾತ್ರ ಹೋರಿಸ ಬೇಡ. ನಾನು ಸುಮ್ಮನೆ ಒಂದು ದೃಷ್ಟಾಂತವನ್ನು ಕೊಟ್ಟೆ. ಜೈಲಿಗೆ ಹೋದ ಮಾತ್ರಕ್ಕೆ ಯಾವ ವಂಶಕ್ಕೂ ಕೆಟ್ಟ ಹೆಸರು ಬರುವುದಿಲ್ಲವೆಂದದ್ದು ದ್ವಿಜನ ಮಾತು ತಿಳಿಸುವುದಕ್ಕೆ ಹೇಳಿದ್ದು ಅಷ್ಟೆ.”

ದಯಾಮಯಿ ತಲೆಯಲ್ಲಾಡಿಸುತ್ತ “ ಈ ಮಾತೆಲ್ಲ ಆಡಿ ನನ್ನನ್ನು

ಮೋಸಗೊಳಿಸಲು ಸಾಧ್ಯವಿಲ್ಲ. ನೀನು ಹಾಳು ಮಾತುಗಳನ್ನು ಆಡುವವ ನಲ್ಲ. ಏನೋ ಒಂದು ಮಾಡಿದ್ದೀಯ ಅಥವ ಮಾಡಬೇಕೆಂದು ಯೋಚಿ ಸುತ್ತಿದ್ದೀಯ. ನನ್ನ ಮುಂದೆ ನೀನು ಮರೆಮಾಚಬೇಡ.'' ಎಂದು ಹೇಳಿದಳು.

"ಅಮ್ಮ, ನಿನ್ನ ಮುಂದೆ ನಾನು ನಿಜವನ್ನೇ ಹೇಳುತ್ತಿದ್ದೇನೆ. ನಾನು ಏನೂ ಮಾಡಿಲ್ಲ–ಮನುಷ್ಯನ ಮನಸ್ಸಿನಲ್ಲಿ ಏನೇನೋ ವಿಚಾರಗಳು ಬರು ತ್ತವೆ–ಹೋಗುತ್ತವೆ. ಅವುಗಳ ನಿರ್ದೇಶ ಇಂಥದೇ ಎಂದು ಹೇಳಲು ಸಾಧ್ಯವೇ ?''

ದಯಾಮಯಿ ಮೊದಲಿನಂತೆ ಪುನಃ ತಲೆ ಅಲ್ಲಾಡಿಸಿ "ಉಹೂಂ–ಇದೂ ಅಲ್ಲ. ಹಾಗಾದರೆ ನಿನ್ನನ್ನು ನೋಡಿದ ಕೂಡಲೆ ಈಗೀಗ ನನ್ನ ಮನಸ್ಸು ಹೀಗೇಕೆ ಆಗುತ್ತಿದೆ ಹೇಳು. ನಿನ್ನನ್ನು ಸಾಕಿ ಸಲಹಿ ದೊಡ್ಡವನನ್ನಾಗಿ ಮಾಡಿದ್ದೇನೆ. ಕಡೆಗೂ ನಾನು ಬದುಕಿರುವಾಗಲೇ ನನಗೆ ದ್ರೋಹ ಮಾಡುತ್ತೀಯಾ ?'' ಎಂದು ಹೇಳುತ್ತಿರಲು ಅವಳಿಗೆ ಕಣ್ಣೀರು ಉಕ್ಕಿ ಬಂದಿತು.

ವಿಪ್ರದಾಸನು ಒಳ್ಳೆಯ ಸಂಕಟದಲ್ಲಿ ಸಿಕ್ಕಿಬಿದ್ದ. "ಅಮ್ಮಾ, ನೀನು ಇಲ್ಲದ ಸಲ್ಲದ ಅಮಂಗಲ ಕಲ್ಪನೆಯಿಂದ ಹೆದರುತ್ತಿದ್ದರೆ ನಾನು ಅದಕ್ಕೆ ಏನು ಪ್ರತೀಕಾರ ಮಾಡಲಿ ? ನಿನ್ನ ಅನುಮತಿ ಇಲ್ಲದೆ ನಾನು ಏನೊಂದು ಕೆಲಸವನ್ನೂ ಮಾಡುವುದಿಲ್ಲವೆಂದು ನಿನಗೆ ಗೊತ್ತಿದೆ" ಎಂದು ಹೇಳಿದನು.

"ನೀನು ಏನೂ ಮಾಡುವುದಿಲ್ಲ, ಸರಿ. ಆದರೆ ನಿನ್ನೆ ದ್ವಿಜೂನ ಕರೆದು ಎಲ್ಲ ಕೆಲಸ ಕಾರ್ಯಗಳನ್ನು ನೀನೆ ನೋಡಿಕೊ ಎಂದು ಏಕೆ ಹೇಳಿದೆ ?" ಎಂದು ದಯಾಮಯಿ ಪ್ರಶ್ನಿಸಿದಳು. ಸ್ವಲ್ಪ ತಡೆದು ರೇಗಿ "ದೊಡ್ಡವನಾದ್ದೆ, ಏನುಮಾಡುತ್ತಿ ! ಇನ್ನು ನನಗೆ ನೀನು ನೆರವಾಗು ವುದು ಇಲ್ಲೇ ಇದೆಯೇ ? ನನಗೆ ಮೋಸ ಮಾಡಬೇಡ ವಿಪಿನ್.—ಏನು ಇನ್ನೊಬ್ಬರ ನೆರವಿಲ್ಲದೆ ನೀನು ನಿನ್ನ ಕಾರ್ಯವನ್ನು ಮಾಡಲಾರೆಯಾ ? ನಿನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ಹೇಳಿಬಿಡು'' ಎಂದು ಹಟ ಹಿಡಿದು ಕೇಳಿದಳು.

ವಿಪ್ರದಾಸನು ಸುಮ್ಮನಾದನು. ಅವನು ಈ ವಿಚಾರವನ್ನು ಕುರಿತು ಪ್ರಸ್ತಾಪಿಸುವುದಕ್ಕಿಂತ ಮುಂಚೆ ದ್ವಿಜದಾಸನ ಭಾವೀ ಜೀವನವನ್ನು ಕುರಿತು ಯೋಚಿಸಲು ಹೇಳುತ್ತಿದ್ದಳು. ಅವನ ಭಾವೀ ಜೀವನದ ವಿಚಾರವಾಗಿ ಅವಳ ಸಂಕೇತ ಮುಂದಿನ ಮಾತುಗಳಿಂದ ಸ್ಪಷ್ಟವಾಯಿತು.

" ನಮ್ಮ ಈ ಮನೆತನದಲ್ಲಿ ಪುಣ್ಯಪುರುಷರು ಬೇಕಾದಷ್ಟು ಜನ ಆಗಿ ಹೋಗಿದ್ದಾರೆ '' ಎಂದು ದಯಾಮಯಿ ಪ್ರಾರಂಭಿಸಿ " ನಮ್ಮ ಮನೆಯಲ್ಲಿ ಯಥೇಚ್ಛವಾಗಿ ಧರ್ಮಕಾರ್ಯಗಳು ಜರುಗಿವೆ. ಇಂತಹ ವಂಶದಲ್ಲಿ ಅನಾಚಾರವನ್ನು ಎಂದಿಗೂ ಸಹಿಸಲಾಗದು. ನಮ್ಮ ಪರಿವಾರವು ಕಟ್ಟು ಕಟ್ಟಲೆಗಳನ್ನು ಅನುಸರಿಸಿ ಜೀವಿಸಿದೆ. ನಾನು ನಿನ್ನ ಮದುವೆ ಮಾಡಿದಾಗ ನಿನಗೆ ಇನ್ನೂ ಹದಿನೇಳು ವರ್ಷ ತುಂಬಿತ್ತು. ನಿನ್ನ ಅನುಮತಿಯನ್ನು ಕೇಳಿ ನಾನುಮಾಡಲಿಲ್ಲ. ನಮಗೆ ಮಾಡಬೇಕು ಅನ್ನಿಸಿತು ಮಾಡಿದೆವು. ಆದರೆ ದ್ವಿಜು ತಾನು ಮದುವೆ ಮಾಡಿಕೊಳ್ಳುವುದಿಲ್ಲವೆಂದು ಹೇಳುತ್ತಾನೆ. ಅವನು ಎಂ. ಎ. ಪಾಸುಮಾಡಿದ್ದಾನೆ. ಒಳ್ಳೆಯದು ಕೆಟ್ಟದು ಎಂಬುದರ ಪರಿಜ್ಞಾನ ಅವನಿಗೆ ಇದೆ ; ಅವನಮೇಲೆ ನಮ್ಮ ಬಲಾತ್ಕಾರ ನಡೆಯುವುದಿಲ್ಲ. ಆದರೆ ಅವನು ಗೃಹಸ್ಥನಾಗದಿದ್ದರೆ ಅವನಲ್ಲಿ ನನಗೆ ಎಳ್ಳಷ್ಟೂ ವಿಶ್ವಾಸವಿಲ್ಲ. ನಮ್ಮ ಮಾವನವರ ಆಸ್ತಿಯಲ್ಲಿ ಒಂದು ಬಿಡಿ ಕಾಸೂ ಅವನು ಮುಟ್ಟುವುದು ಬೇಡ."

" ಮದುವೆ ಮಾಡಿಕೊಳ್ಳುವುದಿಲ್ಲವೆಂದು ದ್ವಿಜು ಯಾವಾಗ ಹೇಳಿದ ? " ವಿಪ್ರದಾಸನು ಕೇಳಿದ.

" ಎಷ್ಟೋ ಸಲ ಹೇಳಿದ್ದಾನೆ. ಮದುವೆ ಮಾಡಿಕೊಳ್ಳುವುದಕ್ಕೆ ಬೇಕಾದಷ್ಟು ಜನ ಇದ್ದಾರೆ–ಅವರು ಮಾಡಿಕೊಳ್ಳಲಿ. ನಾನು ದೇಶದ ಕಾರ್ಯವನ್ನು ಮಾಡಬೇಕು ಎಂದು ಹೇಳುತ್ತಿರುತ್ತಾನೆ.–ನಾನು ಅಲ್ಲಿಇಲ್ಲಿ ಸುತ್ತಾಡಿಕೊಂಡು ಸುಖವಾಗಿ, ಆನಂದದಿಂದ ಇದ್ದೇನೆಂದು ನೀನು ತಿಳಿದಿರಬಹುದು. ನನಗೆ ಸುಖ ಅನ್ನುವುದು ಎಳ್ಳಷ್ಟೂ ಇಲ್ಲ. ಇದರ ಮೇಲೆ ನೀನು ಜೈಲಿನ ದೃಷ್ಟಾಂತ ಬೇರೆ ಕೊಟ್ಟೆ–ನನಗೆ ತಿಳಿಯುವಂತೆ ಹೇಳಲು ಬೇರೆ ಇನ್ನೇನು ಇರಲಿಲ್ಲವೇನು ? ಇದೆಲ್ಲ ನಿನಗೆ ಆಮೇಲೆ ಗೊತ್ತಾಗುತ್ತೆ ವಿಪಿನ್ '' ಎಂದು ದಯಾಮಯಿ ಹೇಳಿದಳು.

ವಿಪ್ರದಾಸ್—“ ಅವನ ಅತ್ತಿಗೆ ಕೈಯಲ್ಲಿ ಹೇಳಿಸು.”

ದಯಾಮಯಿ—“ ಅವಳ ಮಾತು ಸಹ ಅವನಿಗೆ ಲೆಕ್ಕಕ್ಕಿಲ್ಲ.”

ವಿಪ್ರದಾಸ್—“ ಏಕಿಲ್ಲ, ಕೇಳಿಯೇ ಕೇಳುತ್ತಾನೆ. ಸರಿಯಾದ ಹೊತ್ತು ಬರಬೇಕು ಅಷ್ಟೆ.” ಕೊಂಚ ನಕ್ಕು ಪುನಃ ಹೇಳಿದನು.—“ಅಪ್ಪಣೆಯಾದರೆ ನಾನು ಒಬ್ಬ ಸತ್ಕುಲ ಪ್ರಸೂತೆಯನ್ನು ಹುಡುಕುತ್ತೇನೆ.”

ಇಷ್ಟರಲ್ಲಿ ವಂದನ ಕೋಣೆಯೊಳಕ್ಕೆ ಬಂದು ಆಕ್ಷೇಪಿಸುವ ದನಿಯಲ್ಲಿ ‘ ಎಲ್ಲಿ, ಬರಲೇ ಇಲ್ಲವಲ್ಲ ಅಮ್ಮ, ಎಷ್ಟು ಹೊತ್ತು ನಾನು ನಿಮ್ಮ ದಾರಿ ಕಾಯುವುದು ” ಎಂದಳು.

“ ಹೋಗಮ್ಮ, ಈ ಕ್ಷಣ ಬಂದುಬಿಟ್ಟೆ ”

“ ಅಮ್ಮ, ಅಕ್ಷಯಬಾಬುಗಳ ಮಗಳನ್ನು ನೋಡಿದ್ದೀಯಾ ?” ಎಂದು ವಿಪ್ರದಾಸನು ಪ್ರಾರಂಭಿಸಿ, “ ಅವಳು ಈಗ ದೊಡ್ಡವಳಾಗಿದ್ದಾಳೆ. ಅವಳು ರೂಪಿಗೆ ತಕ್ಕಂತೆ ಗುಣವತಿಯೂ ಹೌದು. ಅವರೂ ನಮ್ಮವರೆ, ನೀನೊಪ್ಪಿದರೆ ಹೋಗಿ ಹುಡುಗಿಯನ್ನು ನೋಡಿ ಮಾತನಾಡಿಕೊಂಡು ಬರುತ್ತೇನೆ. ದ್ವಿಜು ಅವಳನ್ನು ಮೆಚ್ಚದೆ ಇರಲಾರನೆಂದು ನನ್ನ ನಂಬಿಕೆ.”

“ ಬೇಡ ಬೇಡ, ಈಗ ಆ ಮಾತಿರಲಿ ” ಎಂದು ಹೇಳುತ್ತ ವಂದನಳ ಮುಖದ ಕಡೆ ನೋಡಿ “ ಸತಿ ಅಪೇಕ್ಷೆ ಏನು ಅಂದರೆ—ಇಲ್ಲ—ಏನೂ ಇಲ್ಲ—ನಾನು ಸೊಸೆಯನ್ನು ಕೇಳಿದಹೊರತು ಏನೂ ಹೇಳಬಾರದು. ಏನೂ ಮಾಡಬೇಕಾದ್ದಿಲ್ಲ ” ಎಂದು ಹೇಳಿ ಮುಗಿಸಿದಳು.

ಅನಂತರ ವಂದನ ಮಾತನಾಡಿದಳು. ಅವಳು ಅವರಿಬ್ಬರನ್ನೂ ನೋಡಿ “ ಏಕೆ ಹೇಗೂ ಅವರು ಕಲ್ಕತ್ತೆಯಲ್ಲಿದ್ದಾರೆ. ನಾವು ಅಕ್ಕನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ನೋಡಿ ಬರೋಣ. ಅದರಿಂದ ಏನು ತೊಂದರೆ ?” ಎಂದು ಕೇಳಿದಳು.

ಇದಕ್ಕೆ ಏನು ಉತ್ತರವನ್ನು ಕೊಡಬೇಕೆಂದು ತೋಚದೆ ದಯಾಮಯಿ ಸಂಕಟದಲ್ಲಿ ಸಿಕ್ಕಿಬಿದ್ದಳು.

ಆಗ ವಿಪ್ರದಾಸನು “ಅಮ್ಮ, ಅಕ್ಷಯ ಬಾಬುಗಳು ಸ್ವಧರ್ಮ ನಿಷ್ಠ ಬ್ರಾಹ್ಮಣರು ; ಪಂಡಿತರು ; ಸಂಸ್ಕೃತ ಅಧ್ಯಾಪಕರು. ಹುಡುಗಿಯನ್ನು

ಸ್ಕೂಲು ಕಾಲೇಜುಗಳಿಗೆ ಕಳುಹಿಸಿಲ್ಲ; ಆದರೆ ಮನೆಯಲ್ಲಿ ಬಹಳ ಮುತುವರ್ಜಿಯಿಂದ ವಿದ್ಯೆಯನ್ನು ಕಲಿಸಿದ್ದಾರೆ. ಒಂದು ದಿನ ಅವರ ಮನೆಗೆ ಊಟಕ್ಕೆ ಹೋಗಿದ್ದೆ. ಅವತ್ತು ಆ ಹುಡುಗಿಯ ಜೊತೆಯಲ್ಲಿ ಬೇಕಾದಷ್ಟು ಮಾತು ಆಡಿದ್ದೇನೆ. ಅಪ್ಪ ಏನೋ ಮನಸ್ಸಿಗೆ ತೋಚಿದಂತೆ ಮೈತ್ರೇಯಿ ಎಂದು ಅವಳಿಗೆ ಹೆಸರಿಟ್ಟರೂ, ಅದು ಅಸಾರ್ಥಕವಾಗ ಲಿಲ್ಲ. ಅಮ್ಮಾ, ಒಂದು ಸಲ ಹೋಗಿ ನೋಡಿ ಬಾ.—ನಿನ್ನ ಸೊಸೆ—ಸತಿಗೆ ತನಗಿಂತ ರೂಪವತಿಯರಾದ ಹುಡುಗಿಯರೂ ಇದ್ದಾರೆಂಬುದು ಮನವರಿಕೆಯಾಗಲಿ" ಎಂದು ಹೇಳಿದನು.

ಅಮ್ಮ ನಗಬೇಕು ಎಂದು ಯತ್ನಿಸಿದರೂ ನಗು ಬರಲಿಲ್ಲ. ಒಂದು ಮಾತು ಸಹ ಹೊರಡಲಿಲ್ಲ. ಆಗ ವಂದನ "ಅಮ್ಮಾ ಹೋಗೋಣ. ಒಂದು ಸಲ ಹೋಗಿ ಮೈತ್ರೇಯಿಯನ್ನು ನೋಡಿ ಬರೋಣ. ಹತ್ತಿರದಲ್ಲೇ ತಾನೇ ಇದೆ ಅವರಮನೆ," ಎಂದು ಅನುರೋಧಿಸಿದಳು.

ದಯಾಮಯಿ ಕೊಂಚ ದೃಷ್ಟಿಸಿ ವಂದನಳ ಮುಖವನ್ನು ನೋಡಿದಳು—ಮೊದಲಿನ ಲಾವಣ್ಯ ಅವಳ ಮುಖದಲ್ಲಿ ಕಾಣಲಿಲ್ಲ—ಏನೋ ಮಬ್ಬು ಅವಳನ್ನು ಮುಸುಕಿದಂತಿತ್ತು. ಇಷ್ಟು ಹೊತ್ತಾದ ಮೇಲೆ ಅವಳಿಗೆ ಒಂದು ಉತ್ತರ ತೋಚಿತು. "ಇಲ್ಲ ಅಮ್ಮ-ದೂರ ಇಲ್ಲ ನನಗೂ ಗೊತ್ತು. ಆದರೆ ನನಗೆ ಅಷ್ಟು ಪುರುಸತ್ತಿಲ್ಲ; ನಡಿ, ಸದ್ಯ ಈ ಹೊತ್ತಿಗೆ ಏನು ಅಡಿಗೆ ಆಗಬೇಕು ನೋಡೋಣ," ಎಂದು ಹೇಳಿ ದಯಾಮಯಿ ವಂದನಳ ಕೈ ಹಿಡಿದು ಎಳೆದುಕೊಂಡು ಕೊಠಡಿಯಿಂದ ಹೊರಕ್ಕೆ ಹೊರಟುಹೋದಳು.

## ೧೩

ವಿಪ್ರದಾಸನು ಸಂಧ್ಯಾವಂದನೆಯನ್ನು ಮುಗಿಸಿಕೊಂಡು ಆಗತಾನೆ ಬಂದು ತನ್ನ ಪುಸ್ತಕಾಲಯದಲ್ಲಿ ಕುಳಿತಿದ್ದ. ಬೆಳಿಗ್ಗೆ ಟಪಾಲಿನಲ್ಲಿ ಬಂದ ಕೋರ್ಟಿನ ಕಾಗದ ಪತ್ರಗಳನ್ನು ನೋಡಬೇಕೆಂದಿದ್ದ. ಅಷ್ಟರಲ್ಲಿ ಅವನ ತಾಯಿ ಬಂದು "ವಿಪಿನ್, ಪ್ರತಿಯೊಂದು ಮಾತನ್ನೂ ಒಂದಕ್ಕೆ ಹತ್ತು ಮಾಡಿ ಹೇಳಲಿಕ್ಕೆ ಮಾತ್ರ ಬರುತ್ತೆ ಅಂತ ಕಾಣುತ್ತೆ" ಅಂದಳು.

ವಿಪ್ರದಾಸನು ಕುರ್ಚಿ ಬಿಟ್ಟು ಎದ್ದು ನಿಂತು " ಯಾವ ಮಾತು ?" ಎಂದು ಕೇಳಿದನು.

" ಅಕ್ಷಯ ಬಾಬುವಿನ ಮಗಳು ಮೈತ್ರೇಯಿಯನ್ನು ನಾವು ನೋಡಿ ಕೊಂಡು ಬಂದೆವು. "

" ಏನು ಹುಡುಗಿ ಚೆನ್ನಾಗಿಲ್ಲವೆ ? "

ದಯಾಮಯಿ ಕೊಂಚ ಹಾಗೆ ಹೀಗೆ ನೋಡಿ " ಇಲ್ಲ. ಹುಡುಗಿ ಚೆನ್ನಾಗಿಲ್ಲ ಎಂತ ನಾನು ಹೇಳುವುದಿಲ್ಲ.—ಸಾಧಾರಣವಾಗಿ ಅಂಥ ಹುಡುಗಿ ಯರು ಅಪೂರ್ವ ಅನ್ನುವುದೇನೋ ಸರಿಯೆ. ಆದರೆ ನೀನು ಏನು ಅಂತ ತಿಳಿದು ಅವಳನ್ನು ನನ್ನ ಸೊಸೆಯ ಜೊತೆಯಲ್ಲಿ ಹೋಲಿಸಿದೆ ? ಹೋಗಲಿ ಹೇಳು ನೋಡೋಣ ರೂಪದಲ್ಲಿ ಅವಳು ವಂದನಳ ಮುಂದೆ ನಿಲ್ಲಬಲ್ಲಳೆ."

ವಿಪ್ರದಾಸನಿಗೆ ಆಶ್ಚರ್ಯವಾಗಿಯಿತು. " ಹಾಗಾದರೆ ನೀವು ಬೇರೆ ಯಾರನ್ನೊ ನೋಡಿ ಬಂದಿರಬೇಕು ; ಅವಳು ಮೈತ್ರೇಯಿ ಯಾಗಿರಲಾರಳು " ಎಂದು ಹೇಳಿದ.

ದಯಾಮಯಿ ನಕ್ಕು ನಾಡಿದಳು—" ಅವಳೇ ಹೌದು. ಅವಳ ಜೊತೆಯಲ್ಲಿ ನಾವು ಎಷ್ಟೊಂದು ಮಾತನಾಡಿದೆವು ! ಅವಳು ಬಹಳ ಮುತ ವರ್ಜಿಯಿಂದ ಸೊಸೆಗೂ ಇತರರಿಗೂ ಊಟ ತಿಂಡಿ ಮಾಡಿಸಿದಳು. ಅದಾದ ಮೇಲೆ ಏನೇನೋ ಪುಸ್ತಕಗಳು, ಓದು-ಬರಹ ಇವುಗಳ ವಿಷಯವಾಗಿ ವಂದನಳ ಜೊತೆಯಲ್ಲಿ ಮಾತುಕತೆ ಆಡಿದಳು—ಇಷ್ಟಾದರೂ ನೀನು ನಾವು ಯಾರನ್ನೋ ನೋಡಿಕೊಂಡು ಬಂದಿರಬೇಕು ಅನ್ನುತ್ತೀಯಲ್ಲ ! "

" ವಂದನ ಹಾಕಿದ ಎಲ್ಲಾ ಪ್ರಶ್ನೆಗೂ ಅವಳು ಉತ್ತರ ಕೊಡ ಲಾಗದೆ ಇರಬಹುದು. ಅಮ್ಮ, ಆದರೆ ನೀನೇ ಯೋಚನೆಮಾಡಿ ನೋಡು, ವಂದನ ಸ್ಕೂಲು ಕಾಲೇಜುಗಳಲ್ಲಿ ವ್ಯಾಸಂಗ ಮಾಡಿರುವುದರಿಂದ ಎಷ್ಟು ಪುಸ್ತಕಗಳನ್ನು ಓದಿದ್ದಾಳೆ ಅಂತ ; ಅದೇ ಮನೆಯಲ್ಲಿ ತಂದೆ ಹೇಳಿ ಕೊಟ್ಟಿರುವುದನ್ನು ಕಲಿತ ಮೈತ್ರೇಯಿ ಎಷ್ಟು ಓದಿರಬಹುದು. ಉದಾ ಹರಣೆಗೆ ನನಗೂ ನಿನ್ನ ಕಿರಿಯ ಮಗನಿಗೂ ಇರುವಷ್ಟು ವ್ಯತ್ಯಾಸ ಇದ್ದಿರ ಬಹುದು ಅಂತ ತಿಳಿದುಕೋ " ಅಂದ ವಿಪ್ರದಾಸ್.

ದಯಾಮಯಿಯ ನೋಟ ಕುತೂಹಲದಿಂದ ಕುಣಿಯುವಂತೆ

ತೋರಿತು. ಅವಳು “ ಸಾಕಪ್ಪ ವಿಪಿನ್ ಸುಮ್ಮನಿರು ; ದ್ವಿಜು ಪಕ್ಕದ ಕೋಣೆಯಲ್ಲೇ ಇದ್ದಾನೆ ; ಎಲ್ಲಿಯಾದರೂ ಕೇಳಿಗೀಳಿದರೆ ನಾಚಿಕೆಪಟ್ಟು ಮನೆಯಿಂದ ಓಡಿ ಹೋಗಿಯಾನು!” ಎಂದು ಹೇಳಿ ಸ್ವಲ್ಪ ಕಾಲ ಸುಮ್ಮನಿದ್ದು ಪುನಃ “ ನಿನ್ನ ಅಮ್ಮ ದಡ್ಡಳು ನಿಜ ಆದರೆ ಕಾಲೇಜು ಪ್ಯಾಸು ಮಾಡಿದ ಮಾತ್ರಕ್ಕೆ ಚತುರ್ವರ್ಗವನ್ನೂ ಗಳಿಸಿದಂತೆ ಆಯಿತೆಂದು ಭಾವಿಸುವಷ್ಟು ದಡ್ಡಳೆ ? ಎಂದಿಗೂ ಅಲ್ಲ. ಮೈತ್ರೇಯಿ ಸಣ್ಣ ಪುಟ್ಟ ಸವಿ ಮಾತುಗಳಿಂದ ಎಷ್ಟು ಚೆನ್ನಾಗಿ ಬಂದವರ ಪ್ರಶ್ನೆಗಳಿಗೆ ಉತ್ತರ ಕೊಟ್ಟಳು ಅಂತ! ನಾವು ಹಿಂತಿರುಗಿ ಬರುವಾಗ ಅವಳ ವಿಚಾರವಾಗಿ ವಂದನ ಎಷ್ಟು ವಿಧವಾಗಿ ಅವಳನ್ನು ಕೊಂಡಾಡಿದಳು. ಆದಾಗ್ಯೂ ನಾನು ಹೇಳೋದಿಷ್ಟು. ಅಂತಹ ಓದು ಬರಹ ಕಲಿತ ಹುಡುಗಿಯರು ಈ ಸಂಪನ್ನರ ವಂಶಕ್ಕೆ ಏಕೆ ಅಂತ ? ನನ್ನ ಹಿರೇ ಸೊಸೆ ಇದ್ದಾಳಲ್ಲ ; ಅಂಥದೆ ಇನ್ನೊಬ್ಬ ಸೊಸೆ ಬಂದರೆ ಸಾಕು. ಓದು ಬರಹ ಬರುತ್ತೆ ಅನ್ನೊ ಹೆಮ್ಮೆಯಿಂದ ಗುರು ಹಿರಿಯರನ್ನು ತುಚ್ಛವಾಗಿ ಕಾಣುವ ಹೆಣ್ಣು ನಮಗೆ ಬೇಕಿಲ್ಲ. ಅದೆಂದಿಗೂ ಆಗದು ಎಂದಳು ” ಸರಿಯಾದ ಉತ್ತರ ಹೊಳೆಯದ ಕಾರಣ ದಯಾಮಯಿ ಬಾಯಿಗೆ ಬಂದ ಉತ್ತರವನ್ನು ಕೊಡುತ್ತಿದ್ದಾಳೆಂದು ತಿಳಿದ ವಿಪ್ರದಾಸನು ನಕ್ಕು “ಅಮ್ಮಾ, ಅದಕ್ಕೆ ಕೊಂಚವೂ ಹೆದರಬೇಡ. ಅಲ್ಪವಿದ್ಯಾ ಮಹಾಗರ್ವಿ, ತುಂಬಿದ ಕೊಡ ತುಳುಕೀತೆ ಅಂತ ಗಾದೆ ಕೇಳಿಲ್ಲವೆ ? ಆದ್ದರಿಂದ ಅವಳು ತನ್ನ ತಂದೆಯಿಂದ ಏನಾದರೂ ಕಲಿತಿದ್ದ ಪಕ್ಷಕ್ಕೆ ಎಲ್ಲರೊಡನೆಯೂ ವಿನಯದಿಂದ ವರ್ತಿಸುವುದನ್ನೂ ಕಲಿತಿರುತ್ತಿದ್ದಳು. ಬೇಕಾದರೆ ಪರೀಕ್ಷೆ ಮಾಡಿ ನೋಡಬೇಕಾದ್ದೇ ” ಅಂದ.

ಇದು ಒಪ್ಪಬೇಕಾದ ಮಾತು. ಆದುದರಿಂದ ದಯಾಮಯಿ “ ನಿಜ ಅಪ್ಪ, ನೀನು ಹೇಳುವುದು, ಆದರೆ ಅದು ಮೊದಲಿಗೇ ಏನು ಗೊತ್ತಾಗುತ್ತದೆ ? ಅದಲ್ಲದೆ ಎಷ್ಟು ಓದಿದಾಳೆ ಎಷ್ಟು ಬಿಟ್ಟಿದಾಳೆ ಅಂತ ನಮ್ಮ ಗ್ರಾಮದಲ್ಲಿ ಯಾರೂ ಪರೀಕ್ಷೆ ಮಾಡಲು ಬರುವುದಿಲ್ಲ. ಆದರೆ ಒಂದು ಮಾತು. ಬಂದ ಜನ ಅವಳನ್ನು ನೋಡಿ ‘ ಹಿರೇ ಸೊಸೆಗೆ ಸಮಾನಳೇ ಈ ಸೊಸೆ; ಎಲ್ಲೊ ಆ ಮುದಿ ಅಮ್ಮನಿಗೆ ಕಣ್ಣಿಲ್ಲ ಅಂತ ಕಾಣುತ್ತೆ ಅಂದರೆ ಮಾತ್ರ,ನನ್ನಿಂದ ಸಹಿಸುವುದಕ್ಕೆ ಆಗುವುದಿಲ್ಲ” ಎಂದಳು.

ವಿಪ್ರದಾಸನು ಕ್ಷಣಕಾಲ ಸ್ತಬ್ಧನಾದನು. ಅನಂತರ " ಹಾಗಾದರೆ ಅಮ್ಮಾ, ಅಕ್ಷಯ ಬಾಬುಗಳಿಗೆ ಏನಾದರೂ ಒಂದು ಜವಾಬು ಕೊಡ ಬೇಕಲ್ಲ. ನಮ್ಮ ಅಮ್ಮ ಒಪ್ಪದೇ ಇರುವುದಿಲ್ಲ ಅಂತ ಆ ದಿನ ಹೇಳಿ ಬಂದಿದ್ದ'' ಅಂದ.

ಇದನ್ನು ಕೇಳಿ ದಯಾಮಯಿ ಉದ್ವಿಗ್ನಳಾಗಿ ಹೇಳಿದಳು :—" ಈ ಮಾತು ಹೇಳಿರದಿದ್ದರೆ ಚೆನ್ನಾಗಿರುತ್ತಿತ್ತು ವಿಪಿನ್. ಏನೇ ಆಗಲಿ, ನನ್ನ ಸೊಸೆಯ ಅಭಿಪ್ರಾಯ ಏನು ಅಂತ ಕೇಳುತ್ತೇನೆ. ಅನಂತರ ಅವರಿಗೆ ಏನಾದರೂ ಒಂದು ಹೇಳಿದರಾಯಿತು."

ವಿಪ್ರದಾಸ್—" ಅಕ್ಷಯಬಾಬುಗಳು ನಮಗೇನೂ ಹೊರಗಿನವ ರಲ್ಲ. ಇಷ್ಟು ದಿನದವರೆಗೆ ಪರಿಚಯವಿರಲಿಲ್ಲ. ಆದುದರಿಂದ ಈ ಮಾತು ಹೊರಬೀಳಲಿಲ್ಲ. ಅವರು ನಮ್ಮವರು ಅನ್ನುವ ಕಾರಣದಿಂದ ಹೇಳು ತ್ತಿಲ್ಲ.—ಆದರೆ ನೋಡು ನೀನು ನನಗೆ ಮದುವೆ ಮಾಡಿದಾಗ ನಿನ್ನ ಇಚ್ಛೆಯಂತೆ ಮಾಡಿದಿಯೋ ಹೊರತು ಯಾರನ್ನೂ ಕೇಳಿ ಮಾಡಲಿಲ್ಲ. ಆದರೆ ಈ ಮದುವೆಗೇಕೆ ಇಷ್ಟು ಜನರ ಒಪ್ಪಿಗೆಯನ್ನು ಪಡೆಯಬೇಕು ಅನ್ನುತ್ತೀಯ ?"

ದಯಾಮಯಿ ತರ್ಕದಲ್ಲಿ ಸೋತು ನಗುತ್ತಾ ಹೇಳಿದಳು —" ಇನ್ನು ಎಷ್ಟುಕಾಲ ಬದುಕಿರುತ್ತೇನೆ ಹೇಳು ? ಅದಲ್ಲದೆ ಇನ್ನೂ ಬದುಕಿರೋತನಕ ಜೊತೆಯಲ್ಲಿ ಕಟ್ಟಿಕೊಂಡು ಹೆಣಗಾಡಬೇಕಾಗಿರುವವಳ ಅನುಮತಿ ತೆಗೆದು ಕೊಳ್ಳದೆ ಹೇಗೆ ಮದುವೆ ಮಾಡುವುದು ? ಬೇಡ ಬೇಡ. ಇನ್ನು ನಾಲ್ಕಾರು ದಿನ ನಾವೂ ಯೋಚಿಸುತ್ತೇವೆ ಅಲ್ಲಿಯವರೆಗೆ ಅವಕಾಶ ಕೊಡು," ಎಂದು ಇಷ್ಟು ಮಾತ್ರ ಹೇಳಿ ಅವಳು ಕೋಣೆಯಿಂದ ಹೊರಕ್ಕೆ ಹೊರಟವಳು ನೆಟ್ಟಗೆ ತನ್ನ ಕೋಣೆಯ ಕಡೆ ಹೋಗದೆ ಬೀಗರ ಕೋಣೆಯ ಕಡೆ ಹೊರಟಳು. ಇಷ್ಟುದಿನ ಜೊತೆಯಲ್ಲಿದ್ದ ಕಾರಣ ಅವ ರೊಡನೆ ಮಾತನಾಡಲು ಅವಳಿಗೆ ಸಂಕೋಚವಿರಲಿಲ್ಲ. ಪ್ರಾಯಶಃ ಅವಳೇ ಬಂದು ಆಗಾಗ್ಗೆ ಅವರ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋಗುತ್ತಿದ್ದಳು. ಸಾಯಂಕಾಲ ಆಗಿತ್ತು ; ಇನ್ನು ಜಪ ತಪ ಪೂಜೆ ಅಂತ ಕುಳಿತರೆ ಬೇಗ ಏಳಲು ಸಾಧ್ಯವಿಲ್ಲ ಎಂದು ಯೋಚಿಸಿ ಅವರ

ಕೋಣೆಯನ್ನು ಸೇರಿ–" ಹೇಗಿದ್ದೀರಿ ಈಗ ? " ಎಂದು ಕೇಳಿದಳು.

ಅವಳ ಮಾತು ಇನ್ನೂ ಮುಗಿದಿರಲಿಲ್ಲ. ಅಷ್ಟರಲ್ಲಿ ಕೋಣೆಯ ಒಂದು ಭಾಗದಲ್ಲಿ ವಂದನ ಒಬ್ಬ ಸುಂದರ ಯುವಕನೊಡನೆ ಮಾತಾಡುತ್ತಾ ಕುಳಿತಿರುವುದನ್ನು ನೋಡಿ, ಆಂಗ್ಲರಂತೆ ಉಡುಪು ಧರಿಸಿದ ಈ ಅಪರಿಚಿತ ಯುವಕನ ಮುಂದೆ ಬಂದುದಕ್ಕಾಗಿ ನಾಚಿ ಹಿಂದಕ್ಕೆ ಸರಿಯಬೇಕೆಂದಿದ್ದಳು. ಇದನ್ನು ಕಂಡ ರಾಯ್ ಮಹಾಶಯರು---" ಏಕೆ ಹಾಗೆ ಓಡಿಹೋಗುತ್ತಿದ್ದೀರಿ; ಬನ್ನಿ ಬನ್ನಿ, ಇವನು ನಮ್ಮ ಸುಧೀರ್, ಇವನ ಮುಂದೆ ಏನು ನಾಚಿಕೆ? ವಿಪ್ರದಾಸ್, ದ್ವಿಜದಾಸರಂತೆ ಇವನೂ ನಿಮ್ಮ ಹುಡುಗ ಅಂತ ಇಟ್ಟುಕೊಳ್ಳಿ. ನಾನು ಕರೆಸಿಕೊಂಡಿದ್ದೇನೆ ಎಂತ ಕೇಳಿ ಮದ್ರಾಸಿನಿಂದ ಹೊರಟುಬಂದಿದ್ದಾನೆ. ಸುಧೀರ್, ಇವರು ವಂದನ ಇದ್ದಾಳಲ್ಲ, ಅವಳ ಅಕ್ಕನ ಅತ್ತೆ, ವಿಪ್ರದಾಸರ ತಾಯಿ, ಇವರಿಗೆ ನಮಸ್ಕರಿಸು " ಎಂದು ಹೇಳಿದರು.

ಸುಧೀರನಿಗೆ ನಮಸ್ಕರಿಸುವ ಅಭ್ಯಾಸವಿದ್ದಿರಲಾರದು. ಅಲ್ಲದೆ ಆ ಪೋಷಾಕಿನಲ್ಲಿ ನಮಸ್ಕರಿಸುವುದೂ ಕಷ್ಟ. ಅವನು ಹತ್ತಿರ ಬಂದು ತಲೆಬಾಗಿ ಹೇಗೋ ಅವರ ಮಾತನ್ನು ಮನ್ನಿಸಿದನು.

ನಿಮ್ಮ ಹುಡುಗ ಅಂತ ತಿಳಿಯಿರಿ ಎಂದು ಹೇಳಿದ ಮಾತನ್ನು ಸಮರ್ಥಿಸುತ್ತ ರಾಯ್ ಮಹಾಶಯರು ಮುಂದುವರಿಸಿದರು—" ಇವನ ತಂದೆ ಹಾಗೂ ನಾನು ಇಬ್ಬರೂ ಒಟ್ಟಿಗೆ ವಿಲಾಯಿತಿಯಲ್ಲಿ ಓದುತ್ತಿದ್ದೆವು. ಆಗಿನಿಂದ ನಮ್ಮಿಬ್ಬರದೂ ಹೆಚ್ಚಿನ ಸ್ನೇಹ ಬೆಳೆದುಬಂದಿದೆ. ಸುಧೀರನೂ ಕೂಡ ವಿಲಾಯಿತಿಯಲ್ಲಿ ವ್ಯಾಸಂಗಮಾಡಿ ಅನೇಕ ಡಿಗ್ರಿಗಳನ್ನು ಹೊಂದಿದ್ದಾನೆ. ಈಗ ಮದ್ರಾಸಿನಲ್ಲಿ ಶಿಕ್ಷಣವಿಭಾಗದ ಉನ್ನತ ಅಧಿಕಾರಿಯಾಗಿದ್ದಾನೆ. ವಂದನಳ ಜೊತೆಯಲ್ಲಿ ಇವನ ಮದುವೆ ಆದಮೇಲೆ ರಜ ತೆಗೆದುಕೊಂಡು ಅವಳೊಡನೆ ವಿಲಾಯಿತಿಗೆ ಹೋಗಬೇಕೆಂದು ಮಾತುಕತೆ ನಡೆದಿದೆ. ಬೇಕೂ ಅಂತ ಕಂಡರೆ ವಂದನ ಅಲ್ಲಿ ಕಾಲೇಜು ಸೇರಬಹುದು, ಇಲ್ಲವೆ ವಿಲಾಯುತಿ ನೋಡಿಕೊಂಡು ಇಬ್ಬರೂ ಒಟ್ಟಿಗೆ ವಾಪಸು ಬರುತ್ತಾರೆ. ಸುಧೀರ್, ಇದೇ ಆಗಸ್ಟ್ ಅಥವಾ ಸೆಪ್ಟಂಬರ್‌ನಲ್ಲಿ ಹೊರಡುವುದಾದರೆ ನಾನೂ ಸಾಧ್ಯವಾದಷ್ಟು ಯತ್ನಿಸಿ ಮೂರುನಾಲ್ಕು ತಿಂಗಳು ರಜ ತೆಗೆದು

ಕೊಂಡು ನಿಮ್ಮ ಸಂಗಡ ಬರುತ್ತೇನೆ. ವಂದನ ನೀನು ಏನು ಹೇಳುತ್ತೀ? ಆಗಬಹುದು ತಾನೆ?"

ವಂದನ ಕುಳಿದಲ್ಲಿಂದಲೇ ಮೆತ್ತಗೆ ಹೇಳಿದಳು—"ಏಕಾಗಬಾರದು? ನೀವು ಜೊತೆಯಲ್ಲಿದ್ದರೆ ಒಳ್ಳೆಯದೇ ಆಯಿತು."

ರಾಯ್‌ಮಹಾಶಯರು ಉತ್ಸಾಹದಿಂದ "ಸರಿ ಸರಿ. ಅದಲ್ಲದೆ ಮದುವೆ ಆದಮೇಲೆ ಕೂಡ ಒಂದು ತಿಂಗಳು ಅವಕಾಶ ಸಿಗುತ್ತದೆ. ಅವಸರ ಪಡಬೇಕಾದ್ದಿರುವುದಿಲ್ಲ. ಗೊತ್ತಾಯಿತಲ್ಲ ಸುಧೀರ್" ಎಂದು ಹೇಳಿದರು.

ಸುಧೀರ್ ಮತ್ತು ವಂದನ ಇಬ್ಬರೂ ತಲೆ ಅಲ್ಲಾಡಿಸುತ್ತ ಇದನ್ನು ಸಮರ್ಥಿಸಿದರು. ಈಗ ದಯಾಮಯಿಗೆ ತಿಳಿಯಿತು ಈ ಹುಡುಗ ರಾಯ್ ಮಹಾಶಯರ ಭಾವೀ ಅಳಿಯ, ಆದ್ದರಿಂದಲೇ ಇವನು ತನಗೆ ಮಗನಂತೆ ಎಂದುದು. ಇದನ್ನು ತಿಳಿದೊಡನೆ ದಯಾಮಯಿಯ ಹೃದಯದಲ್ಲಿ ಏನೋ ಒಂದು ಕಳವಳ ಉಂಟಾಯಿತು. ಎಷ್ಟೇ ಆಗಲಿ ಅವಳು ವಿಪ್ರದಾಸನ ತಾಯಿ ತಾನೆ! ಇದಲ್ಲದೆ ಬಲರಾಮಪುರದ ಪ್ರತಿಷ್ಠರಾದ ಮುಖರ್ಜಿ ಪರಿವಾರದ ಯಜಮಾನಿ. ಆದ್ದರಿಂದ ಅವಳು ಬೇಗನೆ ಚೇತರಿಸಿಕೊಂಡು "ಸುಧೀರ್, ನಿಮ್ಮ ಊರು ಯಾವುದು?" ಎಂದು ಅವನನ್ನು ಕೇಳಿದಳು.

"ಈಗಿರುವುದಂತೂ ಬೊಂಬಾಯಿ. ಆದರೆ ನಮ್ಮ ಫಾದರ್ ನಾವೆಲ್ಲ ದುರ್ಗಾಪುರದವರು ಎಂತ ಹೇಳುತ್ತಿದ್ದರು. ಬಹುಶಃ ಅಲ್ಲಿ ನಮ್ಮದು ಎಂದು ಏನೂ ಉಳಿದಿಲ್ಲ ಅಂತ ಕಾಣುತ್ತೆ."

"ಯಾವ ದುರ್ಗಾಪುರ? ವರ್ಧಮಾನ ಜಿಲ್ಲೆಯಲ್ಲಿರುವುದೆ?"

"ಹೌದು ಹೌದು. ತಂದೆಯವರ ಬಾಯಲ್ಲಿ ಹಾಗೆ ಕೇಳಿದ್ದೇನೆ. ಅದು 'ಕಾಲಿನಾ'ದ ಹತ್ತಿರದ ಒಂದು ಸಣ್ಣ ಹಳ್ಳಿಯಂತೆ. ಈಗ ಮಲೇರಿಯ ಆವರಿಸಿ ಆ ಹಳ್ಳಿ ಹೆಸರಿಲ್ಲದಂತೆ ಅಳಿದುಹೋಯಿತು ಎಂದು ಕೇಳಿದ್ದೇನೆ."

ದಯಾಮಯಿ ಕ್ಷಣಕಾಲ ಸುಮ್ಮನಿದ್ದು ಪುನಃ ಪ್ರಶ್ನಿಸಿದಳು. "ನಿಮ್ಮ ತಂದೆಯ ಹೆಸರು?" "ನಮ್ಮ ತಂದೆಯ ಹೆಸರು ರಾಮಚಂದ

ಬಸು ಅಂತ." ದಯಾಮಯಿ ಬೆಚ್ಚಿದಳು. "ಏನು ನಿಮ್ಮ ತಂದೆಯ ಹೆಸರು ಹರಿಹರ ಬಸು ಅಲ್ಲವೆ?"

ಈ ಪ್ರಶ್ನೆಯನ್ನು ಕೇಳಿ ರಾಯ್ ಮಹಾಶಯರಿಗೂ ಆಶ್ಚರ್ಯ ವಾಯಿತು. "ಏನು ನಿಮಗೆ ಅವರ ಪರಿಚಯವಿದೆಯೆ?" ಎಂದು ಅವರು ಕೇಳಿದರು.

"ಗೊತ್ತಿದೆ. ದುರ್ಗಾಪುರದಲ್ಲಿ ನನ್ನ ಅಜ್ಜನ ಮನೆ ಇದೆ. ನಾನು ಚಿಕ್ಕಂದಿನಿಂದಲೂ ಅಜ್ಜಿಯ ಜೊತೆಯಲ್ಲೇ ಇದ್ದೆ. ಆದುದರಿಂದ ಅಲ್ಲಿದ್ದವರೆಲ್ಲ ನನಗೆ ಗೊತ್ತು. ಇವರ ತಂದೆಯ ಮನೆಯಂತು ನಮ್ಮ ಬೀದಿಯಲ್ಲೆ ಇತ್ತು. ಆದರೆ ಈಗ ಮಾತನಾಡುವಷ್ಟು ಅವಕಾಶವಿಲ್ಲ— ಸಾಯಂಕಾಲದ ಪೂಜೆಗೆ ಹೊತ್ತಾಯಿತು. ನೀನು ಊಟ ತಿಂಡಿ ಮುಗಿಸಿ ಕೊಳ್ಳದೆ ಎಲ್ಲಿಗೂ ಹೋಗಕೂಡದು. ನಾನು ಅದಕ್ಕೆ ಅಣಿಮಾಡಲು ಹೇಳಿ ಹೋಗುತ್ತೇನೆ" ಎಂದು ಹೇಳಿದಳು.

ಸುಧೀರನು ನಕ್ಕು "ಇದುವರೆಗೂ ಉಳಿದಿರುವುದೇನು? ವಿಪ್ರದಾಸ ಬಾಬು ಇದನ್ನೆಲ್ಲ ಆಗಲೇ ಮಾಡಿಸಿಬಿಟ್ಟಿದ್ದಾರೆ" ಅಂದ.

"ಹಾಗಾದರೆ ಎಲ್ಲವೂ ಆಯಿತೆ? ನಾನು ಹೋಗಿಬರುತ್ತೇನೆ." ಎಂದು ಹೇಳಿ ದಯಾಮಯಿ ಹೊರಟುಹೋದಳು. ವಂದನಳ ಕಡೆ ಒಂದು ಸಲವಾದರೂ ನೋಡಲಿಲ್ಲ; ಒಂದು ಮಾತನ್ನೂ ಆಡಿಸಲಿಲ್ಲ.

ಮರುದಿನ ಬೆಳಿಗ್ಗೆ ಎಂದಿನಂತೆ ಸ್ನಾನಾಹ್ನಿಕಗಳನ್ನು ಮುಗಿಸಿ ಕೊಂಡು ತಾಯಿಯ ಪಾದಧೂಲಿಯನ್ನು ಅವಧರಿಸಲು ಅವಳ ಕೋಣೆಗೆ ಹೋದಾಗ ಅವನ ಆಶ್ಚರ್ಯಕ್ಕೆ ಪಾರವೇಯಿಲ್ಲ. ಎಲ್ಲಿಗೋ ಹೊರಡುವ ಸಿದ್ಧತೆಯಾಗುತ್ತಿದೆ. ಗಂಟುಮೂಟೆ ಕಟ್ಟುತ್ತಿದ್ದಾಳೆ.

"ಏನಮ್ಮ, ಎಲ್ಲಿಗಾದರೂ ಹೊರಡುವಿಯಾ?" "ನೀನು ಸಿಕ್ಕ ಲಿಲ್ಲ. ಆದುದರಿಂದ ದತ್ತಜೀಯವರನ್ನು ಕೇಳಿದೆ. ಬೆಳಿಗ್ಗೆ ಏಳೂವರೆ ಗಂಟೆ ರೈಲಿಗೆ ಹೊರಟರೆ ಸಾಯಂಕಾಲ ಆಗುವುದರಲ್ಲಿ ಮನೆಯನ್ನು ಸೇರಬಹುದಂತೆ. ನಾಳಿದ್ದು ನಿನಗೆ ಹಿಯರಿಂಗ್ ಇರುವುದರಿಂದ ಬರಲು ಸಾಧ್ಯವಿಲ್ಲ. ದ್ವಿಜೂಗೆ ಹೇಳು ನನ್ನನ್ನು ಕಳಿಸಿಕೊಟ್ಟು ಬರಲಿ."

ವಿಪ್ರದಾಸನು ತಾಯಿಯ ಮುಖವನ್ನು ನೋಡಿದ. ಅವಳ

ಕಣ್ಣು ಕೆಂಪಾಗಿವೆ. ಮುಖ ಒಣಗಿಹೋಗಿದೆ. ನೋಡುವುದರಲ್ಲಿ ಏನೋ ಒಂದು ಸಹಿಸಲಸಾಧ್ಯವಾದ ವೇದನೆ ಆದಂತೆ ತೋರುತ್ತಿದೆ.

"ಏನಮ್ಮ, ಏನು ಅಂಥ ಜರೂರಿ ಕೆಲಸ?" ಎಂದು ಹೆದರುತ್ತ ಕೇಳಿದ.

"ಎರಡು ದಿನಕ್ಕೆ ಅಂತ ಬಂದಿದ್ದೆ. ಎಂಟುಹತ್ತು ದಿನ ಕಳೆದು ಹೋಯಿತು. ಅಲ್ಲಿ ದೇವರ ಪೂಜೆ ವಿಚಾರ ಏನಾಗಿದಿಯೋ ಏನೋ ಗೊತ್ತಿಲ್ಲ. ಐದಾರು ಹಸುಗಳು. ತುಂಬು ಗಬ್ಬದ್ದು; ಇಂದೊ ನಾಳೆಯೊ ಕರುಹಾಕುವಂತೆ ಇದ್ದವು. ವಾಸೂನ ಓದೂ ಹಾಳಾಗುತ್ತಿದೆ. ಆದುದರಿಂದ ಇನ್ನು ತಡಮಾಡುವುದು ಸರಿಯಲ್ಲ ನಾನು ಹೋಗಬೇಕು."

ನಿಜವಾಗಿಯೂ ಈ ಕಾರಣಗಳು ದಯಾಮಯಿಗೆ ಅಲ್ಪವಾದುವು ಗಳಲ್ಲ. ಆದಾಗ್ಯೂ ಅವಳು ನಿಜವಾದ ಕಾರಣವನ್ನು ಬಿಚ್ಚಿ ಹೇಳಲಿಲ್ಲ. ವಿಪ್ರದಾಸನು ಇದನ್ನು ಮನಗಂಡರೂ "ಏನಮ್ಮ ಈ ದಿನ ಹೋಗ ದಿದ್ದರೆ ಆಗುವಂತಿಲ್ಲವೆ?" ಎಂದು ಪ್ರಶ್ನಿಸಿದ.

"ಆಗೋಲ್ಲಪ್ಪ ಆಗೋಲ್ಲ. ವೃಥಾ ನನ್ನನ್ನು ತಡೆಯಬೇಡ. ಹೋಗಲಿ ದ್ವಿಜೂನ ಜೊತೆಯಲ್ಲಿ ಹೊರಡುವಂತೆ ಹೇಳು. ಇಲ್ಲವೆ ಇನ್ನಾರಾದರೂ ನಮ್ಮನ್ನು ಬಿಟ್ಟು ಬರಲಿ."

"ಹಾಗೇ ಆಗಲಿ" ಎಂದು ವಿಪ್ರದಾಸನು ಅವರ ಪದರಜವನ್ನು ಶಿರಸಾಧರಿಸಿ ತನ್ನ ಕೋಣೆಗೆ ಹಿಂತಿರುಗಿದನು. ಅಲ್ಲಿ ಸತಿ ತನ್ನ ಕಾರ್ಯ ದಲ್ಲಿ ತೊಡಗಿದ್ದಾಳೆ. ಹತ್ತಿರದಲ್ಲಿ ಕುಳಿತಿರುವ ಅನ್ನದ ಹಣ್ಣು ಹಂಪಲು ಮಗುವಿನ ಪೋಷಿಥಾಲಿ ಎಲ್ಲವನ್ನೂ ಬುಟ್ಟಿಯಲ್ಲಿ ಅಚ್ಚುಕಟ್ಟಾಗಿ ಇಡುತ್ತಿದ್ದಾಳೆ.

ಸತಿ ಹಣೆಯವರೆಗೂ ಸೆರಗನ್ನು ಎಳೆದುಕೊಂಡು ಎದ್ದು ನಿಂತಳು. ವಿಪ್ರದಾಸನು "ಅನ್ನದ, ಏನು ಸಮಾಚಾರ?" ಎಂದು ಕೇಳಿದ.

"ನನಗೆ ಏನೂ ಗೊತ್ತಿಲ್ಲ. ಬೆಳಿಗ್ಗೆ ಏಳೋಹೊತ್ತಿಗೆ ಅಮ್ಮ ನನ್ನನ್ನು ಕರೆದು 'ಬಹು ಹಾಗೂ ಅವಳ ಮಗುವಿಗೆ ಊಟ ತಿಂಡಿಗೆ ತೊಂದರೆ ಇಲ್ಲದಂತೆ ಅಣಿಮಾಡು. ಅವರು ಒಂಬತ್ತು ಗಂಟೆಯ ರೈಲಿಗೆ ಹೊರಡುತ್ತಾರೆ ಅಂತ ಹೇಳಿದರು ಅಷ್ಟೆ.'

ವಿಪ್ರದಾಸನು ಸತಿಯನ್ನು ಕೇಳಲು ಅವಳು ತಲೆ ಅಲ್ಲಾಡಿಸಿ ತನಗೆ ಏನೂ ತಿಳಿಯದೆಂದು ಸೂಚಿಸಿದಳು.

ಈ ಉತ್ತರವನ್ನು ಕೇಳಿ ವಿಪ್ರದಾಸನು ದಂಗುಬಡಿದು ನಿಂತನು. ಅನ್ನದಾಗೆ ಒಂದು ವೇಳೆ ಗೊತ್ತಿಲ್ಲದೆ ಇರಬಹುದು. ಆದರೆ ಅತ್ತೆಯ ಗುಟ್ಟು ಸೊಸೆಗೆ ಗೊತ್ತಿಲ್ಲವೆ? ಇದಕ್ಕಿಂತ ಆಶ್ಚರ್ಯದ ಸಂಗತಿ ಬೇರೆ ಉಂಟೆ? ಅವನು ಕ್ಷಣಕಾಲ ಸುಮ್ಮನೆ ನಿಂತಿದ್ದು ಕೆಳಕ್ಕೆ ಇಳಿದು ಹೋದನು. ಇದು ತಾಯಿಯ ಪ್ರಕೃತಿಗೆ ವಿರುದ್ಧವಾಗಿದೆಯಲ್ಲ. ಅದೆಂತಹ ವೇದನೆ ಇರಬೇಕು? ಅವಳ ಈ ಅಸಹಜ ವರ್ತನೆಯ ಮೂಲಕಾರಣವಾದ ಆ ವೇದನೆಯನ್ನು ಇದುವರೆಗೂ ಯಾರ ಮುಂದೆಯೂ ಹೇಳಿಲ್ಲವಲ್ಲ ಎಂದು ಉದ್ವೇಗದಿಂದ ಯೋಚಿಸುತ್ತಿದ್ದನು.

ದಯಾಮಯಿಯು ಎಲ್ಲ ಸಿದ್ಧತೆಗಳನ್ನು ಮುಗಿಸಿಕೊಂಡು ಬಂದಾಗ ರೈಲಿಗೆ ಇನ್ನೂ ಬೇಕಾದಷ್ಟು ಹೊತ್ತು ಇದ್ದಿತು. ಆದರೆ ಇವತ್ತು ಅವಳಿಗೆ ವಿಲಂಬವು ಅಸಹ್ಯಕರವಾಗಿ ತೋರುತ್ತಿತ್ತು. ಹೇಗಾದರೂ ಮಾಡಿ ಮನೆಬಿಟ್ಟು ಹೊರಟರೆ ಸಾಕು, ಹಾರಿಹೋದ ಪ್ರಾಣ ಬಂದಂತಾಯಿತು ಅನ್ನುವ ಸ್ಥಿತಿ ಅವಳದಾಗಿತ್ತು. ಒಂದು ಮೋಟಾರಿನಲ್ಲಿ ಸಾಮಾನುಗಳನ್ನು ತುಂಬುತ್ತಿದ್ದಾರೆ. ಇನ್ನೊಂದು ಕಾದು ನಿಂತಿದೆ. ಆಳು ಕಾಳುಗಳು ಮೋಟಾರನ್ನು ಹತ್ತಿ ಕುಳಿತಿದ್ದಾರೆ. ಅಷ್ಟು ಹೊತ್ತಿಗೆ ಕೈಯಲ್ಲಿ ಚೀಲವನ್ನು ಹಿಡಿದುಕೊಂಡು ಬಂದ ವಿಪ್ರದಾಸನನ್ನು ಕಂಡು ದಯಾಮಯಿ ಆಶ್ಚರ್ಯದಿಂದ "ದ್ವಿಜು ಎಲ್ಲಿ?" ಎಂದು ಕೇಳಿದಳು. "ಇಲ್ಲ ಅಮ್ಮ, ಅವನು ಹೊರಡುವುದಿಲ್ಲ. ನಾನೇ ಬರುತ್ತೇನೆ."

"ಅವನು ಬರಲು ಒಪ್ಪಲಿಲ್ಲವೆಂತ ಕಾಣುತ್ತೇ ಅಲ್ಲವೆ?"

"ಅವನ ವಿಚಾರವಾಗಿ ಅಂಥಾ ಮಾತುಗಳನ್ನು ಆಡಬೇಡ. ಅವನು ನಿನ್ನಮಾತನ್ನು ಮೀರಿ ಎಂದು ನಡೆದಿದ್ದಾನೆ ಹೇಳು?" ಎಂದು ವಿನಯದಿಂದ ಕೇಳಿದನು.

"ಹಾಗಾಗರೆ ಏನಾಯಿತು? ಏಕೆ ಹೊರಡಲಿಲ್ಲ?"

"ನಾನು ಹೊರಡಲು ಹೇಳಲಿಲ್ಲ" ಎಂದು ಹೇಳಿ ವಿಪ್ರದಾಸನು ತುಸು ನಕ್ಕು ಪುನಃ "ಅಮ್ಮ ನೀನು ಯಾವ ಕಾರಣದಿಂದ ಉದ್ವಿಗ್ನಳಾಗಿ

ಹೊರಟಿದ್ದೀಯೋ ಅದೇ ಕಾರಣದಿಂದ ನಾನೂ ಹೊರಟಿದ್ದೇನೆ. ಮನೆ ದೇವರು ಮತ್ತು ಹಸುಗಳು ಇವುಗಳನ್ನು ಕಣ್ಣಾರೆ ನೋಡಬೇಕು ಅಂತ ನನಗೂ ಇಚ್ಛೆ ಇದೆ. ಇನ್ನೇನೂ ಇಲ್ಲ" ಎಂದನು.

ಬೇರೆ ಯಾವುದಾದರೂ ಸಮಯವಾಗಿದ್ದರೆ ಈ ಮಾತುಗಳನ್ನು ಕೇಳಿ ದಯಾಮಯಿ ತಾನೂ ನಕ್ಕು ಮಗನೊಂದಿಗೆ ಎಷ್ಟು ಮಾತುಗಳನ್ನಾಡುತ್ತಿದ್ದಳೋ. ಆದರೆ ಈಗ ಅವಳು ಸುಮ್ಮನಿದ್ದಳು.

ಅನ್ನದ ವಂದನಳನ್ನು ಕರೆಯಲು ಹೋಗಿದ್ದಳು. ಅವಳು ಇನ್ನೂ ಆಗತಾನೆ ಸ್ನಾನಮಾಡಿ ತಂದೆಯ ಕೋಣೆಯ ಕಡೆ ಹೋಗಬೇಕು ಅಂತ ಇದ್ದಳು. ಅಷ್ಟರಲ್ಲಿ ಕರೆಯಲು, ಬೇಗ ಕೆಳಗಿಳಿದು ಬಂದು ಅಲ್ಲಿಯ ದೃಶ್ಯವನ್ನು ಕಂಡು ಏನೂ ತೋಚದೆ ನಿಂತುಬಿಟ್ಟಳು. "ವಂದನ, ಇವತ್ತು ನಾವೆಲ್ಲ ಊರಿಗೆ ಹೊರಟಿದ್ದೇವೆ" ಎಂದು ದಯಾಮಯಿ ಹೇಳಿದಳು.

"ಊರಿಗೆ? ಏಕೆ ಅಲ್ಲಿ ಏನಾದರೂ ಆಯಿತೆ?"

"ಇಲ್ಲ, ಏನೂ ಆಗಿಲ್ಲ. ಎರಡು ದಿನದ ಮಟ್ಟಿಗೆ ಇರಲು ಬಂದಿದ್ದವು. ಹತ್ತು ಹನ್ನೆರಡು ದಿನಗಳಾದವು. ಇನ್ನು ಇರಲು ಸಾಧ್ಯವಿಲ್ಲ. ನಿನ್ನ ತಂದೆಯನ್ನು ಪುನಃ ನೋಡಲು ಆಗಲಿಲ್ಲ—ಅವರು ಇನ್ನೂ ಎದ್ದಿರಲಿಲ್ಲ—ಅವರಿಗೆ ಹೇಳಿಬಿಡು. ಏನಾದರೂ ತಪ್ಪುಗಳಾಗಿದ್ದರೆ ಕ್ಷಮಿಸಲು. ದ್ವಿಜ ಇಲ್ಲಿ ಉಳಿದಿದ್ದಾನೆ. ಅನ್ನದ ಇದ್ದಾಳೆ. ನೀನಂತು ಸರಿಯೇ ಸರಿ. ಒಟ್ಟಿನಲ್ಲಿ ಅವರಿಗೆ ಯಾವುದಕ್ಕೂ ತೊಂದರೆ ಆಗದಂತೆ ನೋಡಿಕೊಳ್ಳಿ. ಸತಿ, ಇನ್ನು ಹೊರಡು ಹೊತ್ತುಮಾಡಬೇಡ." ಇಷ್ಟು ಹೇಳಿ ಅವಳು ಕಾರಿನಲ್ಲಿ ಹೋಗಿ ಕುಳಿತುಕೊಂಡಳು.

ಸತಿ ಹಿಂದೆ ನಿಂತಿದ್ದವಳು ತಂಗಿಯ ಹತ್ತಿರಕ್ಕೆ ಬಂದು ಅವಳ ಕೈ ಹಿಡಿದುಕೊಂಡಳು. ಅವಳಿಗೆ ಅಳು ಬಂದುಬಿಟ್ಟಿತು.

"ವಂದನ ನಾವು ಹೊರಡುತ್ತೇವೆ" ಎಂದು ಇಷ್ಟು ಮಾತನ್ನು ಹೇಳಲು ಅವಳಿಗೆ ಸಾಧ್ಯವಾಯಿತು. ಮುಂದಕ್ಕೆ ಒಂದು ಶಬ್ದವೂ ಅವಳ ಬಾಯಿಂದ ಹೊರಡಲಿಲ್ಲ. ಕಣ್ಣನ್ನು ಒರೆಸಿಕೊಂಡು ಅವಳು ಅತ್ತೆಯ ಪಕ್ಕದಲ್ಲಿ ಹೋಗಿ ಕುಳಿತಳು.

ವಂದನ ಸಿಡಿಲು ಬಡಿದವಳಂತೆ ಆಶ್ಚರ್ಯ ಚಕಿತಳಾಗಿ ನಿಂತಿದ್ದಳು. ಕಲ್ಲುಕಂಬದಂತೆ ಮೌನವಾಗಿದ್ದಳು. ಅಕಸ್ಮಾತ್ತಾಗಿ ಹೀಗೆ ಏಕೆ ಆಯಿತೆಂದು ಆವಳು ಯೋಚಿಸುತ್ತಿದ್ದಳು.

"ಚಿಕ್ಕಮ್ಮ ನಾನು ಹೊರಡುತ್ತೇನೆ" ಎಂದು ಹೇಳಿ ವಾಸು ನಮಸ್ಕಾರ ಮಾಡಿದಾಗ ಅವಳಿಗೆ ಎಚ್ಚರವಾಯಿತು. ಇದುವರೆಗೂ ತಾನು ಯಾರಿಗೂ ನಮಸ್ಕಾರವನ್ನೇ ಮಾಡಲಿಲ್ಲವಲ್ಲ ಎಂದುಕೊಂಡಳು. ತಕ್ಷಣವೇ ವಾಸುವಿನ ಹಣೆಯನ್ನು ಮುತ್ತಿಟ್ಟು ಕಾರಿನಹತ್ತಿರ ಹೋಗಿ ಬಾಗಿಲು ತೆರೆದು ದಯಾಮಯಿ ಹಾಗೂ ಅಕ್ಕನ ಪಾದಗಳನ್ನು ಮುಟ್ಟಿ ನಮಸ್ಕರಿಸಿದಳು. ಸತಿಯು ಆವಳ ಗಲ್ಲವನ್ನು ಮುಟ್ಟಿದಳು ದಯಾಮಯಿ ಅಸ್ಪಷ್ಟ ದನಿಯಲ್ಲಿ ಏನೋ ಆಶೀರ್ವದಿಸಿದಳು. ಆದರೆ ಏನು ಹೇಳಿದಳೆಂದು ಯಾರಿಗೂ ತಿಳಿಯಲಿಲ್ಲ. ಕಾರು ಹೊರಟುಬಿಟ್ಟಿತು.

ಅನ್ನದ "ಹೊರಡಿ ಅಮ್ಮ ಮೇಲೆ ಹೋಗೋಣ." ಎಂದಳು. ಅವಳ ಸ್ನೇಹಪೂರ್ಣ ಸ್ವರವನ್ನು ಕೇಳಿ ವಂದನ ನಾಚಿದಳು. ಕ್ಷಣಮಾತ್ರದಲ್ಲಿ ತನ್ನ ವಿಹ್ವಲತೆಯನ್ನು ಕಿತ್ತೆಸೆದು "ನೀನು ಹೊರಡು, ನಾನು ಅಡಿಗೆ ಕೆಲಸವನ್ನು ಪೂರೈಸಿಕೊಂಡು ಬರುತ್ತೇನೆ" ಎಂದು ಹೇಳಿ ಅಡಿಗೆ ಮನೆಕಡೆ ಹೊರಟುಬಿಟ್ಟಳು.

ರಾಯ್‌ಮಹಾಶಯರು ಬೊಂಬಾಯಿಗೆ ಹೊರಟ ಕೂಡಲೆ ಎಲ್ಲರೂ ಒಟ್ಟಾಗಿ ಬಲರಾಮಪುರಕ್ಕೆ ಹೋಗಬೇಕೆಂದು ಹಿಂದಿನ ರಾತ್ರಿ ಮಾತು ನಡೆದಿತ್ತು. ಆದರೆ ಇಂದು ಅದರ ವಿಚಾರವೇ ಇಲ್ಲ. ಎಂದಾದರು ಬಾ ಎಂದು ಕೂಡ ಕರೆಯಲಿಲ್ಲ. ಹೀಗೆ ನಡೆದಿತ್ತು ವಂದನಳ ವಿಚಾರ ಘೋರಣೆ.

ಸುಮಾರು ಒಂದು ಗಂಟೆಯಾದ ಮೇಲೆ ಟೀ ಮುಂತಾದುವನ್ನು ತೆಗೆದುಕೊಂಡು ವಂದನ ತನ್ನ ತಂದೆಯ ಕೋಣೆಯೊಳಕ್ಕೆ ಬಂದಾಗ ಅವರು ಪಶ್ಚಾತ್ತಾಪದ ಸ್ವರದಲ್ಲಿ "ಬೇಗಿತ್ತಿ ಮುಂತಾದವರು ಹೊರಟುಹೋದರು; ಬೆಳಿಗ್ಗೆ ಏಳಲು ಆಗಲಿಲ್ಲ, ಛೆ, ಛೆ, ಆವರು ಮನಸ್ಸಿಗೆ ಏನು ತಿಳಿದುಕೊಂಡರೋ ಏನೊ" ಎಂದು ಹೇಳಿದರು.

ವಂದನ "ಅಪ್ಪ, ನೀವು ಬೊಂಬಾಯಿಗೆ ಎಂದು ಹೊರಡುತ್ತೀರಿ?"

" ಅದಿರಲಿ. ನೀನು ಬಲರಾಮಪುರಕ್ಕೆ ಹೋಗಬೇಕೆಂದು ಮಾತಾಗಿತ್ತಲ್ಲ. ಹೊರಡಲಿಲ್ಲವೆ ? "

' ನಿಮ್ಮನ್ನು ಒಬ್ಬರನ್ನೇ ಬಿಟ್ಟು ಹೇಗೆ ಹೋಗುವುದು ? ಅದಲ್ಲದೆ ನಿಮಗೆ ಇನ್ನೂ ಪೂರ್ಣ ಗುಣವಾಗಿಲ್ಲ ಸಹ."

" ನನಗೆ ಗುಣ ಆಗಿದೆಯಲ್ಲ. ಬೀಗಿತ್ತಿಗೆ ನಿನ್ನನ್ನು ಕಳುಹಿಸಿ ಕೊಡುವುದಾಗಿ ಮಾತು ಕೊಟ್ಟಿದ್ದೆ. ಆದದ್ದಾಯಿತು, ಬೊಂಬಾಯಿಗೆ ಹೋಗುವಾಗ ನಿನ್ನನ್ನು ಬಲರಾಮಪುರದಲ್ಲಿ ಬಿಟ್ಟು ಹೋಗುತ್ತೇನೆ. ಆಗಬಹುದೆ ? "

" ಬೇಡ ಅಪ್ಪ, ಅದು ಸಾಧ್ಯವಿಲ್ಲ. ಅಷ್ಟು ದೂರದ ಪ್ರಯಾಣ, ನೀವೊಬ್ಬರೇ ಮಾಡಲು ಸಾಧ್ಯವಿಲ್ಲ. ನಿಮ್ಮನ್ನು ಒಂಟಿ ನಾನು ಕಳಿಸಿ ಕೊಡಲಾರೆ "

ಮಗಳ ಮಾತನ್ನು ಕೇಳಿ ತಂದೆ ಪುಲಕಿತ ಚಿತ್ತರಾಗಿ ಒಂದು ಬಗೆಯ ತಿರಸ್ಕಾರವನ್ನು ತೋರುತ್ತ " ಥು ಹುಚ್ಚಿ ಎಂದಾದರೂ ಪುನಃ ಬೀಗಿತ್ತಿಯನ್ನು ಕಂಡಾಗ ಅವರು ' ಏನಪ್ಪ ನಿಮ್ಮ ಮಗಳು ಮುದಿ ತಂದೆಯನ್ನು ಅರೆ ನಿಮಿಷ ಸಹ ಬಿಟ್ಟಿರಲಾರಳು ಅಂತ ಕಾಣುತ್ತೆ ' ಎಂದು ಹಂಗಿಸುತ್ತಾರೆ ಸಾಕು, ಸಾಕು...." ಅಂದರು.

" ನೀವು ಚಾ ತೆಗೆದುಕೊಳ್ಳಿ. ನಾನು ಈ ಕ್ಷಣ ಬರುತ್ತೇನೆ "ಎಂದು ಹೇಳಿ ವಂದನ ಅಲ್ಲಿಂದ ಹೊರಟುಹೋದಳು.

೧೪

ಸಾಯಂಕಾಲ ವಂದನ ದ್ವಿಜದಾಸನ ಕೋಣೆಯ ಮುಂದೆ ನಿಂತು " ದ್ವಿಜುಬಾಬೂ, ಒಮ್ಮೆ ಒಳಕ್ಕೆ ಬರಬೇಕೆಂದಿದ್ದೇನೆ, ಬರಲೆ ? " ಎಂದು ಕೂಗಿ ಕೇಳಿದಳು.

" ಬನ್ನಿ ಬನ್ನಿ, ಒಂದು ಸಲ ಏಕೆ ನೂರುಸಲ, ಸಾವಿರಸಲ ,ಲಕ್ಷ ಸಲ ಬೇಕಾದರೂ ಬರಬಹುದು'' ಎಂದು ಒಳಗಿನಿಂತ ಉತ್ತರ ಬಂದಿತು.

ಎರಡು ಬಾಗಿಲುಗಳನ್ನೂ ಹಾರುಹೊಡೆದು ಕೋಣೆಯಲ್ಲಿದ್ದ ದೀಪಗಳನ್ನೆಲ್ಲ ಹಚ್ಚಿ ತೆರೆದ ಕಿಟಕಿಯ ಪಕ್ಕದಲ್ಲಿ ಕುರ್ಚಿಯನ್ನೆಳೆದುಕೊಂಡು

ವಂದನ ಅದರ ಮೇಲೆ ಕುಳಿತುಕೊಂಡಳು.

ದ್ವಿಜದಾಸನು ಕೈಯಲ್ಲಿದ್ದ ಪುಸ್ತಕವನ್ನು ಮೊಗಚಿಟ್ಟು ಹಾಸಿಗೆಯ ಮೇಲೆ ಎದ್ದು ಕುಳಿತು " ಏನಪ್ಪಣೆ ? " ಎಂದು ಕೇಳಿದನು.

" ಏನು ಓದುತ್ತಿದ್ದಿರಿ ?"

" ದೈವ್ವದ ಕತೆ."

" ಅತಿಥಿಗಳು ಮುಖ್ಯವೊ ? ದೈವ್ವದ ಕತೆಗಳು ಮುಖ್ಯವೊ ? "

" ದೈವ್ವದ ಕತೆಗಳು. "

ವಂದನ ಕೊಂಚ ಅಸಮಾಧಾನದಿಂದ " ಯಾವಾಗಲೂ ಹಾಸ್ಯ ಕುಚೋದ್ಯ ಅಂದರೆ ಚೆನ್ನಾಗಿರುವುದಿಲ್ಲ. ನಾವೆಲ್ಲ ನಿಮ್ಮ ಮನೆಯಲ್ಲಿ ಉಳಿದಿರುವೆವೆಂದು ಗೊತ್ತಿದೆಯೋ ? "

" ನೀವು ನಮ್ಮ ಅಣ್ಣನ ಮನೆಯ ಅತಿಥಿಗಳು. ಇದರ ಅರಿವು ನನಗಿದೆ. ನಿಮ್ಮ ಊಟ ಉಪಚಾರಗಳಲ್ಲಿ ಏನೊಂದು ಕುಂದುಕೊರತೆಯೂ ಆಗದಂತೆ ನೋಡಿಕೊಳ್ಳಲು ಮನೆಯ ಮಾಲೀಕನ ಅಪ್ಪಣೆಯಾಗಿದೆ. ನಿಜವಾಗಿಯೂ ಯಾವ ಕುಂದುಕೊರತೆಯೂ ತೋರಿಬರುತ್ತಿಲ್ಲ. ಆದರೆ ಈ ದೈವ್ವದ ಕತೆ ಮಧ್ಯದಲ್ಲಿ ಬಂದುದರಿಂದ ನನ್ನನ್ನು ನಾನೇ ಮರೆತುಬಿಟ್ಟೆ. ಅತಿಥಿಗಳ ಕ್ಷಮೆ ಬೇಡುತ್ತೇನೆ."

" ಇವತ್ತು ಬೆಳಗಿನಿಂದ ನನಗೆ ಎಷ್ಟು ತೊಂದರೆ ಆಗಿದೆ ಗೊತ್ತೆ ? "

" ಹ್ಞಾ ಹ್ಞಾ ಗೊತ್ತಿದೆ.''

" ಗೊತ್ತಿದೆಯೆ ? ಆದರೂ ಅದನ್ನು ಹೋಗಲಾಡಿಸಲು ಏನೂ ಪ್ರಯತ್ನಪಡಲಿಲ್ಲವೆ ? "

" ಪ್ರತೀಕಾರವನ್ನು ಮಾಡದೆ ಇರಲು ಮೊದಲನೆಯ ಕಾರಣ ವನ್ನಂತೂ ಹೇಳಿದ್ದೇನೆ. ಎರಡನೆಯ ಕಾರಣ ಏನೆಂದರೆ ಅದಕ್ಕೆ ಪ್ರತೀ ಕಾರವನ್ನು ಮಾಡುವ ಶಕ್ತಿ ನನ್ನಲ್ಲಿಲ್ಲ.''

" ಏಕೆ ? "

" ಅದನ್ನು ನಾನು ಹೇಳಬಾರದು. "

" ಅಮ್ಮ ಅಕ್ಕ ಇಬ್ಬರೂ ಹಾಗೆ ಇದ್ದಕ್ಕಿದ್ದಂತೆಯೆ ಊರಿಗೆ ಏಕೆ ಹೊರಟು ಹೋದರು ? "

ಪ್ರಬಲಳೂ ಪರಾಕ್ರಾಂತಳೂ ಆದ ಅತ್ತೆಯ ಬಲಾತ್ಕಾರಕ್ಕೆ ಸಿಕ್ಕು ಅಕ್ಕ ಹೊರಟುಹೋದಳು. ಅವಳು ಕೇವಲ ನಿರ್ದೋಷಿ."

"ಹಾಗಾದರೆ ಅಮ್ಮ ಏತಕ್ಕೆ ಹೊರಟುಹೋದರು ?"

"ಅದು ಅವರಿಗೇ ಗೊತ್ತು"

"ನಿಮಗೆ ಗೊತ್ತಿಲ್ಲವೆ ?"

"ಗೊತ್ತೇ ಇಲ್ಲ ಎಂದು ಹೇಳಿದರೆ ಸುಳ್ಳಾಗುತ್ತೆ. ಏಕೆ ಅಂದರೆ ಅತ್ತಿಗೆ ಅದಕ್ಕೆ ಕಾರಣವನ್ನು ಊಹಿಸಿದ್ದಳು. ಅದು ಸ್ವಲ್ಪ ಮಟ್ಟಿಗೆ ನನಗೂ ತಿಳಿದಿದೆ."

"ಆ ಸ್ವಲ್ಪ ಮಟ್ಟಿಗೆ ತಿಳಿದಿರುವುದನ್ನೆ ನನಗೂ ಹೇಳಿ. ಹೇಳಲೇ ಬೇಕು."

ದ್ವಿಜದಾಸನು ಕ್ಷಣಕಾಲ ಮೌನವಾಗಿದ್ದು "ವಂದನ ನನ್ನನ್ನು ಒಳ್ಳೆಯ ಧರ್ಮ ಸಂಕಟಕ್ಕೆ ಸಿಕ್ಕಿಸಿದೆ. ಅದನ್ನು ಕೇಳದೆ ನಿನ್ನ ಕೆಲಸ ನಡೆಯುವಂತಿಲ್ಲವೆ ?" ಎಂದು ಹೇಳಿದನು.

"ಇಲ್ಲ, ಅದು ಆಗದಮಾತು, ಹೇಳಲೇಬೇಕು." ದ್ವಿಜದಾಸ ಹೇಳಲು ಹಿಂಜರಿದ.

"ದ್ವಿಜಬಾಬು, ನೋಡಿ. ಈ ಮನೆಯಲ್ಲಿರುವವರೆಗೆ ನಿಮ್ಮ ಮಾತು ಗಳನ್ನು ನಾನು ಕೇಳಬೇಕೆಂದೂ ನನ್ನ ಮಾತನ್ನು ನೀವು ಮನ್ನಿಸ ಬೇಕೆಂದೂ ಮಾತು ನಡೆದಿತ್ತು. ಇದುವರೆಗೆ ನಿಮ್ಮ ಒಂದು ಮಾತನ್ನು ಸಹ ಮೀರಿಲ್ಲವೆಂಬುದು ನಿಮಗೆ ಗೊತ್ತು ಅಲ್ಲವೆ ?" ಎಂದು ಹೇಳುತ್ತಿರು ವಾಗ ವಂದನಳ ಕಣ್ಣಿನಲ್ಲಿ ನೀರು ತುಂಬಿಬರುವಂತಿತ್ತು. ಅವಳು ಬೇರೆ ಕಡೆ ದೃಷ್ಟಿಯನ್ನು ತಿರುಗಿಸಿ ಕ್ಷಣಮಾತ್ರದಲ್ಲಿ ಚೇತರಿಸಿಕೊಂಡಳು.

"ಏನೂ ಪ್ರಯೋಜನಕ್ಕೆ ಬಾರದ ಮಾತು ಅದು ವಂದನ" ಎಂದು ಬಹು ದುಃಖದಿಂದ ದ್ವಿಜದಾಸನು ಹೇಳತೊಡಗಿದನು. "ಆದುದರಿಂದ ನನಗೆ ಹೇಳಲು ಮನಸ್ಸಿರಲಿಲ್ಲ. ನಿನ್ನ ಮೇಲೆ ಸಿಟ್ಟುಗೊಂಡು ಅಮ್ಮ ಹೊರಟುಹೋಗಿದ್ದಾರೆ, ನಿಜ. ಆದರೆ ಇದರಲ್ಲಿ ನಿನ್ನದೇನೂ ತಪ್ಪಿಲ್ಲ, ತಪ್ಪೆಲ್ಲಾ ಅವರದೇ, ಅಲ್ಪಸ್ವಲ್ಪ ತಪ್ಪು ಅತ್ತಿಗೆಯದೂ ಇರಬೇಕು. ಏಕೆಂದರೆ ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿಯಾದರೂ ಅವಳೂ

ಸೇರಿರಬೇಕೆಂದು ನನ್ನ ಭಾವನೆ. ಏನೇ ಇರಲಿ ಏನೇನೂ ತಪ್ಪಿಲ್ಲದ ನಿರಪರಾಧಿ ಎಂದರೆ ಬಡ ದ್ವಿಜದಾಸ.''

ವಂದನ ಬಹಳ ವ್ಯಾಕುಲಳಾಗಿ "ಹೇಳಿ, ಬೇಗಹೇಳಿ ಏನು ಆ ಷಡ್ಯಂತ್ರ ಯಾವ ವಿಚಾರವಾಗಿ?" ಎಂದು ಆತುರದಿಂದ ಕೇಳಿದಳು.

"ಷಡ್ಯಂತ್ರ ಅನ್ನುವ ಪದ ಸರಿಯಾಗಿಲ್ಲ. ಒಟ್ಟಿನಲ್ಲಿ ಅಮ್ಮ ಮನಸ್ಸಿನಲ್ಲಿ ಮಂಡಿಗೆ ಮಾಡಿದ್ದರು. ಅದಕ್ಕೆ ಬೇಕಾದ ಗೋಧೀರೊಕ್ಕ ಕೊಡಲಿಲ್ಲ. ಸರಿ ಸಿಟ್ಟುಬಂತು. ಇಡೀ ಪ್ರಪಂಚದ ಮೇಲೆ ಸಿಟ್ಟು ಎಂತಲೂ ಹೇಳುವ ಹಾಗಿಲ್ಲ. ಮನಸ್ಸಿನ ಆಶೆ ಈಡೇರದ ಕಾರಣ ಉಂಟಾದ ಒಣ ಅಭಿಮಾನ ವೆಂತಲೇ ಹೇಳಬೇಕು.''

ವಂದನ ಸುಮ್ಮನೆ ಅವನ ಕಡೆ ನೋಡುತ್ತಿದ್ದಳು. ದ್ವಿಜದಾಸನು ಪುನಃ ಹೇಳತೊಡಗಿದನು. ಒಂದು ಸಲ ನಿನ್ನ ವಿಷಯದಲ್ಲಿ ಅವರು ಎಷ್ಟು ಹೇಯ ಭಾವನೆಯನ್ನಿಟ್ಟಿದ್ದರೋ ಅಷ್ಟೇ ಸದ್ಭಾವನೆಯನ್ನೂ ನಿನ್ನ ವಿಷಯದಲ್ಲಿ ಇತ್ತೀಚೆಗೆ ಇಟ್ಟಿದ್ದರೆಂದು ನಿನಗೂ ಗೊತ್ತು. ನಿನ್ನನ್ನು ಅವರು ತುಂಬಾ ಪ್ರೀತಿಸುತ್ತಿದ್ದರು. ರೂಪ-ಗುಣ, ವಿದ್ಯಾಬುದ್ಧಿ, ಕೆಲಸ ಕಾರ್ಯ ಇವುಗಳಲ್ಲಿ ಅತ್ತಿಗೆಯೊಬ್ಬಳನ್ನು ಬಿಟ್ಟರೆ ನಿನಗೆ ಸರಿಸಮಾನರು ಬೇರೊಬ್ಬರಿಲ್ಲವೆಂದು ಅವರ ಭಾವನೆಯಾಗಿತ್ತು. ಯಾರಾದರೂ ನಿನ್ನನ್ನು ಮ್ಲೇಚ್ಛಳು ಎಂದು ಕರೆದಿದ್ದರೆ ಇಂಥ ನಿಷ್ಠಳಾದ ಬ್ರಾಹ್ಮಣ ಕನ್ಯೆ ಇಡೀ ಭಾರತ ವರ್ಷದಲ್ಲಿ ಹುಡುಕಿದರೂ ಸಿಗಲಾರಳೆಂದು ಅವರು ಆಣೆ ಇಡುವುದಕ್ಕೂ ಸಿದ್ಧರಾಗಿದ್ದರು'' ಎಂದು ಹೇಳುತ್ತ ಹೇಳುತ್ತ ದ್ವಿಜ ದಾಸನು ತನ್ನ ಹಾಸ್ಯಕ್ಕೆ ತಾನೇ ಮನಸೋತು ಗಟ್ಟಿಯಾಗಿ ನಕ್ಕುಬಿಟ್ಟನು.

ಅವನ ಈ ನಗು ವಂದನಳಿಗೆ ಕೆಟ್ಟದೆನಿಸಿತು. ಆದರೂ ತಡೆಯು ಲಾರದೆ ಅವಳೂ ನಕ್ಕಳು.

"ನಗು ಏಕೆ ವಂದನ? ನಿಜವಾಗಿ ಈ ಹಗರಣಕ್ಕೆ ಅದೇ ಮೂಲ ಕಾರಣ."

"ಹಗರಣ ಏನು ಬಂತು ಇದರಲ್ಲಿ?'' ವಂದನ ಕೇಳಿದಳು.

"ಹಾಗೋ. ಹಾಗಾದರೆ ಕಿವಿಗೊಟ್ಟು ಆಲಿಸು. ದಯಾಮಯಿಗೆ ಇಬ್ಬರು ಪುತ್ರರು. ಒಬ್ಬ ಜ್ಯೇಷ್ಠ ಇನ್ನೊಬ್ಬ ಕನಿಷ್ಠ. ಜ್ಯೇಷ್ಠ ಪುತ್ರನ

ವಿಷಯದಲ್ಲಿ ಎಷ್ಟು ಅಗಾಧವಾದ ಆಶೆ ಮತ್ತು ವಿಶ್ವಾಸವಿದೆಯೋ ಕನಿಷ್ಠ ಪುತ್ರನ ವಿಷಯದಲ್ಲಿ ಅಷ್ಟೇ ನಿರಾಶೆಯೂ, ಸಂಶಯವೂ ಇದೆ. ಇಡೀ ಪ್ರಪಂಚದಲ್ಲಿರುವ ಅಕರ್ಮಣ್ಯರನ್ನು ಎಣಿಸಲುಹೋದರೆ ಕನಿಷ್ಠ ಪುತ್ರನು ವಿನಃ ಬೇರೆ ಯಾರೂ ಸಿಗುವುದಿಲ್ಲವೆಂದು ಅವರ ಭಾವನೆ. ಅಷ್ಟಾದರೂ ತಾಯಿಗೆ ತನ್ನ ಹೊಟ್ಟೆಯಲ್ಲಿ ಹೊತ್ತು ಬೆಳಸಿದ ಮಮತೆ. ಅವನನ್ನು ಹಾಳಾಗಲೆಂದು ಬಿಡಲು ಮನಸ್ಸಿಲ್ಲ. ಒಟ್ಟಿನಲ್ಲಿ ಮಗನ ಸದ್ಗತಿಗಾಗಿ ಉಪಾಯವನ್ನು ಹುಡುಕುತ್ತಿದ್ದಳು. ಕೊನೆಗೆ ವಂದನಳ ಹೆಗಲಮೇಲೆ ಅವನ ಭಾರವನ್ನು ಹಾಕುವುದರಿಂದ ತಾನು ಈ ಸಂಸಾರ ಸಾಗರವನ್ನು ಏನೊಂದು ಭಯವೂ ಇಲ್ಲದೆ ಸುಖವಾಗಿ ದಾಟಿ ಹೋಗಬಹುದೆಂದು ಮನಸ್ಸಿನಲ್ಲಿ ನಿರ್ಧರಿಸಿದ್ದರು. ಆದರೆ ದೈವ ಸಂಕಲ್ಪ ಇದಕ್ಕೆ ವಿರುದ್ಧವಾಗಿತ್ತು. ಅಕಸ್ಮಾತ್ತಾಗಿ ನಿನ್ನೆ ಸಾಯಂಕಾಲ ಅದು ಅತ್ಯಂತ ಚಿಕ್ಕದೆಂದೂ, ಆ ಹೆಗಲಿನ ಮೇಲೆ ಕೊಂಚವೂ ಸ್ಥಳವಿಲ್ಲ ವೆಂದೂ ತಿಳಿಯಬಂತು. ಅಂದರೆ ಇದರ ಭಾವಾರ್ಥ ಇಷ್ಟೆ. ಯಾವುದೋ ಸುಧೀರಚಂದ್ರನು ದಯಾಮಯಿಯ ಸಕಲಸಂಕಲ್ಪಗಳನ್ನೂ, ಸಮಸ್ತ ಸುಖಸ್ವಪ್ನಗಳನ್ನೂ ಮುರಿದು ಮೂಲೆಗೊತ್ತಿ ಮೊದಲೇ ಅಲ್ಲಿ ಬಂದು ಆರೂಢನಾಗಿದ್ದನು. ಅವನನ್ನು ಬೇರೆ ಯಾರಾದರೂ ಅಲುಗಾಡಿಸ ಬೇಕಲ್ಲ. ಆ ಶಕ್ತಿ ಅವರಿಗೆ ಎಲ್ಲಿಂದ ಬರಬೇಕು ?" ಎಂದು ಹೇಳುತ್ತ ಅವನು ಪುನಃ ಜೋರಾಗಿ ನಕ್ಕನು. ಅದು ಕೋಣೆಯಲ್ಲಿ ಪ್ರತಿಧ್ವನಿತ ವಾಯಿತು.

ವಂದನ ಕೆಲವು ನಿಮಿಷ ಸುಮ್ಮನೆ ಅವನನ್ನು ದೃಷ್ಟಿಸಿ ನೋಡುತ್ತ ಕುಳಿತಿದ್ದಳು. ಆನಂತರ "ನಿಮ್ಮ ಈ ಭಯಂಕರ ವಿಕಟ ಹಾಸ್ಯಕ್ಕೆ ಕಾರಣವೇನು ? ತಾಯಿಗೆ ಕ್ಷೋಭೆ ಅಥವ ನಿರಾಶೆ ಆಯಿತು ಎಂತಲೊ ಅಥವಾ ತಮಗೆ ಗಂಟು ಬೀಳಬಹುದಾದ ಒಂದು ದೊಡ್ಡ ಶನಿ ತೊಲಗಿತು ಎಂತಲೋ ? ಏನು ಕಾರಣ ಹೇಳಿ" ಎಂದು ಕೇಳಿದಳು.

ಅದಕ್ಕೆ ದ್ವಿಜದಾಸನು ಮುಗುಳುನಗು ನಗುತ್ತ ಹೇಳಿದನು— "ವಾಸ್ತವವಾಗಿ ಅವುಗಳಲ್ಲಿ ಯಾವುದೂ ಕಾರಣವಲ್ಲ. ಅಕಸ್ಮಾತ್ತಾಗಿ ಕಾಲುಜಾರಿದ್ದಕ್ಕೇ ಕುಸಿದು ಬಿದ್ದಿರುವ ತಾಯಿಯ ಮೂರ್ತಿಯನ್ನು

ಕಂಡು ಇತರರಂತೆ ನಾನೂ ಆನಂದಿಸುತ್ತಿರುವೆನೆಂದು ಒಪ್ಪಿಕೊಳ್ಳುವುದರಲ್ಲಿ ಏನೂ ತಪ್ಪಿಲ್ಲ. ಇದರಿಂದ ಅವರಿಗೆ ಯಾವ ವಿಧವಾದ ವಿಶೇಷ ಹಾನಿಯೂ ಆಗಿಲ್ಲ. ಪ್ರಪಂಚದಲ್ಲಿ ನಮಗಿದ್ದಂತೆಯೇ ಬೇರೆಯವರಿಗೂ ಬುದ್ಧಿ ಇದೆ ಅನ್ನುವ ಪಾಠ ಬೇರೆ ಈ ಪ್ರಕರಣದಿಂದ ಒದಗಿದೆ. ಏಕೆ ಅಂದರೆ, ನನ್ನನ್ನಂತೂ ಬೇಡ,ಅಣ್ಣನನ್ನಾದರೂ ತಮ್ಮ ಷಡ್ಯಂತ್ರದಲ್ಲಿ ಸೇರಿಸಿಕೊಂಡಿದ್ದರೆ, ಅಥವಾ ಆ ವಿಷಯವಾಗಿ ಒಮ್ಮೆ ಕೇಳಿದ್ದರೆ, ಈ ಕರ್ಮಭೋಗದಿಂದ ಮುಕ್ತರಾಗುತ್ತಿದ್ದರು. ನೀನು ವಾಗ್ದತ್ತಳೆಂದು ನನಗೂ ನನ್ನ ಅಣ್ಣನಿಗೂ ಗೊತ್ತಿದ್ದು ನಿಮ್ಮ ಪರಸ್ಪರ ಪ್ರಣಯ ಬಂಧನದ ವಿಷಯವನ್ನು ನಾವು ಕೇಳಿದ್ದೆವು. ಅದನ್ನು ಬೇರೊಬ್ಬರು ತಪ್ಪಿಸಲಾರರೆಂದೂ, ತಪ್ಪಿಸುವುದು ಅವಾಂಛನೀಯವೆಂದೂ ನಾವು ತಿಳಿದಿದ್ದೆವು.''

"ನಿಮಗೆ ಇವೆಲ್ಲಾ ಹೇಗೆ ತಿಳಿಯಿತು? ಯಾರಿಂದ ಕೇಳಿದಿರಿ?"

"ನಿಮ್ಮ ತಂದೆಯ ಬಾಯಿಂದ. ನಾವು ಇಲ್ಲಿಗೆ ಬಂದ ದಿನವೆ ರಾಯ್‌ಮಹಾಶಯರು ನಿಮ್ಮ ಪ್ರೇಮ, ವಾಗ್ದಾನ, ಆಗಲಿರುವ ವಿವಾಹ ಸಂಬಂಧ ಮುಂತಾದುವುಗಳನ್ನು ಮನಮುಟ್ಟುವಂತೆ ನಮ್ಮ ಇಬ್ಬರ ಕಿವಿಗಳಲ್ಲಿ ಸುಧಾ ವರ್ಷವನ್ನು ಮಾಡಿದ್ದರು. ಇಲ್ಲ, ಇಲ್ಲ. ಸಿಟ್ಟುಮಾಡಬೇಡ ವಂದನ ನಿಮ್ಮ ತಂದೆ ಬಹಳ ಒಳ್ಳೆಯ ಸ್ವಭಾವದವರು. ಮನಸ್ಸಿನಲ್ಲಾದ ಆನಂದೋದ್ರೇಕದ ಈ ಶುಭ ಸಮಾಚಾರವನ್ನು ತಮ್ಮ ಆತ್ಮೀಯರಲ್ಲಿ ಹೇಳದೆ ಮರೆಮಾಚಬೇಕೆಂದು ಅವರು ಯೋಚಿಸಲಿಲ್ಲ."

ವಂದನ ಸ್ವಲ್ಪಹೊತ್ತು ಸುಮ್ಮನೆ ಕುಳಿತಿದ್ದಳು. ಅನಂತರ "ಏನು, ಅದಕ್ಕೋಸ್ಕರ ಮೈತ್ರೇಯೀ ದೇವಿಯನ್ನು ನೋಡಿಬರಲು ನಿಮ್ಮಣ್ಣ ನಮ್ಮನ್ನು ಕಳುಹಿಸಿದರೊ?" ಎಂದು ಕೇಳಿದಳು.

"ಅದು ನನಗೆ ಸರಿಯಾಗಿ ಗೊತ್ತಿಲ್ಲ. ಕಾರಣ ಇಷ್ಟೆ. ನಮ್ಮ ಅಣ್ಣನ ಮನಸಿನಲ್ಲಿರುವುದನ್ನು ದೇವತೆಗಳೂ ಸಂಪೂರ್ಣವಾಗಿ ಅರಿಯಲಾರರು. ಅವರ ವಿಚಾರದಲ್ಲಿ ಮೈತ್ರೇಯಿದೇವಿಯು ಸರ್ವಗುಣಸಂಪನ್ನೆ ಎಂದು ನನಗೆ ಗೊತ್ತು. ನಿಜವಾಗಿಯೂ ಅವಳು ಮಹಾಮಾನನೀಯ ಧನಿಕ ಮುಖರ್ಜಿ ಪರಿವಾರದ ಅಧಿದೇವತೆಯಾಗಲಾರದ ಅಯೋಗ್ಯಳಲ್ಲ.

"ಮೈತ್ರೇಯಿದೇವಿಯ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?"

ಈ ಮನೆಯಲ್ಲಿ ನಾನು ಅನ್ಯಪುರುಷ–ಆಗುಂತಕ. ತಾಯಿ ಮತ್ತು ಅಣ್ಣ ಇವರೇ ಪ್ರಥಮ ಮತ್ತು ದ್ವಿತೀಯ ಪುರುಷರು. ಅವರು ಯಾವುದೋ ಒಂದು ಹುಡುಗಿಗೆ ನನ್ನನ್ನು ಗಂಟುಹಾಕುತ್ತಾರೆ. ನಾನು ಅದೇ ಹುಡುಗಿಯ ಕುತ್ತಿಗೆಗೆ ನೇತುಬಿದ್ದು ಪರಮಾನಂದದಿಂದ ತೂಗಾಡುತ್ತಿರುತ್ತೇನೆ. ಇದೇ ಈ ಮನೆಯ ಸನಾತನ ಸಂಪ್ರದಾಯ. ಇದರಲ್ಲಿ ಪರಿವರ್ತನೆ ಅಸಂಭವ."

ಅವನ ವಾಗ್ವೈಖರಿಯನ್ನು ಕೇಳಿ ವಂದನ ನಕ್ಕುಬಿಟ್ಟಳು. "ಒಂದು ಪಕ್ಷ ಮೈತ್ರೇಯಿಗೆ ಬದಲು ವಂದನಳಿಗೆ ನಿಮ್ಮನ್ನು ಗಂಟುಹಾಕಿದರೆ ಆಗ?'' ಎಂದು ಛೇಡಿಸಿದಳು.

ದ್ವಿಜದಾಸನು ತನ್ನ ಅದೃಷ್ಟವನ್ನು ಹಳಿಯುವವನಂತೆ ಹಣೆಯ ಮೇಲೆ ಕೈಯಿಡಿದು "ಆ ಆಶೆ ವ್ಯರ್ಥ. ದುಷ್ಟ ರಾಹುವು ಪೂರ್ಣಚಂದ್ರನನ್ನು ಎಂದೋ ನುಂಗಿ ಬಿಟ್ಟಿದ್ದಾನೆ. ಎಲ್ಲಿಂದಲೋ ಒಬ್ಬ ಸುಧೀರ ಚಂದ್ರನು ಹಾರಿಬಂದು ಸೌಧ ಪ್ರಸಾದಗಳಿಗೆ ಬೆಂಕಿ ಇಟ್ಟನು; ದ್ವಿಜದಾಸನ ಸ್ವರ್ಣ ಲಂಕೆಯು ಕಣ್ಣೆದುರಿಗೆ ಸುಟ್ಟು ಭಸ್ಮವಾಯಿತು. ಎಲೌ ಕಲ್ಯಾಣಿ, ಈ ಪ್ರಸಂಗವನ್ನು ಇಲ್ಲಿಗೆ ಮುಗಿಸು. ಈ ಹತಭಾಗ್ಯನ ಹೃದಯವು ವಿದೀರ್ಣವಾಗುತ್ತದೆ" ಎಂದು ಹೇಳಿದನು.

ಅವನ ನಾಟಕೀಯ ಶೈಲಿಯನ್ನು ಕಂಡು ವಂದನ ಪುನಃ ನಕ್ಕಳು. "ದ್ವಿಜಬಾಬು, ಸ್ವರ್ಣಲಂಕೆಯು ಇನ್ನೂ ಪೂರ್ಣವಾಗಿ ಭಸ್ಮವಾಗಿ ಆಶೋಕವನವು ಉಳಿದಿತ್ತು. ಆದುದರಿಂದ ಹೃದಯವು ವಿದೀರ್ಣವಾಗಿದೆ ಉಳಿಯಲೂ ಬಹುದು" ಎಂದು ಹೇಳಿದಳು.

ಅದಕ್ಕೆ ದ್ವಿಜದಾಸನು ತಲೆಯಲ್ಲಾಡಿಸುತ್ತ "ನೋಡು, ಇಂತಹ ಆಶ್ವಾಸನದಿಂದ ಏನೂ ಪ್ರಯೋಜನವಿಲ್ಲ. ಶ್ರೀ ರಾಮಚಂದ್ರನ ಅದೃಷ್ಟ ಗಟ್ಟಿ. ನಾನು ಹತಭಾಗ್ಯನೂ ಸರ್ವವಾದಿಸಮ್ಮತನೂ ಆದ ದ್ವಿಜದಾಸ. ನನ್ನ ಈ ಸುಡುಗಾಡು ಅದೃಷ್ಟದಿಂದ ಸಕಲ ಆಶೆ ಆಕಾಂಕ್ಷೆಗಳೂ ಸುಟ್ಟು ಬೂದಿಯಾಗಿವೆ—ಇನ್ನು ಖಂಡಿತ ಅವು ಉಳಿಯಲಾರವು." ಎಂದನು.

"ಇಲ್ಲ. ಇನ್ನೂ ಸುಟ್ಟು ಬೂದಿಯಾಗಿಲ್ಲ."

"ಏಕೆ? ಬೂದಿಯಾಗಿಲ್ಲವೆ?"

"ಯಾವ ಆಶೆಯೂ ಸುಟ್ಟು ಬೂದಿಯಾಗಿಲ್ಲ. ದ್ವಿಜದಾಸನದು ಹಾಳು ಅದೃಷ್ಟವೆಂದರೂ ವಂದನಳ ಅದೃಷ್ಟವೇನೂ ಹಾಳಾಗಿಲ್ಲವಲ್ಲ. ನನ್ನ ಅದೃಷ್ಟವನ್ನು ಸುಟ್ಟು ಬೂದಿಮಾಡುವ ಶಕ್ತಿ ಆ ಸುಧೀರನಲ್ಲೇ ಅಲ್ಲ, ಪ್ರಪಂಚದಲ್ಲಿ ಯಾರಲ್ಲಿಯೂ ಇಲ್ಲ. ನಿಮ್ಮ ಅಮ್ಮನಲ್ಲಿ, ಅಣ್ಣನಲ್ಲಿ ಅಥವಾ ಬೇರೆ ಯಾರಲ್ಲಿಯೋ ಆಗಲಿ ಖಂಡಿತ ಇಲ್ಲ" ಎಂದು ವಂದನ ವಾದಿಸಿದಳು. ಅವಳ ಮಾತಿನ ಘೋರಣೆ ಖಚಿತವಾಗಿತ್ತು.

ಅವಳ ಶಾಂತ ಹಾಗೂ ದೃಢ ಕಂಠಸ್ವರವನ್ನು ಕೇಳಿ ದ್ವಿಜದಾಸನು ದಂಗುಬಡಿದು ಎತ್ತಲೋ ನೋಡುತ್ತ ಕುಳಿತುಬಿಟ್ಟನು.

"ಏಕೆ ಸುಮ್ಮನೆ ಕುಳಿತು ಬಿಟ್ಟಿರಿ?"—ವಂದನ ಕೇಳಿದಳು. ಮತ್ತೆ ಮೌನ.

"ನನ್ನ ಮನಸ್ಸನ್ನು ತಿಳಿದೂ ತಿಳಿದೂ ನನಗೆ ಮೋಸ ಮಾಡಬೇಕೆಂದಿರುವಿರಾ?"

"ಇಲ್ಲ, ನಿನಗೆ ಮೋಸ ಮಾಡುತ್ತಿಲ್ಲ. ಮಾಡಬೇಕೆಂದು ಯೋಚಿಸಿಯೂ ಇಲ್ಲ. ಹೀಗೇ ನಡೆದಿರಬೇಕೆಂದು ಊಹಿಸಿದ್ದೆ; ಆದರೆ ಸಂದೇಹ ಮಾತ್ರ ಉಳಿದಿತ್ತು."

"ಸಂದೇಹ ಇನ್ನೂ ಉಳಿದಿರಲಿ" ವಂದನ ಹೇಳಿದಳು. ಅನಂತರ ಕ್ಷಣ ಕಾಲ ಸುಮ್ಮನಿದ್ದು "ಆದರೆ ನನಗೇನೂ ಸಂದೇಹವಿರಲಿಲ್ಲ" ಎಂದು ಪ್ರಾರಂಭಿಸಿ—"ಬಲರಾಮಪುರದಿಂದ ಸಿಟ್ಟುಮಾಡಿಕೊಂಡು ನಾನು ಹೊರಟು ಬಂದ ದಿನ ನೀವು ಮಹಡಿಯ ಮೇಲೆ ಕಿಟಕಿಯ ಹತ್ತಿರ ಒಬ್ಬರೇ ನಿಂತು ನನ್ನನ್ನು ಸಂಕೇತದಿಂದಲೇ ಬೀಳ್ಕೊಟ್ಟಿರಿ. ಕ್ಷಣ ಮಾತ್ರದ ಪರಿಚಯವಾದಾಗ್ಯೂ ಅದು ನನಗೆ ಅರ್ಥವಾಗಲಿಲ್ಲವೆಂದು ತಿಳಿದಿರಾ?" ಎಂದು ಪ್ರಶ್ನಿಸಿದಳು.

ದ್ವಿಜದಾಸನು ಸುಮ್ಮನೆ ಅವಳ ಮುಖವನ್ನು ನೋಡುತ್ತಿದ್ದನು. ಇದನ್ನು ಕಂಡು ವಂದನ "ಈಗಲಾದರೂ ಸಂದೇಹವು ಬಯಲಾಯಿತೇ?" ಎಂದು ಕೇಳಿದಳು.

"ಬಹುಶಃ ಇನ್ನೂ ಕೊಂಚ ಪ್ರಯತ್ನಪಟ್ಟು ದಬ್ಬಿದರೆ ಅದು ದೂರವಾಗಬಹುದು. ನನ್ನ ಸಂಶಯವನ್ನು ಹೋಗಲಾಡಿಸುವುದಕ್ಕೆ ಈ

ಪದ್ಧತಿಯನ್ನು ಅನುಸರಿಸಬೇಕೆ ಎಂದು ಯೋಚಿಸುತ್ತಿದ್ದೇನೆ."

"ಆದರೆ ಎಲ್ಲವನ್ನೂ ತಿಳಿದಿದ್ದರೂ ಏನೂ ತಿಳಿಯದವರಂತೆ ವರ್ತಿಸುವವರಿಗೆ ಹೇಗೆ ತಿಳಿಯಪಡಿಸಬೇಕೆಂಬುದು ನನಗೆ ಗೊತ್ತಿಲ್ಲ. ಅದನ್ನು ಈಗ ಮೊದಲು ಕಲಿಯಬೇಕಾಗಿದೆ."

"ಅಂಥವನು ನಾನಲ್ಲ. ಅಮ್ಮ ಬೇಕಾದರೆ ಹೌದು. ಅವರಿಗೆ ತಿಳಿಯುವಂತೆ ಮಾಡುವುದು ಹೇಗೆ?"

"ಅಮ್ಮ ಸ್ವತಃ ತಿಳಿದುಕೊಳ್ಳುತ್ತಾರೆ. ನನ್ನನ್ನು ಅವರು ಮಗಳಂತೆ ಪ್ರೀತಿಸುತ್ತಾರೆ. ಈ ದಿನ ಎಷ್ಟೇ ವ್ಯಾಕುಲರಾಗಿ ಅವರು ಹೊರಟು ಹೋಗಿರಲಿ ಅವರು ಯಾವುದನ್ನು ಊಹಿಸಿಕೊಂಡು ಹೊರಟುಹೋಗಿದ್ದಾರೋ ಅದು ಸುಳ್ಳು ಎಂದು ಅಮ್ಮನಿಗೆ ತಿಳಿಸಲಾರದೆ ಹೋದರೆ ಇನ್ನು ನಾನು ಏನು ತಾನೆ ಮಾಡಬಲ್ಲೆ? ಒಂದಲ್ಲ ಒಂದುದಿನ ಇದನ್ನು ಅವರಿಗೆ ಖಚಿತವಾಗಿ ತಿಳಿಸಿಯೇ ತೀರಿಸುತ್ತೇನೆಂಬ ಭರವಸೆ ನನಗಿದೆ. ಇದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ" ಎಂದು ಹೇಳುತ್ತಿರುವಾಗ ಅವಳ ದನಿಯು ಭಾರವಾಯಿತು. ಕಣ್ಣಿನಲ್ಲಿ ನೀರು ಉಕ್ಕಿ ಬಂದಿತು.

ಇದು ನಿಜವೂ ಸುಳ್ಳೊ ಎಂಬ ಸಂಶಯ ದ್ವಿಜದಾಸನಿಗೆ ಇನ್ನೂ ಹೋಗಿರಲಿಲ್ಲ. ಆದರೆ ವಂದನಳ ಕಣ್ಣೀರೂ ಮತ್ತೆ ಕಂಠಸ್ವರವೂ ಅವನ ಸಂದೇಹ ನಿವಾರಣೆ ಮಾಡಿದವು. ಇದು ಕೇವಲ ಪರಿಹಾಸ್ಯವಲ್ಲವೆಂದು ಅರಿತನು. ಆಗ ಅವನು ಆಶ್ಚರ್ಯ ದುಃಖ ಇವುಗಳ ದ್ವಂದ್ವಾತ್ಮಕ ಅನುಭೂತಿಯಿಂದ ವಿಚಿತ್ರವಾಗಿ ತೋರಿ ಬರುತ್ತಿದ್ದ ಕಂಠಸ್ವರದಲ್ಲಿ "ಇದೇನು ವಂದನ! ಅಳುತ್ತಿದ್ದೀಯಾ?" ಎಂದು ಪ್ರಶ್ನಿಸಿದನು.

ವಂದನ ಇದಕ್ಕೆ ಉತ್ತರ ಕೊಡದೆ ಸುಮ್ಮನೆ ಕಣ್ಣೀರನ್ನು ಒರೆಸಿಕೊಂಡು ಬೇರೆ ಕಡೆ ದೃಷ್ಟಿ ತಿರುಗಿಸಿದಳು.

ಬಹಳ ಹೊತ್ತಿನವರೆಗೆ ದ್ವಿಜದಾಸನೂ ಮೌನವಾಗಿದ್ದನು. ಅನಂತರ ಮೆಲುದನಿಯಲ್ಲಿ "ವಂದನ ಇದರಲ್ಲಿ ಸುಧೀರನ ತಪ್ಪು ಏನಿದೆ ಹೇಳು? ಅವನು ನಿನಗೇನು ಮಾಡಿದ?" ಎಂದು ಕೇಳಿದನು.

ವಂದನ ಮುಖವೆತ್ತಿ ನೋಡಲಿಲ್ಲ. "ಈಗ ತಪ್ಪಿನ ವಿಚಾರ ಏಕೆ? ಅವನಿಗೆ ಪ್ರತೀಕಾರವನ್ನು ಮಾಡಬೇಕೆಂದು ನಾನೇನು ಕುಳಿತಿಲ್ಲವಲ್ಲ."

ಎಂದು ಉತ್ತರ ಕೊಟ್ಟಳು.

ಅದಕ್ಕೆ ಏನು ಬದಲು ಹೇಳಬೇಕೆಂದು ದ್ವಿಜದಾಸನಿಗೆ ಗೊತ್ತಾಗದೇ ಸುಮ್ಮನಿದ್ದನು. ಸ್ವಲ್ಪ ಹೊತ್ತು ಹಾಗೆಯೆ ಕಳೆಯಿತು. ಅನಂತರ ದ್ವಿಜದಾಸನೇ ಮಾತಿಗೆ ಮೊದಲು ಮಾಡಿದನು. "ಅವರೂ ಸುಧೀರನು ನಿಮ್ಮ ಸಮಾಜದವನು. ಮುಖರ್ಜಿ ಪರಿವಾರದ ಆಚಾರ ವಿಚಾರಗಳು ನಿಮ್ಮಿಂದ ಭಿನ್ನವಾದವುಗಳು. ನಮ್ಮ ಶಿಕ್ಷಣ, ಸಂಸ್ಕಾರ, ಅಭ್ಯಾಸ ಇವೂ ಅಷ್ಟೆ. ಇವು ನಿಮಗೆ ಎಂದಿಗೂ ಸರಿಹೋಗಲಾರವು. ಅಂದಮೇಲೆ ತಿಳಿದೂ ತಿಳಿದೂ ನೀನು ಈ ಕಾರಾಗೃಹದಲ್ಲಿ ಏಕೆ ಪ್ರವೇಶ ಮಾಡಬೇಕೆಂದಿದ್ದೀಯಾ? ನನಗೋಸ್ಕರವೆ? ಹಾಗಿದ್ದ ಪಕ್ಷಕ್ಕೆ ಇಂದಲ್ಲ ನಾಳೆ ನಿನ್ನ ತಪ್ಪನ್ನು ನೀನು ಅರಿತಾಗ ಬಹಳ ಪಶ್ಚಾತ್ತಾಪ ಪಡಬೇಕಾಗುತ್ತದೆ. ನನ್ನನ್ನು ನೀನು ಏನೆಂದು ಭಾವಿಸಿರುವಿಯೋ ನನಗೆ ಗೊತ್ತಿಲ್ಲ. ಆದಾಗ್ಯೂ ಇಷ್ಟು ಹೇಳಬಯಸುತ್ತೇನೆ. ನನ್ನ ಅತ್ತಿಗೆ, ಅಮ್ಮ, ಅಣ್ಣ, ಮನೆ ದೇವರು, ನಮ್ಮ ಅತಿಥಿಗಳು, ನಮ್ಮ ಆತ್ಮೀಯರು ಮತ್ತು ಇತರ ಸ್ವಜನರು—ಇವರುಗಳಂತೆ ನಾನೂ ಒಬ್ಬ. ಇವರುಗಳಿಂದ ಬೇರ್ಪಡಿಸಿ ನನ್ನನ್ನು ನೀನು ಪಡೆಯಲಾರೆ. ಇವೆಲ್ಲವನ್ನೂ ನೀನು ಸಹಿಸಬಲ್ಲೆಯಾ?"

"ಸಹಿಸಲಿಕ್ಕೆ ಆಗದಿದ್ದರೆ ಸಾಯುವ ಮಾರ್ಗವಂತೂ ಇದ್ದೇ ಇದೆ. ಅದನ್ನೇನು ಯಾವ ಕಾರಾಗೃಹವೂ ಬಂಧಿಸಲಾರದು. ನೀವೂ ಕೂಡ ನನ್ನನ್ನು ಏನೆಂದು ಭಾವಿಸಿರುವಿರೋ ನಾನರಿಯೆ. ಅವರ ಅತ್ತೆ, ಅತ್ತಿಗೆ, ಭಾವ, ಮನೆದೇವರು ನಮ್ಮ ಅತಿಥಿಶಾಲೆ, ಸ್ವಜನರು, ಆತ್ಮೀಯರು ಮತ್ತು ಸಮಾಜಗಳಿಂದ ಬೇರ್ಪಡಿಸಿ ನನ್ನ ಪತಿಯನ್ನು ನಾನು ಹೊಂದಬೇಕೆಂದು ಎಂದೆಂದಿಗೂ ಯೋಚಿಸುವುದಿಲ್ಲ. ಎಲ್ಲರೊಡನೊಂದಾಗಿ ನನಗೂ ಪತಿಯಾಗಿ ಇರಲೆಂದು ಮಾತ್ರ ನಾನು ಬಯಸುತ್ತೇನೆ ಅಷ್ಟೆ." ದ್ವಿಜದಾಸನಿಗೆ ಪರಮ ಆಶ್ಚರ್ಯವಾಯಿತು. "ವಂದನ, ಈ ನಿನ್ನ ವಿಚಾರ ನಿಮ್ಮ ಸಮಾಜದ್ದಂತೂ ಅಲ್ಲ. ಅದನ್ನು ನೀನು ಯಾರಿಂದ ಕಲಿತೆ?"

"ಯಾರೂ ನನಗೆ ಅದನ್ನು ಕಲಿಸಲಿಲ್ಲ. ದ್ವಿಜಬಾಬು, ಅಮ್ಮನ ಸಹವಾಸದಲ್ಲಿದ್ದು, ಮುಖರ್ಜಿ ಮಹಾಶಯರನ್ನು ಕಣ್ಣಾರೆ ಕಂಡಾಗ ಈ ವಿಚಾರಗಳು ತಾವಾಗಿಯೆ ನನಗೆ ಗೋಚರವಾದುವು. ಈ ಮನೆಯಲ್ಲಿ

ಎಲ್ಲಾ ವಿಷಯದಲ್ಲಿಯೂ ತಾಯಿಯೇ ಶ್ರೇಷ್ಠಳು. ಅವರ ಅನಂತರ ಮುಖರ್ಜಿಯವರು, ಅನಂತರ ಅಕ್ಕ, ಆಮೇಲೆ ನೀವು—ಇಲ್ಲಿ ಅನ್ನ ದಳಿಗೂ ಒಂದು ವಿಶಿಷ್ಟ ಸ್ಥಾನವಿದೆ. ಈ ಮನೆಯಲ್ಲಿ ನನಗೇನಾದರೂ ಸ್ಥಾನ ದೊರೆಯುವುದಾದರೆ ಅದು ನಿಮ್ಮೆಲ್ಲರ ಸ್ಥಾನಕ್ಕಿಂತ ಕೊನೆಯದೆಂದು ನನಗೆ ಗೊತ್ತು. ಅದು ಅಸಂಗತವಾದುದೆಂದು ನನಗೆ ತೋರುತ್ತಿಲ್ಲವಲ್ಲ."

ಈ ಉತ್ತರವು ದ್ವಿಜದಾಸನಿಗೆ ಎಷ್ಟು ಚೇತೋಹಾರಿಯಾಗಿ ತೋರಿತೋ ಅಷ್ಟೂ ಅವನ ಮನಸ್ಸಿನ ದುಃಖವನ್ನು ಹೆಚ್ಚಿಸಿತು. ವಂದನಳ ಮನಸ್ಸಿನಲ್ಲಿರುವುದನ್ನು ಈ ರೀತಿ ತಿಳಿದುಕೊಳ್ಳುವುದು ಸರಿಯಲ್ಲ—ಈ ಮಾತನ್ನು ಇಲ್ಲಿಗೆ ನಿಲ್ಲಿಸಬೇಕು ಎಂದುಕೊಂಡು ಅವನು ಪ್ರಯತ್ನಪೂರ್ವಕವಾಗಿ ಕಲ್ಲೆದೆಮಾಡಿಕೊಂಡು ಉತ್ತರ ಕೊಟ್ಟನು. "ಅಮ್ಮನಿಗೆ ನಮ್ಮ ಈ ವಿಚಾರಗಳನ್ನು ತಿಳಿಸುವುದರಿಂದ ಏನೂ ಪ್ರಯೋಜನವಿಲ್ಲ. ಅವರು ನಿನ್ನನ್ನು ಮಗಳಂತೆ ಪ್ರೀತಿಸುತ್ತಾರೆಂದು ಗೊತ್ತು. ಆದುದರಿಂದಲೇ ಅವರು ನಿನ್ನನ್ನು ಈ ಮನೆಯ ಚಿಕ್ಕ ಸೊಸೆಯಾಗಿ ತಂದುಕೊಳ್ಳಬೇಕೆಂದು ಎಣಿಸಿದ್ದರು. ನಿಮ್ಮಿಬ್ಬರ—ಅಕ್ಕತಂಗಿಯರ ಕೈಯಲ್ಲಿ ತನ್ನ ಇಬ್ಬರು ಮಕ್ಕಳನ್ನು ಇಟ್ಟು ಕೈಲಾಸಯಾತ್ರೆಗೆ ಹೊರಟುಹೋಗಬೇಕೆಂದಿದ್ದರು. ತೀರ್ಥಯಾತ್ರೆಯ ದುರ್ಗಮ ಮಾರ್ಗದಲ್ಲಿ ಒಂದು ವೇಳೆ ಏನಾದರೂ ಅಪಘಾತವಾಗಿ ಹಿಂತಿರುಗಿ ಬರಲು ಅವಕಾಶವಿಲ್ಲದೆ ನೇರವಾಗಿ ಕೈಲಾಸಕ್ಕೇ ಹೊರಡಬೇಕಾಗಿ ಬಂದಿದ್ದರೂ ಅವರು ನಿಶ್ಚಿಂತರಾಗಿ ಸಾಯುತ್ತಿದ್ದರು. ಈ ಬೃಹದ್‌ಗೃಹವನ್ನು ಏನೊಂದು ಅಪಾಯವಿಲ್ಲದ, ಮೋಸಕ್ಕೆ ಎಡೆಯಿಲ್ಲದ ವ್ಯಕ್ತಿಗಳ ವಶಕ್ಕೆ ವಹಿಸಿಕೊಟ್ಟಿರುವ ಧೈರ್ಯ ಅವರಿಗೆ ಸಹಾಯಕವಾಗುತ್ತಿತ್ತು. ಈಗ ಹಾಗೆ ಆಗಲು ಸಾಧ್ಯವಿಲ್ಲ. ಅವರ ಭಾಗಕ್ಕೆ ವಾಗ್ದಾನವೆಂದರೂ ಒಂದೆ, ಸಂಪ್ರದಾನವೆಂದರೂ ಒಂದೆ. ಪ್ರೇಮ ಅಥವ ಪ್ರೀತಿಯಿಂದ ಯಾರನ್ನು ವರಿಸಲು ಒಪ್ಪಿರುವಿಯೋ ಅವನೇ ನಿನ್ನ ಪತಿ. ವಿವಾಹದ ಮಂತ್ರಗಳನ್ನು ಇನ್ನೂ ಹೇಳಿಲ್ಲ; ಆದುದರಿಂದ ನೀನು ಅವನನ್ನು ತ್ಯಜಿಸಬಹುದು. ಆದರೆ ದಯಾಮಯಿಯ ಮಗ ಆ ಶೂನ್ಯಸ್ಥಾನವನ್ನು ಎಂದಿಗೂ ಅಲಂಕರಿಸಲಾರ."

ಇದನ್ನು ಕೇಳಿ ಮಿತಿಮೀರಿ ದುಃಖವಾದುದರಿಂದ ವಂದನಳ ಮುಖ

ಸಪ್ಪಗಾಯಿತು.—"ಏನು ದ್ವಿಜಬಾಬುಗಳೆ, ಅಮ್ಮ ಈ ವಿಚಾರವನ್ನೆಲ್ಲ ಹೇಳಿ ಹೋದರೆ?" ಎಂದು ಪ್ರಶ್ನಿಸಿದಳು.

"ಅಮ್ಮ ಈ ರೀತಿ ಹೇಳಿದರೆ ಆಶ್ಚರ್ಯವೇನೂ ಇಲ್ಲ. ಸುಧೀರನು ನಮ್ಮ ಕುಲಗೋತ್ರದವನಲ್ಲವೆಂಬ ವ್ಯಥೆ ಅವರನ್ನು ಬಾಧಿಸುತ್ತಿದೆ ಎಂದು ಅತ್ತಿಗೆಯ ಬಾಯಿಂದ ಕೇಳಿದೆ.—ನೀನು ಹೇಗೂ ಕುಲಗೋತ್ರವನ್ನು ಲೆಕ್ಕಿಸುವವಳಲ್ಲ."

"ಇದು ನಿಮ್ಮ ಅಭಿಪ್ರಾಯವೂ ಹೌದೊ?"

"ಇದು ನನ್ನ ಅಭಿಮತ ಹೌದೊ ಅಲ್ಲವೊ, ಎಂಬುದನ್ನು ಕಟ್ಟಿಕೊಂಡು ಏನಾಗಬೇಕಾಗಿದೆ? ಈ ಮನೆಯಲ್ಲಿ ನಾನೊಬ್ಬ ಥರ್ಡ್‌ಪರ್ಸನ್ ಅನ್ಯವ್ಯಕ್ತಿ ಎಂದು ಮೊದಲೆ ಹೇಳಿದ್ದೇನೆ."

ರಾಯ್ ಮಹೋದಯರ ಊಟಕ್ಕೆ ಹೊತ್ತಾಗಿತ್ತು. ವಂದನ ಎದ್ದು ನಿಂತಳು. ಕೋಣೆಯಿಂದ ಹೊರಡುವುದಕ್ಕೆ ಮುಂಚೆ "ದ್ವಿಜಬಾಬೂ, ನಮ್ಮ ತಂದೆಯವರ ರಜ ತೀರಿತು. ನಾಳೆ ಅವರು ಬೊಂಬಾಯಿಗೆ ಹೊರಡುತ್ತಾರೆ, ನಾನೂ ಅವರೊಡನೆ ಹೊರಟು ಹೋಗಲೆ?" ಎಂದು ಕೇಳಿದಳು.

"ಇದಕ್ಕೆ ಏನು ಹೇಳಬೇಕು, ವಂದನ? ನನ್ನನ್ನು ಮಾತ್ರ ತಪ್ಪು ತಿಳಿಯಬೇಡ. ನೀನು ಹೊರಟು ಹೋದ ಮೇಲೆ ನಿನ್ನ ಪರವಾಗಿ ಈ ಎಲ್ಲಾ ವಿಚಾರಗಳನ್ನೂ ಅಮ್ಮನಿಗೆ ತಿಳಿಸುತ್ತೇನೆ.-ಖಂಡಿತ ನಾಚಿ ಹಿಂದೆಗೆಯುವುದಿಲ್ಲ. ಅನಂತರ ನನ್ನ ಪಾಲಿಗೆ ಉಳಿಯುವುದು ಎರಡೇ—ಇಂದಿನ ಸಾಜೆಯ ಸವಿನೆನಪು ಮತ್ತು 'ವಂದೇ ಮಾತರಂ' ಎನ್ನುವ ಮಂತ್ರ ಅಷ್ಟೇ" ಎಂದು ದ್ವಿಜದಾಸನು ಹೇಳಿದನು.

ವಂದನ ಇದಕ್ಕೆ ಏನೂ ಉತ್ತರ ಕೊಡದೆ ಹೊರಕ್ಕೆ ಹೊರಟು ಹೋದಳು.

## ೧೫

ತನ್ನ ಕೋಣೆಗೆ ಹಿಂತಿರುಗಿ ಬಂದಮೇಲೆ ವಂದನಳಿಗೆ ಬಹಳ ಗ್ಲಾನಿಯುಂಟಾಯಿತು. ಅಂದೆಂತಹ ಉನ್ಮಾದ! ತಾನೇ ಭಿಕ್ಷುಕಿಯಂತೆ ಹೋಗಿ ಹೀಗೆ ಮಾನಮರ್ಯಾದೆ ಬಿಟ್ಟು ತನ್ನ ಹೃದಯ ಬಿಚ್ಚಿ ಹೇಳಿಕೊಳಬಹುದೆ? ಅಲ್ಲ, ದ್ವಿಜದಾಸ ಗಂಡಸು. ಅಷ್ಟಾದರೂ ಎಷ್ಟು ಗಂಭೀರ

ನಾಗಿದ್ದನು. ತನ್ನ ಅಂತರ್ಯವನ್ನು ಬಾಯಿಬಿಟ್ಟು ಕೊನೆಗೂ ಹೇಳ ಲಿಲ್ಲವಲ್ಲಾ! ಅವನ ಮುಖಭಾವದಲ್ಲಿ ಆಗ್ರಹವಾಗಲಿ, ಉಲ್ಲಾಸವಾಗಲಿ ಇರಲಿಲ್ಲ. ಅವನು ಆಶೆಯನ್ನೂ ತೋರಲಿಲ್ಲ, ಕೊನೆಗೆ ನಾಲ್ಕು ಸಮಾಧಾ ನದ ಮಾತನ್ನೂ ಸಹ ಹೇಳಲಿಲ್ಲ. ಇದಕ್ಕೆ ಬದಲು ಹಾಸ್ಯ ಅಥವಾ ಕುಚೋದ್ಯಕ್ಕೆಂದೇ ತನ್ನನ್ನು ತಾನು Third Person ಎಂದುಕೊಳ್ಳು ತ್ತಿದ್ದ. ಅವನ ಇಚ್ಛೆ ಅನಿಚ್ಛೆಗಳಿಗೆ ಈ ಮನೆಯಲ್ಲಿ ಬೆಲೆ ಇಲ್ಲವಂತೆ! ತಾಯಿಯ ಹೆಸರಿನಲ್ಲಿ ವಾಗ್ದಾನ ಸಂಪ್ರದಾನ ಎರಡೂ ಒಂದೇ ಎಂದು ಬೇರೆ ಹೇಳಿದ. ನಿರಪರಾಧಿಯಾದ ಸುಧೀರನ ರಿಕ್ತಸ್ಥಾನದಲ್ಲಿ ದಯಾಮಯಿಯ ಮಗನು ಎಂದಿಗೂ ಆರೂಢನಾಗನೆಂದು ತಿಳಿಸಿದ. ಇಷ್ಟಕ್ಕೇ ಅಪ ಮಾನದ ಕೊಡ ತುಂಬಲಿಲ್ಲ. ತನ್ನ ಕಣ್ಣಿನಲ್ಲಿ ನೀರು ಉಕ್ಕಿ ಬಂದು ದನ್ನು ಕಂಡು, ಕರುಣೆಯಿಂದ ಈ ನಿರ್ಲಜ್ಜ ವರ್ತನೆಯ ತನ್ನ ಕತೆಯನ್ನು ಅಮ್ಮನಿಗೆ ಅರಿಕೆಮಾಡುವುದಾಗಿ ಬೇರೆ ಹೇಳಿದ.

ಮತ್ತೆ ಇದು ಇಲ್ಲಿಗೆ ಮುಗಿಯಿತೆ? ದ್ವಿಜದಾಸನ ಮಾತುಗಳಿಗೆ ಪ್ರತ್ಯುತ್ತರವನ್ನು ಕೊಡುತ್ತ ಈ ಮನೆಯಲ್ಲಿ ಅವರವರು ಅವರವರ ಸ್ಥಾನ ದಲ್ಲಿಯೇ ಇರಲಿ, ತಾನು ಮಾತ್ರ ಎಲ್ಲರಿಗಿಂತಲೂ ನೀಚ ಸ್ಥಾನವನ್ನು ಪಡೆಯುವುದಾದರೂ ಅಡ್ಡಿ ಇಲ್ಲ ಎಂದು ಸ್ವತಃ ಹೇಳಿದ್ದಳು. ಇನ್ನು ಮುಂದೆ ಅವಳಿಂದ ಯೋಚಿಸಲಾಗಲಿಲ್ಲ. ಕುಳಿನಲ್ಲಿಯೆ ಸ್ತಬ್ಧಳಾಗಿ ಕುಳಿತು ಬಿಟ್ಟಳು. ವಾಸ್ತವವಾಗಿ ಅವಳು ಎಲ್ಲರಿಗಿಂತಲೂ ಕೀಳೆಂದೂ, ಆತ್ಮಹತ್ಯೆ ಯನ್ನು ಮಾಡಿಕೊಂಡರೂ ಈ ಕೀಳ್ತನಕ್ಕೆ ಪ್ರಾಯಶ್ಚಿತ್ತ ಆಗಲಾರದೆಂದೂ ಭಾವಿಸಿದಳು.

ಅಷ್ಟರಲ್ಲಿ ಯಾರೊ ಹೊರಗಿನಿಂದ ರಾಯ್ ಮಹಾಶಯರು ಕರೆಯು ತ್ತಿರುವರೆಂದು ಕೂಗಿ ಹೇಳಿದರು. ಎದ್ದು ತಂದೆಯ ಕೋಣೆಗೆ ಹೋದಳು. ಇಬ್ಬರೂ ನಾಳೆಯೇ ಬೊಂಬಾಯಿಗೆ ಹೊರಟುಬಿಡಬೇಕೆಂದು ಒತ್ತಾಯ ಮಾಡಿ ತಂದೆಯನ್ನು ಒಪ್ಪಿಸಿದಳು. ಮೊದಲು ವಿಪ್ರದಾಸನು ಹಿಂತಿರುಗಿ ಬಂದಮೇಲೆ ಹೊರಟುಬಿಡಬೇಕೆಂದು ಮಾತಾಗಿತ್ತು. ಇದ್ದಕ್ಕಿದ್ದಂತೆ ಹೀಗೆ ಹೊರಟುಬಿಡುವುದು ಅವರಿಗೆ ಸರಿಕಾಣಲಿಲ್ಲ. ರಜ ಇತ್ತು; ಬೇಕಾದರೆ ಇನ್ನೂ ಕೆಲವು ದಿನಗಳು ಇರಬಹುದಾಗಿತ್ತು—ಈ ವಿಷಯದಲ್ಲಿ ಅವರಿಗೆ

ಕೊಂಚವೂ ಅನುಮಾನವಿರಲಿಲ್ಲ. ಆದರೂ ಮಗಳ ಒತ್ತಾಯಕ್ಕೆ ಒಪ್ಪಿಕೊಳ್ಳಲೇಬೇಕಾಗಿಬಂತು.

ಹಾಸಿಗೆಯ ಮೇಲೆ ಮಲಗಿಕೊಂಡಾಗ ವಂದನಳ ಕಣ್ಣಿನಿಂದ ನೀರು ಧಾರೆಯಾಗಿ ಹರಿಯುತ್ತಿದ್ದಿತು. ಯಾವಾಗ ನಿದ್ರೆ ಬಂದಿತೋ ಅವಳಿಗೇ ತಿಳಿಯದು. ಬೆಳಿಗ್ಗೆ ಎದ್ದು ಹಾಸಿಗೆ, ಬಟ್ಟೆಬರೆ ಎಲ್ಲವನ್ನೂ ಕಟ್ಟಿ ಹೊರಡಲು ಸಿದ್ಧಮಾಡಿಟ್ಟುಕೊಂಡು, ಫೋನ್ ಮಾಡಿ ಬರ್ತ್ ರಿಸರ್ವ್ ಮಾಡಿಸಿದಳು. ಬೊಂಬಾಯಿಗೆ ತಂತಿಯನ್ನೂ ಕೊಟ್ಟದ್ದಾಯಿತು. ಅವಳಿಗೆ ಒಂದೊಂದು ನಿಮಿಷವೂ ಒಂದೊಂದು ಯುಗವಾಗಿ ಪರಿಣಮಿಸಿದೆ.

ಆಗ ಇನ್ನೂ ಬೆಳಿಗ್ಗೆ ಒಂಬತ್ತು ಗಂಟೆ. ಕೋಣೆಯಲ್ಲಿ ಕಾಲಿಟ್ಟ ಕೂಡಲೇ ಅನ್ನದ ಆಶ್ಚರ್ಯಚಕಿತಳಾಗಿ "ಏನಮ್ಮ ಇದು ?" ಎಂದು ಕೇಳಿದಳು.

ವಂದನ ಮೈಲಿಗೆ ಬಟ್ಟೆಯನ್ನು ಮಡಿಸಿ ಪೆಟ್ಟಿಗೆಯಲ್ಲಿ ಹಾಕುತ್ತಿದ್ದವಳು, "ನಾವು ಇವತ್ತು ರಾತ್ರಿ ಊರಿಗೆ ಹೊರಡುತ್ತೇವೆ" ಎಂದು ಉತ್ತರ ಕೊಟ್ಟಳು.

"ಇವತ್ತೇ? ನಾಳೆ ಹೊರಡುವುದೆಂದು ಮಾತು ನಡೆದಿತ್ತು."

"ಇಲ್ಲ, ಇವತ್ತೇ ಹೊರಡಬೇಕಾಗಿದೆ." ಎಂದು ಹೇಳುತ್ತಾ ವಂದನ ತನ್ನ ಕೆಲಸದಲ್ಲಿ ತೊಡಗಿದಳು.

ಕೆಲ ನಿಮಿಷ ಸುಮ್ಮನಿದ್ದು ಅನ್ನದ ಹೇಳಿದಳು. "ಅಮ್ಮ, ನೀವು ಏಳಿ. ನಾನು ಸರಿಮಾಡಿಕೊಡುತ್ತೇನೆ. ತಮಗೆ ಕಷ್ಟವಾಯಿತು."

"ಇದೇನು ಮಹಾಕೆಲಸ, ನಿನ್ನ ಕೆಲಸಕ್ಕೆ ನೀನು ಹೋಗಬಹುದು" ಎಂದಳು ವಂದನ. ಅವಳಿಗೆ ಆ ಮನೆಯಲ್ಲಿ ಎಲ್ಲರೂ ಆಗದವರಾಗಿ ತೋರುತ್ತಿದ್ದರು.

ಅನ್ನದ ಸಿಟ್ಟಿನ ಕಾರಣವನ್ನು ಅರಿಯದಿದ್ದರೂ ಏನೋ ಒಂದು ಮರ್ಮದ ಮಾತು ನಡೆದಿರಬೇಕೆಂದು ಊಹಿಸಿದಳು. ಇದ್ದಕ್ಕಿದ್ದಂತೆ ದೊಡ್ಡಪ್ಪನವರು ಹೊರಟುಹೋದರು. ಇವತ್ತು ವಂದನ ಹೀಗೆ ಹಠಾತ್ತನೆ ಹೊರಟುಹೋಗುವ ಸನ್ನಾಹಮಾಡುತ್ತಿದ್ದಾಳೆ. ಸಿಟ್ಟಿಗೆ ಪ್ರತಿಯಾಗಿ ಸಿಟ್ಟುಮಾಡುವ ಸ್ವಭಾವ ಅನ್ನದಳದಲ್ಲ. ಅವಳಲ್ಲಿ ಎಷ್ಟು

ಸ್ವೈರಣೆ ಇದ್ದಿತೋ ಅಷ್ಟೇ ಅವಳು ಸಭ್ಯಳಾಗಿದ್ದಳು. ಸ್ವಲ್ಪ ಕಾಲ ಸುಮ್ಮನೆ ನಿಂತಿದ್ದು ಅನಂತರ "ಅಮ್ಮ ನನ್ನಿಂದ ತಪ್ಪಾಯಿತು. ಈ ದಿನ ಹೊತ್ತಿಗೆ ಸರಿಯಾಗಿ ಏಳಲಾಗಲಿಲ್ಲ." ಎಂದು ಹೇಳಿದಳು. ಅವಳ ದನಿ ಬಹಳ ಮೆತ್ತಗಿತ್ತು.

ವಂದನ ಮುಖ ಎತ್ತಿ ಅವಳಕಡೆ ನೋಡಿದಳು. ಅನಂತರ ಅವಳನ್ನು ಕುರಿತು "ಅನ್ನದ, ಅದಕ್ಕೆ ಕಾರಣ ನಾನು ಕೇಳಲಿಲ್ಲ. ದ್ವಿಜಬಾಬು ಮೇಲಿನ ರೂಮಿನಲ್ಲೇ ಇದ್ದಾರೆ; ಹೋಗಿ ಅವರೆದುರಿಗೆ ಹೇಳಿಕೊ" ಎಂದು ನುಡಿದಳು. ಅಪ್ಪನಿಗೆ ಒಬ್ಬಳೇ ಮಗಳಾದ ಕಾರಣ ಹೆಚ್ಚು ಮುದ್ದಿನಿಂದ ಸಾಕಿದ್ದಾರೆ. ಸಹಿಷ್ಣುತೆ ಅವಳಲ್ಲಿ ಎಳ್ಳಷ್ಟೂ ಇಲ್ಲ; ಅಂದಮಾತ್ರಕ್ಕೆ ಯಾವಾಗಲೂ ನೋಯಿಸುವಂತಹ ಮಾತನ್ನು ಆಡುವ ಅಭ್ಯಾಸವಾಗಿದ್ದಿತೆಂದು ಅರ್ಥವಲ್ಲ. ಇಷ್ಟು ಕಠೋರವಾದ ಮಾತುಗಳನ್ನು ಇದುವರೆಗೂ ಅವಳು ಆಡಿಯೇ ಇರಲಿಲ್ಲವೆನ್ನಬಹುದು. ಇದರಿಂದ ಆಡಿ ಮುಗಿಸಿದ ಮರುಕ್ಷಣದಲ್ಲಿಯೆ ಆಡಬಾರದ ಮಾತನ್ನು ಆಡಿದೆನಲ್ಲಾ ಎಂದು ಅವಳು ನಾಚಿ ತಲೆ ಬಾಗಿದಳು. ಅಷ್ಟರಲ್ಲಿ ಅನ್ನದ ಏನೊ ಒಂದು ಬಗೆಯ ಸಂಕೋಚದಿಂದ ಮೆಲುದನಿಯಲ್ಲಿ, "ಡಾಕ್ಟರ್ ಹೊರಟುಹೋದರು, ಆಗ ಬೆಳಗಾಗುವುದರಲ್ಲಿತ್ತು; ಇನ್ನು ಮಲಗಬಾರದು ಎಂದುಕೊಂಡೆ; ಆದರೆ ಗೋಡೆಗೆ ಒರಗಿ ಕುಳಿತಕೂಡಲೇ ಹೇಗೋ ಕಣ್ಣು ಮುಚ್ಚಿಕೊಂಡುವು. ಯಾವಾಗ ಬೆಳಗಾಯಿತು, ಎಷ್ಟುಗಂಟೆಗಳಾಯಿತು ಅನ್ನುವುದೇ ಗೊತ್ತಾಗಲಿಲ್ಲ ನೀವು ನಮ್ಮ ಒಡೆಯರ ಸಮಾಚಾರ ಹೇಳಿದಿರಿ, ಅಮ್ಮ, ನೀವೂ ನಮ್ಮ ಒಡತಿಯಲ್ಲವೆ? ನೀವೇ ಹೇಳಿ ಇಂತಹ ತಪ್ಪು ಯಾವಾಗಲಾದರೂ ನನ್ನಿಂದ ಆಗಿದೆಯೆ? ಏಳಿ ಏಳಿ. ನಾನು ಎಲ್ಲವನ್ನೂ ಸಿದ್ಧಪಡಿಸುತ್ತೇನೆ" ಎಂದು ಹೇಳಿದಳು.

ಕಡೆಯ ಒಂದೆರಡು ಮಾತುಗಳು ವಂದನಳ ಕಿವಿಗೆ ಬೀಳಲೇ ಇಲ್ಲ. ಅವಳು ಅನ್ನದಳ ಕಡೆ ನೋಡಿ "ಡಾಕ್ಟರ್ ಮುಂತಾದವರು ಹೊರಟು ಹೋದರು ಅಂದೆಯಲ್ಲಾ, ಯಾವ ಡಾಕ್ಟರ್? ಏನು ಸಮಾಚಾರ?" ಎಂದು ಕೇಳಿದಳು. ಅನ್ನದ ವಿವರಿಸಿದಳು. "ನಿನ್ನೆ ರಾತ್ರಿ ದ್ವಿಜಬಾಬೂಗೆ ಮೈಯಲ್ಲಿ ಚೆನ್ನಾಗಿರಲಿಲ್ಲ. ಇಲ್ಲಿಗೆ ಬಂದಾಗಿನಿಂದ ಅವರಿಗೆ ಹುಷಾರಿರ

ಲಿಲ್ಲ, ಅದನ್ನು ಲೆಕ್ಕಿಸುತ್ತಲೂ ಇರಲಿಲ್ಲ. ನಿನ್ನೆ ಅಮ್ಮ, ಅತ್ತಿಗೆ ಮುಂತಾದವರನ್ನು ಅವರು ಕಳುಹಿಸಿಕೊಟ್ಟು ಬರಬೇಕೆಂದು ಮಾತು ನಡೆದಾಗ ನನಗೆ ಅವರಿಂದ ಕರೆ ಬಂತು. ಆಗ ನನ್ನ ಮುಂದೆ ಹೇಳಿದರು 'ಅನ್ನದ, ನಾನು ಹೋಗಲಾರೆ, ಅಣ್ಣನಿಗೆ ಏನಾದರೂ ಸಬೂಬು ಹೇಳಿ ನನ್ನನ್ನು ಕಳಿಸದಂತೆ ಮಾಡು. ಆದರೆ ಅಮ್ಮನಿಗೆ ಮಾತ್ರ ತಿಳಿಯುವುದು ಬೇಡ—ಇವತ್ತು ನಾನು ಎದ್ದು ಕುಳಿತುಕೊಳ್ಳಲಾರೆ. ಅಷ್ಟು ಸುಸ್ತಾಗಿದೆ" ಎಂದು.

ಅವರನ್ನು ನಾನು ಎತ್ತಿ, ಸಾಕಿ, ಸಲಹಿ ದೊಡ್ಡವರನ್ನಾಗಿ ಮಾಡಿದ್ದೇನೆ. ಅವರು ಎಲ್ಲ ವಿಷಯವನ್ನು ನನ್ನ ಮುಂದೆ ಬಿಚ್ಚಿ ಆಡುತ್ತಾರೆ. ಆ ಮಾತುಗಳನ್ನು ಕೇಳಿ ನಾನು ಹೆದರಿಕೆಯಿಂದ "ಏಕೆ ಹೀಗೆ ಹೇಳುತ್ತೀರಿ? ಮೈಯಲ್ಲಿ ಚೆನ್ನಾಗಿಲ್ಲದಿದ್ದರೆ ಅದನ್ನು ಮರೆಮಾಚುವುದೇಕೆ? ಎಂದು ಕೇಳಿದೆ. ಆದರೆ ಆ ಮಾತಿಗೆ ಸರಿಯಾದ ಉತ್ತರವನ್ನು ಕೊಡಲಿಲ್ಲ. ಎಷ್ಟೆ ದೊಡ್ಡ ವಿಚಾರವಾಗಿರಲಿ ನಕ್ಕು ಹಾರಿಸಿಬಿಡುವ ಸ್ವಭಾವ ಅವರದು. ಅಂತೆಯೇ ಆ ಮಾತಿಗೂ ನಕ್ಕು "ನೋಡು ಅನ್ನದ, ಮೊದಲು ಅವರನ್ನು ಸಾಗಹಾಕು. ಅನಂತರ ನನ್ನ ರೋಗ ತನ್ನಷ್ಟಕ್ಕೆ ತಾನೆ ಬಿಟ್ಟು ತೊಲಗುತ್ತದೆ" ಎಂದು ಉತ್ತರ ಕೊಟ್ಟರು. ಹೇಗೂ ತಾಯಿಗೂ ಮಗನಿಗೂ ಸರಿಬೀಳುವುದಿಲ್ಲವಾಗಿ ಅವರ ಜೊತೆಯಲ್ಲಿ ಎಲ್ಲಿಗೂ ಹೋಗಲು ಬಯಸುವುದಿಲ್ಲ ಅದಕ್ಕೋಸ್ಕರವೆ ಹೀಗೆ ಹೇಳುತ್ತಿರಬೇಕು ಎಂದು ಊಹಿಸಿದೆ. ಆಮೇಲೆ ನಾನು ಏನೂ ಹೇಳಲಿಲ್ಲ. ದೊಡ್ಡ ಯಜಮಾನರು ಅಮ್ಮನವರ ಜೊತೆಯಲ್ಲಿ ಹೊರಟುಹೋದರು. ಇವರೋ ದಿನವೆಲ್ಲ ಮಲಗಿಯೇ ಇದ್ದರು—ಊಟ ಇಲ್ಲ; ತಿಂಡಿನೂ ಇಲ್ಲ. ಮಧ್ಯಾಹ್ನ ಹೋಗಿ "ಹೇಗಿದೆ ಈಗ ನಿಮ್ಮ ದೇಹಸ್ಥಿತಿ" ಅಂತ ವಿಚಾರಿಸಿದೆ. 'ಚೆನ್ನಾಗಿದೆ' ಎಂದು ಉತ್ತರಕೊಟ್ಟರು. ಆದರೆ ಅವರ ಮುಖ ನೋಡಿದರೆ ಹಾಗೆ ಕಾಣುತ್ತಿರಲಿಲ್ಲ. ನಾನು ಡಾಕ್ಟರಿಗೆ ಹೇಳಿಕಳುಹಿಸಬೇಕೆಂದಿದ್ದೆ; ಅವರು ಅದಕ್ಕೆ ಒಪ್ಪಲಿಲ್ಲ. ಏಕೆ ಸುಮ್ಮಸುಮ್ಮನೆ ನಮ್ಮ ಅಣ್ಣನಿಗೆ 'ಆರ್ಥಿಕದಂಡ'ವನ್ನು ವಿಧಿಸುತ್ತೀ. ಈ ರೀತಿ ಹಣ ಪೋಲುಮಾಡಿದರೆ ಗೃಹಿಣಿ ಖಂಡಿತ ಸಿಟ್ಟಾಗುತ್ತಾಳೆ ಎಂದು ಹೇಳಿದರು. ತಾಯಿಯಮೇಲೆ ಎಷ್ಟುರೇಗಿದ್ದಾರೆ ಎಂದರೆ ಇದು

ವರೆಗೂ ಸಿಟ್ಟು ಇಳಿದೇ ಇಲ್ಲ. ದಿನವೆಲ್ಲ ಅನ್ನನೀರು ಇಲ್ಲದೆ ಹಾಸಿಗೆ ಮೇಲೆ ಮಲಗಿದ್ದರು. ಪುನಃ ಸಾಯಂಕಾಲ ಹೋಗಿ "ದ್ವಿಜಬಾಬೂ, ಮೈಯಲ್ಲಿ ಚೆನ್ನಾಗಿದ್ದರೂ ಹೀಗೆ ಬೆಳಗಿನಿಂದ ಹಾಸಿಗೆ ಹಿಡಿದು ಏಕೆ ಮಲಗಿದ್ದೀರಿ?" ಎಂದು ಕೇಳಿದೆ. ಅವರು ನಕ್ಕು ಉತ್ತರಕೊಟ್ಟರು—'ಅನ್ನದ, ಶಾಸ್ತ್ರದಲ್ಲಿ ಏನು ಬರೆದಿದೆ ಗೊತ್ತೆ? ಮಲಗಿರುವುದಕ್ಕೆ ಸಮನಾದ ಪುಣ್ಯಕಾರ್ಯ ಜಗತ್ತಿನಲ್ಲಿ ಬೇರೊಂದಿಲ್ಲ, ಅದರಿಂದ ಕೈವಲ್ಯ ಪ್ರಾಪ್ತವಾಗುತ್ತದೆ ಅಂತ. ನಾನೂ ಕೂಡ ಸ್ವಲ್ಪವಾದರೂ ಪರಲೋಕ ಸಾಧನೆಯನ್ನು ಮಾಡಿಕೊಳ್ಳೋಣ ಎಂದಿದ್ದೇನೆ. ಅದಕ್ಕೇಕೆ ಇಷ್ಟು ಹೆದರಿಕೆ?" ಅಂದರು. ಏನು ಮಾತನಾಡಿದರೂ ಅವರಿಗೇನೊ ಅದು ನಗುವಿಗೆ ಆಧಾರ. ಅವರನ್ನು ಮಾತಿನಲ್ಲಿ ಗೆಲ್ಲುವುದು ಕಷ್ಟ, ಆದರೆ ನಮಗೆ? ನನಗೆ ಸಿಟ್ಟು ಬಂತು. ಹಾಗೇ ಹೊರಟು ಬಂದೆ. ಮನಸ್ಸಿನಲ್ಲಿ ಆ ಹೆದರಿಕೆ ಇದ್ದೇ ಇತ್ತು—ಅವರು ಒಂದು ಪುಸ್ತಕವನ್ನು ಓದುತ್ತ ಮಲಗಿದ್ದರು.

ಅನ್ನದ ಕೆಲವು ನಿಮಿಷ ಸುಮ್ಮನಿದ್ದು ಪುನಃ ಆ ಮಾತನ್ನು ಮುಂದುವರಿಸಿದಳು—"ರಾತ್ರಿ ಸುಮಾರು ಹನ್ನೆರಡು ಗಂಟೆಯ ಸಮಯವಾಗಿರಬೇಕು, ದಬ್ ದಬ್ ಎಂದು ಬಾಗಿಲು ತಟ್ಟಿದರು. "ಯಾರು?" ಎಂದು ಕೇಳಿದೆ. 'ನಾನು ಬಾಗಿಲು ತೆಗಿ' ಎಂದು ಹೊರಗಿನಿಂದ ಉತ್ತರ ಬಂದಿತು. ಇದೇನು ಇಷ್ಟುಹೊತ್ತಿನಲ್ಲಿ ದ್ವಿಜಬಾಬು ಎಂದುಕೊಂಡು ಗಾಬರಿಯಿಂದ ಎದ್ದು ಬಾಗಿಲು ತೆರೆದೆ. ಆಗ—ನೆನಸಿಕೊಂಡರೆ ಮೈ ಜುಮ್ಮೆನ್ನುತ್ತದೆ—ಹೇಗಿತ್ತು ಅವರ ಆಕಾರ. ಕಣ್ಣುಗಳು ಹೂತು ಹೋಗಿವೆ. ದನಿ ಕೂಶಿದೆ. ಮೈಯೆಲ್ಲ ನಡುಗುತ್ತಿದೆ—ಇಷ್ಟಾದರೂ ಮುಖದ ಮೇಲೆ ಅಚ್ಚಳಿಯದ ನಗು. ಆಗ "ನೋಡು ಅನ್ನದ, ನಿನ್ನ ಮಡಲಿನಲ್ಲಿ ಆಡಿ ಬೆಳೆದವನಾದ್ದರಿಂದ ನಿನ್ನನ್ನು ಎಬ್ಬಿಸಿದೆ. ಒಂದು ವೇಳೆ ಕಣ್ಣು ಮುಚ್ಚಬೇಕಾಗಿ ಬಂದರೆ ನಿನ್ನ ತೊಡೆಯಮೇಲೆ ತಲೆಯಿಟ್ಟು ಮುಚ್ಚೋಣ ಅಂತ." ಹೀಗೆ ಹೇಳುತ್ತ ಹೇಳುತ್ತ ಅನ್ನದ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು. ಅವಳ ಅಳು ನಿಲ್ಲುವಂತೆ ತೋರಲಿಲ್ಲ. ಅದು ತಡೆದಷ್ಟೂ ಒಳಗಿನಿಂದ ಉಕ್ಕಿ ಉಕ್ಕಿ ಬರುತ್ತಿದ್ದಿತು.

ಸಮಾಧಾನ ತಂದುಕೊಳ್ಳಲು ಬಹಳ ಹೊತ್ತು ಹಿಡಿಯಿತು.

ಸಮಾಧಾನಕ್ಕೆ ಬಂದನಂತರ ಪುನಃ ಪ್ರಾರಂಭಿಸಿದಳು—“ಎದೆಗೆ ತಬ್ಬಿಕೊಂಡೇ ಕೋಣೆಯೊಳಕ್ಕೆ ಹೋದೆ—ಒಂದು ಕಡೆ ವಾಂತಿ ಇನ್ನೊಂದು ಕಡೆ ತಡೆಯುಲಾರದಷ್ಟು ಹೊಟ್ಟೆಶೂಲೆ—ರಾತ್ರಿ ಕಳೆಯು ತ್ತದೊ ಇಲ್ಲವೊ ಎಂದು ಹೆದರಿಕೆಯಾಯಿತು. ಯಾವಾಗ ಉಸಿರು ನಿಂತು ಹೋಗುತ್ತದೋ ಹೇಳುವಂತಿರಲಿಲ್ಲ. ಆಗ ಡಾಕ್ಟರಿಗೆ ಹೇಳಿಕಳಿಸಿದೆ. ಅವರೂ ಬಂದು ಒಂದರ ಮೇಲೊಂದು ಇನ್‌ಜಕ್ಷನ್ ಕೊಟ್ಟರು. ಬಿಸಿನೀರಿನ ಶಾಖ ಕೊಟ್ಟದ್ದಾಯಿತು. ಇದ್ದಬದ್ದ ಆಳುಕಾಳು ಎಲ್ಲ ಎದ್ದಿದ್ದರು. ಬೆಳಗಾ ಗುವ ಹೊತ್ತಿಗೆ ದ್ವಿಜಬಾಬುಗೆ ನಿದ್ರೆ ಹತ್ತಿತು. ಈಗ ಇನ್ನೂ ಮಲಗಿದ್ದಾರೆ. ಡಾಕ್ಟರೂ ಇನ್ನೇನು ಹೆದರಿಕೆ ಇಲ್ಲ ಎಂದು ಹೇಳಿದರು—ರಾತ್ರಿ ನಡೆ ದದ್ದನ್ನು ನೆನಸಿಕೊಂಡರೆ ಎಲ್ಲೊ ದುಃಸ್ವಪ್ನವಾದಂತೆ ಭಾಸವಾಗುತ್ತಿದೆ’ ಎಂದು ಹೇಳಿ ಅನ್ನದ ಸೆರಗಿನಿಂದ ಕಣ್ಣು ಒರೆಸಿಕೊಂಡಳು.

ವಂದನ ಮೆತ್ತಗೆ ಹೇಳಿದಳು “ನನಗೇನೂ ಗೊತ್ತೇ ಆಗಲಿಲ್ಲ. ನನ್ನನ್ನು ಏಕೆ ಎಬ್ಬಿಸಲಿಲ್ಲ?”

“ಬೆಳಗಾಗುವ ಹೊತ್ತಿಗೆ ಕೊಂಚ ಸ್ಥಿತಿ ಉತ್ತಮವಾಯಿತು. ನಿಮ ಗೇಕೆ ವೃಥಾ ತೊಂದರೆ ಎಂತ ಸುಮ್ಮನಿದ್ದೆ. ಅಷ್ಟಾಗಿ ದ್ವಿಜಬಾಬು ಹೇಳಿ ದರು....”

ವಂದನ ಆ ಪ್ರಸಂಗವನ್ನು ಅಲ್ಲಿಗೇ ಬಿಟ್ಟು “ದ್ವಿಜಬಾಬು ಈಗ ಹೇಗಿದ್ದಾರೆ?” ಎಂದು ಪ್ರಶ್ನಿಸಿದಳು.

“ಹುಷಾರಾಗಿದ್ದಾರೆ. ಮಲಗಿದ್ದಾರೆ, ಸಾಯಂಕಾಲಕ್ಕಿಂತ ಮುಂಚೆ ಅವರಿಗೆ ಎಚ್ಚರವಾಗಲಿಕ್ಕಿಲ್ಲವೆಂದು ಡಾಕ್ಟರ್ ಹೇಳಿ ಹೋಗಿದ್ದಾರೆ. ವಿಪ್ರದಾಸ್‌ಬಾಬು ಬಂದುಬಿಟ್ಟರೆ ಸಾಕು ನನಗೆ ಹೋದ ಜೀವ ಬಂದಂತಾ ಗುತ್ತೆ.”

“ಅವರಿಗೆ ತಿಳಿಸಿದ್ದೀಯಾ?”

“ಇಲ್ಲ. ಅವರು ಸಾಯಂಕಾಲಕ್ಕೆ ಬರುತ್ತಾರೆ. ಅಷ್ಟರಲ್ಲೇಕೆ ತಿಳಿಸಬೇಕು ಎಂದು ದತ್ತಜೀಯವರು ಹೇಳಿದರು.”

“ಆ ಕೋಣೆಯಲ್ಲಿ ಈಗ ಯಾರಾದರೂ ಇದ್ದಾರೆಯೆ?”

“ಇಬ್ಬರು ಅಲ್ಲಿ ಕುಳಿತಿದ್ದಾರೆ.”

" ಪುನಃ ಡಾಕ್ಟರು ಯಾವಾಗ ಬರುತ್ತಾರೆ?"

" ಸಾಯಂಕಾಲ ಬರುತ್ತಾರಂತೆ. ಏನೂ ಹೆದರಿಕೆ ಇಲ್ಲವೆಂತ ಹೇಳಿ ಹೋಗಿದ್ದಾರೆ."

ವೈದ್ಯರು ಅಭಯವನ್ನು ನೀಡಿರುವರೆಂಬುದೊಂದೆ ಅನ್ನದಳಿಗೆ ಸಮಾಧಾನ.

ವಂದನ ತನ್ನ ತಂದೆಗೆ ದ್ವಿಜದಾಸನ ಕಾಹಿಲೆ ವಿಚಾರವನ್ನು ತಿಳಿಸಿದಳು. ಅದನ್ನು ಕೇಳಿ ಅವರು ಗಾಬರಿಯಿಂದ " ನನಗೆ ಇದುವರೆಗೂ ಹೇಳಲೇ ಇಲ್ಲವಲ್ಲ ಏಕೆ?" ಎಂದು ಪ್ರಶ್ನೆಯ ಮೇಲೆ ಪ್ರಶ್ನೆ ಹಾಕುತ್ತಿದ್ದರು. ಅಷ್ಟರಲ್ಲಿ ವಂದನ—" ಇಲ್ಲ. ನಮ್ಮನ್ನು ಎಬ್ಬಿಸುವುದು ಅನುಚಿತವೆಂದು ಅವರೆಲ್ಲರ ಭಾವನೆ" ಎಂದು ನುಡಿದಳು.

" ಇದು ಸರಿಯಲ್ಲ. ನಮ್ಮನ್ನು ಎಬ್ಬಿಸಬೇಕಾಗಿತ್ತು."

ವಂದನ ಸುಮ್ಮನಿದ್ದಳು. ಕೆಲವು ನಿಮಿಷಗಳನಂತರ ಅವಳ ತಂದೆ ಹೇಳಿದರು " ಟಿಕೆಟ್ ತರಲು ಕಳಿಸಿದ್ದಾಯಿತು, ಸೀಟ್ ರಿಜರ್ವ್ ಮಾಡಿಸಿದ್ದಾಯಿತು. ಆದರೆ ನಾವು ಹೊರಡುವುದಕ್ಕೆ ಆಗುತ್ತದೆಯೊ ಇಲ್ಲವೊ, ಅಂತು ವಿಘ್ನ ಬರುವುದರಲ್ಲಿದೆ."

" ವಿಘ್ನ ಏಕೆ? ನಾವು ಇದ್ದು ಏನು ಉಪಕಾರ ಮಾಡಬಲ್ಲೆವು?" ಎಂದು ವಂದನ ಹೇಳಿದಳು.

" ಉಪಕಾರ ಅಂತ ಅಲ್ಲ, ಆದರೂ .......? " ಊಹೂಂ, ಹೀಗೆ ಸುಮ್ಮನೆ ದಿನ ತಳ್ಳುವುದು ಬೇಡ."ಎಂದು ಇಷ್ಟು ಹೇಳಿ ವಂದನ ಕೋಣೆಯಿಂದ ಹೊರಕ್ಕೆ ಹೊರಟು ಹೋದಳು.

ಆಗಲೆ ಇಳಿಹೊತ್ತು. ವಂದನಳ ಕೋಣೆಗೆ ಅನ್ನದ ಬಂದು ನೆಲದ ಮೇಲೆ ಕುಳಿತುಕೊಂಡಳು. ಅವರ ಊಟಕ್ಕೆ ಇನ್ನು ಎರಡು ಗಂಟೆ ಹೊತ್ತಿತ್ತು. " ದ್ವಿಜಬಾಬು ಈಗ ಹೇಗಿದ್ದಾರೆ?"—ವಂದನ ಕೇಳಿದಳು.

" ಇನ್ನೂ ಮಲಗಿದ್ದಾರೆ."

ವಂದನ:—ನಾವು ಹೊರಟು ಹೋಗುವ ಕಾಲಕ್ಕೆ ಯಾರನ್ನೂ ನೋಡಲಾಗುವುದಿಲ್ಲ. ಒಬ್ಬರಿಗಂತೂ ಅಷ್ಟು ಹೊತ್ತಿಗೆ ಎಚ್ಚರವಾಗುವುದೊ ಇಲ್ಲವೊ ಗೊತ್ತಿಲ್ಲ; ಇನ್ನೊಬ್ಬರು ಇಲ್ಲಿಗೆ ಬರುವ ಹೊತ್ತಿಗೆ ನಾವು ಕಲ್ಕತ್ತೆ

ಯಿಂದ ಬಹಳ ದೂರ ಹೋಗಿರುತ್ತೇವೆ.

ಅನ್ನದ ಅದನ್ನು ಅನುಮೋದಿಸಿ ಮಾತನಾಡಿದಳು—"ವಿಪ್ರದಾಸ ಬಾಬು ರಾತ್ರಿ ಒಂಬತ್ತು ಗಂಟೆಗೆ ಬರುತ್ತಾರೆ.........ಅವರು ಬಂದರೆ ನಾವು ಬದುಕಿದೆವು.........ಆಗ ನಮ್ಮ ಭಯ ಬಯಲಾದಂತೆ.. ...."

"ಅಷ್ಟು ಭಯಂಕರವಾಗಿದೆಯೇ ಅವರ ಸ್ಥಿತಿ ?"

"ಹಾಗೇನಿಲ್ಲ ಅಕ್ಕಿ. ವಿಪ್ರದಾಸ ಬಾಬೂಗಳು ಮನೆಯಲ್ಲಿದ್ದರೆ ಆ ಮಾತೇ ಬೇರೆ. ಆಗ ಯಾರಮೇಲೂ ಜವಾಬ್ದಾರಿ ಇರುವುದಿಲ್ಲ ; ಎಲ್ಲ ಭಾರ ಅವರ ಮೇಲೆ ಇರುತ್ತೆ. ಅವರಿಗೆ ಎಷ್ಟು ವಿದ್ಯೆ ಇದೆಯೋ ಅಷ್ಟೇ ವಿವೇಕವಿದೆ. ಗಾಂಭೀರ್ಯಕ್ಕೆ ತಕ್ಕಂತೆ ಅವರಲ್ಲಿ ಧೈರ್ಯವೂ ಇದೆ. ಆಲದ ಮರದ ನೆರಳಿನಲ್ಲಿದ್ದಷ್ಟು ನೆಮ್ಮದಿ ಅವರು ಮನೆಯಲ್ಲಿದ್ದರೆ."

ಅದೇ ಹಳೇ ಪುರಾಣ ; ಅದೇ ವಿಶೇಷಣಗಳು. ತಮ್ಮ ಒಡೆಯರ ವಿಷಯವಾಗಿ ಈ ಮಾತುಗಳು ಇವರಲ್ಲಿ ರಕ್ತಗತವಾಗಿವೆ. ಬೇರೆ ಸಮಯದಲ್ಲಾಗಿದ್ದರೆ ವಂದನ ಈ ವಿಚಾರವಾಗಿ ಕುಚೋದ್ಯಮಾಡದೆ ಬಿಡುತ್ತಿರಲಿಲ್ಲ. ಆದರೆ ಈಗ ಸುಮ್ಮನಿದ್ದಳು. ಅನ್ನದ ಪುನಃ ಪ್ರಾರಂಭಿಸಿದಳು—"ಅದೆ ಈ ದ್ವಿಜಬಾಬು ; ಅಹ, ಅಣ್ಣತಮ್ಮಂದಿರಲ್ಲಿ ಭೂಮಿಗೂ ಆಕಾಶಕ್ಕೂ ಇರುವಷ್ಟು ಅಂತರ."

ವಂದನಳಿಗೆ ಆಶ್ಚರ್ಯವಾಯಿತು. ಅವಳು ತನ್ನ ಕುತೂಹಲವನ್ನು ತಡೆಯಲಾರದೆ "ಏಕೆ?" ಎಂದು ಪ್ರಶ್ನಿಸಿದಳು.

"ಮತ್ತಿನ್ನೇನು" ಅನ್ನದ ಹೇಳಿದಳು "ಒಂದು ಜವಾಬ್ದಾರಿ ಗೊತ್ತಿಲ್ಲ, ಒಂದು ಸ್ವಲ್ಪವಾದರೂ ಘನತೆ ಗಾಂಭೀರ್ಯಗಳಿಲ್ಲ. ಅವರ ಅತ್ತಿಗೆ ಆಗಾಗ್ಗೆ ಹೇಳುತ್ತಿರುತ್ತಾರೆ 'ನಮ್ಮ ದ್ವಿಜು ಶರತ್ಕಾಲದ ಮೋಡದಂತೆ ; ನೀರಿಲ್ಲ, ಮಿಂಚಿಲ್ಲ' ಎಂದು. ಎಷ್ಟೇ ಗಂಭೀರವಾದ ಮಾತಾಗಿರಲಿ, ತಲೆ ಹೋಗುವಂಥ ವಿಷಯವೇ ಆಗಿರಲಿ ನಕ್ಕು ಉಡಾಯಿಸಿ ಬಿಡುವುದು ಅವರ ಸ್ವಭಾವ. ಇತ್ತ ಸಂಸಾರಿಯಲ್ಲ, ಅತ್ತ ಸಂನ್ಯಾಸಿ ಅಲ್ಲ. ಎಷ್ಟು ಜನ ರೈತರು ಸಾಲಗಾರರು ಬಂದು ಅವರ ಕೈಲಿ ಸುಮ್ಮ ಸುಮ್ಮನೆ 'ಚುಕತೀ' ಬರೆಸಿಕೊಂಡು ಹೋಗಿದ್ದಾರೊ ! ಅದಂತು ಲೆಕ್ಕವೇ ಇಲ್ಲ."

"ಮುಖರ್ಜಿ ಮಹಾಶಯರು ಸಿಟ್ಟುಮಾಡುವುದಿಲ್ಲವೆ ?"

"ಮಾಡದೆ, ಏನು? ಬೇಕಾದಷ್ಟು. ಅವರಿಗಿಂತಲೂ ಹೆಚ್ಚಾಗಿ ಅವರ ತಾಯಿ ಸಿಟ್ಟುಮಾಡುತ್ತಾರೆ. ಆದರೆ ಆಗ ದ್ವಿಜಬಾಬು ಅವರಿಗೆ ಕಾಣಿಸಿ ಕೊಳ್ಳಬೇಕಲ್ಲ? ಎಲ್ಲೋ ಪತ್ತೆ ಇಲ್ಲದಂತೆ ಓಡಿಹೋಗುತ್ತಾರೆ. ಮನೆ ಯಲ್ಲಿ ಅವರ ಅತ್ತಿಗೆ ಅತ್ತು ಕರೆದು ಗೋಳಾಡಲು ಪ್ರಾರಂಭಿಸುತ್ತಾರೆ. ಆಗ ಮನೆಮಂದಿಯೆಲ್ಲ ಸೇರಿ ಎಲ್ಲಿಂದಲೋ ಪತ್ತೆಹಚ್ಚಿ ಹಿಡಿದುಕೊಂಡು ಬರುತ್ತಾರೆ. ಏನೇ ಆಗಲಿ ಹೀಗೆ ಎಷ್ಟುಕಾಲ ನಡೆದೀತು? ಯಾವತ್ತೂ ಹೀಗಿರುವುದು ಸಾಧ್ಯವೇ? ಅವರಿಗೂ ಮದುವೆ, ಮಕ್ಕಳು—ಮರಿ ಆಗೋ ದಿಲ್ಲವೇ? ಆಗಲೂ ಹೀಗೇ ಮಾಡುತ್ತಿದ್ದರೆ ಒಂದಲ್ಲ ಒಂದು ದಿನ ಪಾಪರ್ ಏಳುತ್ತಾರೆ ಅಷ್ಟೆ."

"ನೀನು ಈ ಮಾತನ್ನೆಲ್ಲ ಅವರಿಗೇಕೆ ತಿಳಿಸುವುದಿಲ್ಲ?" "ಬೇಕಾ ದಷ್ಟು ಹೇಳಿ ಕೇಳಿ ಆಗಿದೆ. ಆದರೆ ಈ ಮಾತಿಗೆ ಅವರು ಕಿವಿಗೊಟ್ಟರೆ ತಾನೆ? ಏನಾದರೂ ಹೆಚ್ಚಿಗೆ ಹೇಳಲು ಹೋದರೆ 'ನಾನು ಪಾಪರ್ ಆದರೆ ನಿಮಗೇನು? ನಾನು ಪಾಪರ್ ಎದ್ದೇ ಅಂತಲೇ ಇಟ್ಕೊಳ್ಳಿ. ನಮ್ಮ ಅತ್ತಿಗೆ ಏನೂ ಪಾಪರ್ ಏಳಲ್ಲವಲ್ಲ. ಆಗ ಎಲ್ಲರೂ ಅವರಿಗೆ ಗಂಟುಬೀಳು ತ್ತೀವೆ' ಎಂತ ಉತ್ತರ ಕೊಡುತ್ತಾರೆ."

ವಂದನ ನಸುನಕ್ಕು "ಅದಕ್ಕೆ ಅಕ್ಕ ಏನು ಹೇಳುತ್ತಾಳೆ" ಎಂದು ಕೇಳಿದಳು.

"ಪ್ರೈದುನನ ಮೇಲೆ ಅವರಿಗೆ ಮಿತಿಯಿಲ್ಲದಷ್ಟು ಪ್ರೀತಿ. ನಾವು ಉಂಡು ತಿಂದು ಇರುವಾಗ ದ್ವಿಜು ಉಪವಾಸ ಇರಲಾಗುತ್ತದೆಯೆ? ನನಗೆ ತಿಂಗಳು ತಿಂಗಳಿಗೂ ಬರುವ ಐದುನೂರು ರೂಪಾಯಿಗಳನ್ನು ಯಾರೂ ತಪ್ಪಿಸಲಾರರು. ಅಷ್ಟರಿಂದಲೇ ಬಡತನದಲ್ಲಿ ಜೀವನ ಮಾಡುತ್ತೀವೆ. ಅವರು ಬೇಕಾದರೆ ಲಕ್ಷಾಂತರ ರೂಪಾಯಿ ಗಳಿಸಿ ದುಡ್ಡಿನಮೇಲೆ ಉರುಳಾಡಲಿ, ನಾವೇನು ಅವರ ಹತ್ತಿರ ಬೇಡಲು ಹೋಗುವುದಿಲ್ಲ ಅನ್ನುತ್ತಾರೆ."

ಇದನ್ನು ಕೇಳಿ ವಂದನಳಿಗೆ ಹಿಡಿಸಲಾರದಷ್ಟು ಆನಂದವಾಯಿತು. ಎಷ್ಟು ಒಳ್ಳೆಯ ಮಾತು! ಹೇಳಿದವಳು ತನ್ನ ಅಕ್ಕನೇ ಅಲ್ಲವೆ? ಇದರಲ್ಲಿ ಏನು ವೈಶಿಷ್ಟ್ಯ ಅಂದರೆ ಅವಳು ಯಾವ ಸಮಾಜ, ಯಾವ ವಾತಾವರಣ ದಲ್ಲಿ ಬೆಳದು ದೊಡ್ಡವಳಾಗಿದ್ದಾಳೋ ಅಲ್ಲಿ ಇಂತಹ ಮಾತುಗಳನ್ನು

ಯಾರೂ ಆಡುವುದಿಲ್ಲ, ಆಡುವುದಿರಲಿ ಯೋಚಿಸುವುದೂ ಇಲ್ಲ. ಅಲ್ಲಿ ಇದರ ಅವಶ್ಯಕತೆ ಇರುವುದೋ ಇಲ್ಲವೋ ಯಾರಿಗೆ ಗೊತ್ತು ? ''

ಆದರೆ ಅನ್ನದ ಹೇಳುತ್ತಿದ್ದುದು ಯಾವುದೋ ಓಬೀರಾಯನ ಕಾಲದ ಕತೆಯಂತಿತ್ತು. ಒಟ್ಟಿನಲ್ಲಿ ಇವರದು ಒಂದು ಸಂಯುಕ್ತ ಪರಿವಾರ—ಮೇಲಿನ ಆಕೃತಿಯಲ್ಲಿ ಮಾತ್ರ ಅಲ್ಲ; ಒಳಗಿನ ಪ್ರಕೃತಿಯಲ್ಲಿ ಕೂಡ ಅಷ್ಟೆ. ಅನ್ನದ ಕೇವಲ ದಾಸಿಯಲ್ಲ ಅವಳು ದ್ವಿಜದಾಸನಿಗೆ ಅಜ್ಜಿ. ಬರೀ ಮಾತಿನಲ್ಲೇ ಅಲ್ಲ. ಅವನು ಏನಾದರೂ ಹೇಳುವುದಿದ್ದರೆ ಇವಳಲ್ಲಿಯೇ ಹೇಳಿಕೊಳ್ಳುತ್ತಾನೆ. ಇವಳ ತಂದೆ ಈ ಪರಿವಾರದಲ್ಲಿ ನೌಕರನಾಗಿದ್ದು ಸತ್ತಿದ್ದಾನೆ. ಇವಳ ಮಗ ಇದೇ ಪರಿವಾರದಲ್ಲಿದ್ದು ಓದಿ, ಬರೆದು ದೊಡ್ಡವನಾಗಿ ಕೆಲಸಮಾಡುತ್ತಿದ್ದಾನೆ. ಅನ್ನದಾಗೆ ಊಟ ತಿಂಡಿಗೆ ಏನೂ ಕೊರತೆ ಇಲ್ಲ. ಆದರೂ ಅವಳನ್ನು ಈ ಮನೆಯವರ ಮಮತೆ ಕಾಡುತ್ತಿದೆ. ಈ ದೊಡ್ಡ ಪರಿವಾರದಲ್ಲಿ ಎಷ್ಟೋ ಕರ್ಮಚಾರಿಗಳ ವಂಶಾನುಕ್ರಮ ಇತಿಹಾಸ ದೊರೆಯುತ್ತದೆ. ದಯಾಮಯಿಯ ಮಾತು ಕೇಳದ ಉದ್ದಂಡ ಪುತ್ರನಾದ ದ್ವಿಜದಾಸನೂ ಸಹ ನಿನ್ನೆ ಮಾತನಾಡುತ್ತ ಅಮ್ಮ, ಅಣ್ಣ ಅತ್ತಿಗೆ, ಅತಿಥಿಶಾಲೆ, ಮನೆದೇವತೆ ಮುಂತಾದುವುಗಳೊಂದಿಗೆ ಅವನ ಅಸ್ತಿತ್ವ ಬೆರೆತುಕೊಂಡಿರುವುದೆಂದೂ ವಂದನಳು ಇವುಗಳಿಂದ ಅವನನ್ನು ಬೇರ್ಪಡಿಸಿ ಹೊಂದಲಾರಳೆಂದೂ ಹೇಳಿದ್ದಾನೆ. ಆಗ ವಂದನ ಈ ಮಾತನ್ನು ವಿರೋಧಿಸಿ ಏನೂ ಹೇಳಿರಲಿಲ್ಲ. ಆದಾಗ್ಯೂ ಆ ಮಾತಿನ ನಿಜವಾದ ಅಭಿಪ್ರಾಯ ಇಂದು ಅವಳಿಗೆ ಗೊತ್ತಾಯಿತು.

ಇನ್ನೂ ಮಾತು ಮುಗಿದಿರಲಿಲ್ಲ. ಏನೇನೊ ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲವೂ ಅವಳಿಗಿದ್ದಿತು. ಆದರೆ ಅಷ್ಟರಲ್ಲಿ ಅದಕ್ಕೆ ಅಡ್ಡಿ ಬಂದಿತು. ರಾಯ್‌ಬಾಬು ಹೊರಡಲು ಹೊತ್ತಾಯಿತೆಂದು ಕೂಗುತ್ತಿರುವುದಾಗಿ ಆಳು ಬಂದು ತಿಳಿಸಿದನು. ಇನ್ನು ಹೊರಡಲು ಕೇವಲ ಒಂದು ಗಂಟೆಯ ಅವಕಾಶವಿತ್ತು. ಅಷ್ಟರಲ್ಲಿ -ಎಲ್ಲ ಸಿದ್ಧತೆಗಳು ಮುಗಿದಿದ್ದರೂ- ಒಟ್ಟಿಬರೆ ಧರಿಸಿ ಸಿದ್ಧಳಾಗಬೇಕಾಗಿತ್ತು. ಆದುದರಿಂದ ವಂದನ ಎದ್ದು ಹೊರಟಳು.

ಯಥಾಸಮಯದಲ್ಲಿ ರಾಯ್‌ಮಹಾಶಯರು ಕೆಳಕ್ಕೆ ಬಂದರು.

ಬರುವಾಗ ಮಗಳನ್ನು ಕೂಗಿದರು. ಅದು ಅವಳಿಗೆ ಕೇಳಿಸಿತು. ಎಷ್ಟೇ ಅನ್ಯಾಯವಾಗಿರಲಿ, ಎಷ್ಟೇ ಮನಸ್ಸಿಲ್ಲದೆ ಇರಲಿ ಅವಳು ಹೊರಡಲೇ ಬೇಕಾಗಿತ್ತು. ಬಾರಿಬಾರಿಗೂ ಹಟಹಿಡಿದು ತಾನೇ ಸ್ವತಃ ಮಾಡಿರುವ ಏರ್ಪಾಟಿನಲ್ಲಿ ಎಳ್ಳಷ್ಟು ಬದಲಾವಣೆಯೂ ಸಾಧ್ಯವಿಲ್ಲ. ಅವಳು ಈಗ ಈ ಮನೆಬಿಟ್ಟು ಹೊರಟರೆ ಮುಂದೆ ಅವಳಿಗೆ ತಿಳಿದಮಟ್ಟಿಗೆ ಯಾವ ಕಾರಣದಿಂದಲೂ ಈ ಮನೆಗೆ ಮತ್ತೆ ಬರಲಾರಳು. ಅಂತಹ ಆವಶ್ಯ ಕತೆಯೂ ತೋರಿಬರಲಿಲ್ಲ. ಆದರೆ ಈ ಮನೆಯಲ್ಲಿ ಅವಳು ಅನೇಕ ಸುಖ ಸ್ವಪ್ನಗಳನ್ನು ಕಂಡಿದ್ದಾಳೆ. ಅದನ್ನು ಎಂದಿಗೂ ಮರೆಯಲಾರಳು. ಕೆಳ ಕ್ಕಿಳಿದು ಬರುವಾಗ ಅವಳು ನೇರವಾಗಿ ಬರದೆ, ದ್ವಿಜದಾಸನ ಕೋಣೆಯ ಮುಂದೆ ಹಾದು ಹೊರಟಳು; ಆಗ ಅವನ ಕೋಣೆಯಲ್ಲಿ ಒಮ್ಮೆ ಇಣಿಕಿ ನೋಡಿದಳು. ಆದರೆ ದ್ವಿಜದಾಸನು ಕಾಣಿಸಲಿಲ್ಲ.

ಕಾರಿನ ಹತ್ತಿರ ದತ್ತಜೀಯವರು ನಿಂತಿದ್ದರು. ರಾಯ್ ಮಹಾ ಶಯರು ಅವರನ್ನು ಹತ್ತಿರ ಕರೆದು ಆಳುಕಾಳುಗಳಲ್ಲಿ ಹಂಚಲೆಂದು ಒಂದು ನೋಟು ಕೊಟ್ಟರು. ಏನೋ ಅನಿರೀಕ್ಷಿತವಾಗಿ ಹೊರಡಬೇಕಾಗಿ ಬಂದ ದ್ದಕ್ಕೆ ತಮ್ಮ ಖೇದವನ್ನು ವ್ಯಕ್ತಪಡಿಸಿ ದ್ವಿಜದಾಸನ ವಿಷಯವಾಗಿ ಕೂಡಲೆ ತಿಳಿಸಬೇಕೆಂದೂ ಆಗಾಗ್ಗೆ ಪತ್ರಬರೆಸುತ್ತಿರಬೇಕೆಂದೂ ಬಾರಿ ಬಾರಿಗೂ ಹೇಳಿದರು.

ಕಾರಿನಲ್ಲಿ ಕುಳಿತುಕೊಳ್ಳುವುದಕ್ಕೆ ಮೊದಲು ವಂದನ ಅನ್ನದಳನ್ನು ಹತ್ತಿರ ಕರೆದು —"ನೋಡು, ನೀನು ದ್ವಿಜಬಾಬುವಿಗೆ ಅಜ್ಜಿ–ಅವರನ್ನು ಎತ್ತಿ ಆಡಿಸಿದವಳು. ಈ ಉಂಗುರವನ್ನು ದ್ವಿಜಬಾಬುಗಳ ಭಾವೀ ಪತ್ನಿಗೆ ಕೊಟ್ಟು ದಿನವೂ ಧರಿಸಬೇಕೆಂದು ಹೇಳು"—ಎಂದು ಹೇಳಿ ತನ್ನ ಕೈಯ ಲ್ಲಿದ್ದ ಉಂಗುರವನ್ನು ತೆಗೆದು ಕೊಟ್ಟು ಕಾರಿನಲ್ಲಿ ತಂದೆಯ ಪಕ್ಕದಲ್ಲಿ ಹೋಗಿ ಕುಳಿತಳು.

ಕಾರು ಹೊರಟಿತು. ಅಕ್ಕ ಪಕ್ಕದಲ್ಲಿ ನಿಂತಿದ್ದ ಆಳುಗಳೂ ದತ್ತ ಜೀಯವರೂ ಅವರಿಗೆ ನಮಸ್ಕರಿಸಿದರು.

ವಂದನ ತಲೆ ಹೊರಗೆ ಹಾಕಿ ಕತ್ತೆತ್ತಿ ನೋಡಿದಳು. ಅಲ್ಲಿ ಆ ದಿನದಂತೆ ಅಗೋಚರನಾಗಿ ನಿಂತು, ಮೌನ ಸಂಕೇಪದಿಂದ ಕೈ ಮುಗಿದು

ಬೀಳ್ಕೊಡಲು ದ್ವಿಜದಾಸನಿರಲಿಲ್ಲ. ಇಂದು ಅವನಿಗೆ ಖಾಯಿಲೆ. ನಿದ್ರೆಯಲ್ಲಿ ಅವನು ಮೈಮರೆತು ಮಲಗಿದಾನೆ.

೧೬

ದಯಾಮಯಿಯ ಆಚರಣೆಯಲ್ಲಿ ವಂದನಳ ವಿಷಯವಾಗಿ ಹುದುಗಿದ್ದ ಅವ್ಯಕ್ತ ತಿರಸ್ಕಾರ, ಸತಿಯ ಮನಸ್ಸನ್ನು ಆಕ್ರಮಿಸಿಬಿಟ್ಟಿತ್ತು. ಆದರೆ ಅತ್ತೆಯೊಂದಿಗೆ ಹೆಚ್ಚಿಗೆ ಮಾತುಕತೆ ಆಡಿ ಅವಳಿಗೆ ಅಷ್ಟಾಗಿ ಅಭ್ಯಾಸವಿಲ್ಲ. ಅದರಿಂದ ಅವಳು ಒಂದು ಕಾಗದ ಬರೆದು ಅದನ್ನು ವಂದನಳಿಗೆ ಕೊಡಲೆಂದು ಗಂಡನನ್ನು ಕೊಠಡಿಗೆ ಕರೆಕಳುಹಿದಳು. ಎರಡು ಗಂಟೆಯ ಗಾಡಿಗೆ ವಿಪ್ರದಾಸ ಕಲ್ಕತ್ತೆಗೆ ಹೊರಡುವವನು. ಅದೇ ಸಮಯಕ್ಕೆ ಸರಿಯಾಗಿ ದಯಾಮಯಿ ಅವನ ಕೋಣೆಗೆ ಹೋದಳು. ಈ ವೇಳೆಯಲ್ಲಿ ಅವಳೆಂದೂ ಅವನ ಕೋಣೆಯ ಕಡೆ ಹೋದವಳೇ ಅಲ್ಲ. ಇದರಿಂದ ಮಗನಿಗೂ ಸೊಸೆಗೂ ಬಹಳ ಆಶ್ಚರ್ಯವಾಯಿತು. ಸತಿ ಮುಖದ ಮೇಲೆ ತೆರೆಯನ್ನೆಳೆದುಕೊಂಡು ಹೊರಕ್ಕೆ ಕಾಲಿಡುತ್ತಿದ್ದಂತೆ ದಯಾಮಯಿ ಅವಳನ್ನು ಕುರಿತು "ಇಲ್ಲ ಸತಿ, ಹೋಗಬೇಡ, ನಿನ್ನ ಹಿಂದೆ ನಿನ್ನ ತಂಗಿಯನ್ನೇನೂ ಅನ್ನಲಾರೆ. ಕೊಂಚ ನಿಂತುಕೊ. ವಿಪಿನ್, ನಾನಿಲ್ಲಿಗೆ ಇಷ್ಟು ಅವಸರದಲ್ಲಿ ಯಾಕೆ ಓಡಿಬಂದೆ, ನಿನಗೆ ಗೊತ್ತೇನು ?" ಎಂದಳು.

"ಸರಿಯಾಗಿ ಗೊತ್ತಿಲ್ಲ, ಅಮ್ಮ. ಆದರೆ ಎಲ್ಲೋ ಏನೋ ಅವಾಂತರವಾಗಿದೆಯೆಂದು ಊಹಿಸಬಲ್ಲೆ" ಎಂದ ವಿಪ್ರದಾಸ್.

ಅವಾಂತರವಾಗಲಿಲ್ಲ. ಆಗುವಂತಿತ್ತು. ಆದರೆ ಮಹಾತಾಯಿ, ಕಾಳಿ ಅದರಿಂದ ನಮ್ಮನ್ನು ಪಾರುಮಾಡಿದಳು. ನಾಳೆ ವಂದನಳ ತಂದೆ ಬೊಂಬಾಯಿಗೆ ಹೋಗಿಬಿಡುವರು. ಆಮೇಲೆ ವಂದನಾ ಇಲ್ಲಿಗೆ ಬಂದು ಕೆಲವು ದಿನ ಇಲ್ಲಿ ತನ್ನ ಅಕ್ಕನ ಜೊತೆಯಲ್ಲಿರುವುದೆಂದು ಗೊತ್ತಾಗಿತ್ತಲ್ಲ. ಆ ಹುಡುಗಿಯ ತಲೆಯಲ್ಲಿ ಕೊಂಚವಾದರೂ ಬುದ್ಧಿಯಿದ್ದರೆ ಅವಳಿಲ್ಲಿಗೆ ಬರುವುದಿಲ್ಲ. ತಂದೆಯ ಜೊತೆಗೇ ಬೊಂಬಾಯಿಗೆ ಹೊರಟುಹೋಗುವಳು. ಅವಳು

ಹೋಗದಿದ್ದರೆ ನೀನೇ ಹೊರಟುಹೋಗಲು ಹೇಳು. ಸತಿ, ನೀನು ಇದರಿಂದೇನೂ ಮನಸ್ಸಿಗೆ ವ್ಯಥೆ ಹಚ್ಚಿಕೊಳ್ಳಬೇಡ. ಇಂತಹ ತಂಗಿಯನ್ನು ಮನೆಯಲ್ಲಿಟ್ಟುಕೊಳ್ಳುವುದಕ್ಕಿಂತ ವನವಾಸ ಕಳುಹಿಸುವುದೇ ವಾಸಿ'' ಎಂದಳು ದಯಾಮಯಿ.

ವಿಪ್ರದಾಸ ಆಶ್ಚರ್ಯಾತಿರೇಕದಿಂದ ಮೌನವಾಗಿ ಅವರನ್ನೇ ದಿಟ್ಟಿಸುತ್ತಿದ್ದ. ದಯಾಮಯಿ ಮಾತು ಮುಂದುವರಿಸದಳು—"ಅವಳನ್ನು ಪ್ರೀತಿಸಲು ಕೂಡ ಆರಂಭಿಸಿಬಿಟ್ಟಿದ್ದೆ–ನನ್ನ ಹಣೆಯ ಬರೆಹ. ನಮ್ಮಲ್ಲಿಯೇ ಅವಳೂ ಒಬ್ಬಳೆಂದು ನಂಬಿಬಿಟ್ಟಿದ್ದೆ. ಅವಳ ನಡೆನುಡಿಯಲ್ಲಿ ತಪ್ಪಿದೆ. ಇದಕ್ಕೆ ಕಾರಣ ಅವಳ ಸ್ಕೂಲು ಕಾಲೇಜಿನ ವಿದ್ಯಾಭ್ಯಾಸ. ಚಂದ್ರನ ಮುಖದ ಮೇಲೆ ನಾಲ್ಕು ನಿಮಿಷ ಮೋಡ ಬಂದು ಕವಿದು ಹಾರಿಹೋಗುವಂತೆ ಇವೂ ಹೋಗಿಬಿಡುತ್ತವೆ. ಏನಾದರೂ ಆಗಲಿ ಸತಿಯ ತಂಗಿಯಲ್ಲವೆ ಅವಳು ಎಂದುಕೊಂಡಿದ್ದೆ. ಆದರೆ ಅವಳು ಕಾಯಸ್ಥ ಜಾತಿಯವನನ್ನು ಕೂಡ ಬೇಕೆಂದಿದ್ದಾಳೆ. ಅಬ್ಬಾ! ಯಾರಿಗೆ ತಾನೇ ಗೊತ್ತಿತ್ತು. ಬ್ರಾಹ್ಮಣ ಕುಲದಲ್ಲಿ ಹುಟ್ಟಿ ಇಷ್ಟು ಕೆಳಗಿಳಿಯುವಳೆಂದು!''

"ಅಯ್ಯೋ ಇಷ್ಟೇ ತಾನೆ! ಆ ಜನ ಜಾತಿಗೀತಿ ನಂಬುವುದಿಲ್ಲವೆನ್ನುವುದು ನಿನಗೆ ಗೊತ್ತಿತ್ತಲ್ಲವೇನಮ್ಮ'' ಎಂದ ವಿಪ್ರದಾಸ್.

"ಕೇಳಿದ್ದೆ–ಗೊತ್ತಿತ್ತು. ಆದರೆ ಕಣ್ಣಿನಿಂದ ಕಂಡಿರಲಿಲ್ಲ. ಮನಸ್ಸಿಗೂ ಅದು ಪೂರ್ತಿ ತಿಳಿದಿರಲಿಲ್ಲಾಂತ ಕಾಣುತ್ತದೆ. ಚಿಕ್ಕಮ್ಮ ಹೇಳಿದ್ದೆಲ್ಲಾ ಬರಿಯ ಬಾಯಿಮಾತೆಂದುಕೊಂಡಿದ್ದೆ. ಆದರೆ ಕಣ್ಣಿನಿಂದ ನೋಡಿದಮೇಲೆ ಯಾರಿಗಾದರೂ ಯಾರ ಮೇಲಾದರೂ ಇಷ್ಟೊಂದು ತಿರಸ್ಕಾರಹುಟ್ಟೀತೆಂದು ನನಗೆ ನಿಜವಾಗಿಯೂ ತಿಳಿದೇ ಇರಲಿಲ್ಲ ಮಗು. ಹಾಳಾಗಲಿ ಬಿಡು. ಮನಸ್ಸಿಗೆ ಬಂದಹಾಗೆ ಮಾಡಲಿ, ನನಗೇನು—ಅವಳು ಈಗ ನನ್ನ ಮನೆಯಲ್ಲಂತೂ ಇಲ್ಲವಲ್ಲ" ಎಂದಳು.

ವಿಪ್ರದಾಸ ಸುಮ್ಮನಿರಲು "ಯಾಕೆ, ಜವಾಬೇ ಕೊಡುವುದಿಲ್ಲ?'' ಎಂದಳು.

“ ನೀನು ಇದಕ್ಕೆ ಜವಾಬು ಕೇಳಲಿಲ್ಲಮ್ಮ. ಈ ಮನೆಯೊಳಕ್ಕೆ ವಂದನಾ ಮತ್ತೆ ಕಾಲಿಡಕೂಡದೆಂದು ನಿನ್ನ ಆಜ್ಞೆ. ಹಾಗೆಯೇ ಆಗುತ್ತದೆ ’’ ಎಂದ ವಿಪ್ರದಾಸ್.

ಅವನ ಮಾತು ಕೇಳಿ ದಯಾಮಯಿ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಳು, “ ಸುಮ್ಮಸುಮ್ಮನೆ ಹಾಗೆ ಆಜ್ಞೆಮಾಡುತ್ತಿದೇನೆಂದು ತಿಳಿದೆಯೇನು ? ” ಎಂದಳು

“ ತಿಳಿಯದೆ ಏನಮ್ಮ ? ವಂದನಾ ಯಾವ ಅನ್ಯಾಯವನ್ನೂ ಮಾಡಲಿಲ್ಲ. ಸಾಮಾಜಿಕ ವ್ಯವಹಾರದಲ್ಲಿ ನಮಗೂ ಅವಳಿಗೂ ಕೂಡುವುದಿಲ್ಲ. ಅವರು ಜಾತಿಪಂಥಗಳನ್ನು ಗಮನಿಸುವುದಿಲ್ಲವೆಂದು ತಿಳಿದು ತಿಳಿದೂ ನೀನು ಅವಳನ್ನು ಇಲ್ಲಿಗೆ ಕರೆಸಿಕೊಂಡೆ. ಅವಳಲ್ಲಿ ನಿನ್ನ ಪ್ರೀತಿಯನ್ನು ಕೂಡ ಇಟ್ಟೆ. ಅವರು ಬರಿಯ ಮಾತಿನಲ್ಲಿ ಮಾತ್ರ ಹಾಗೆ ಹೇಳುವರು, ನಡತೆಯುಲ್ಲಿಲ್ಲವೆಂದು ನೀನು ಮನಸ್ಸಿನಲ್ಲಿ ಆಸೆಯಿಟ್ಟುಕೊಂಡಿದ್ದೆಯೋ ಏನೊ ! ಇದೇ ನಿನ್ನ ತಪ್ಪು ! ” ಎಂದ ವಿಪ್ರದಾಸ್.

“ ಇದ್ದರೂ ಇರಬಹುದು. ಆದರೆ ಅವಳ ಮದುವೆಯ ಮಾತು ಕೇಳಿಯಾದರೂ ನಿನಗೆ ತಿರಸ್ಕಾರಬರುವುದಿಲ್ಲವೇ ? ನಿನಗೇನೆನಿಸುತ್ತದೆ ಹೇಳು ”

ವಿಪ್ರದಾಸ್ ನಗು ನಗುತ್ತಾ ಈ ಮಾತಿಗೆ ಉತ್ತರಕೊಟ್ಟ —“ಅವಳಿಗೆ ಮದುವೆಯಿನ್ನೂ ಆಗಲಿಲ್ಲ. ಇಷ್ಟಾಗಿ ಆಗಿ ಹೋದರೂ ನಾನು ಕೋಪಗೊಳ್ಳಕೂಡದು. ಆದರೆ ಇಷ್ಟು ಮಾತ್ರ ಖಂಡಿತವಾಗಿ ಹೇಳಬಲ್ಲೆ. ಅವರು ತಾವು ನಂಬಿದುದನ್ನು ನಡವಳಿಕೆಯುಲ್ಲಿಯೂ ತೋರಿದರೇ ಹೊರತು ಯಾರನ್ನೂ ಮೋಸಗೊಳಿಸಲಿಲ್ಲ. ಆದರೆ ನಾನು ಕಲಕತ್ತೆಯಲ್ಲಿ ಬಹಳ ಜನರನ್ನು ಕಂಡಿದೇನೆ–ಮಾತಿನಲ್ಲಿ ಮಾತ್ರ ಜಾತಿ ಮತಗಳಲ್ಲಿ ನಂಬಿಕೆಯಿಲ್ಲ. ಹಳೆಯ ಸಂಪ್ರದಾಯದವರನ್ನು ಗೇಲಿಮಾಡುತ್ತಾರೆ. ಬಾಯಲ್ಲಿ ಪಟಾಟೋಪ ನಡೆಸುತ್ತಾರೆ. ಆದರೆ ಅನುಷ್ಠಾನಕ್ಕೆ ತರುವ ಮಾತು ಬಂದಾಗ ಮಾತ್ರ ಎಲ್ಲಿ ಅವಿತುಕೊಳ್ಳುತ್ತಾರೋ ಏನೋ ಕಣ್ಣಿಗೇ ಬೀಳುವುದಿಲ್ಲ.

ಅಂತಹ ಜನರಮೇಲೆ ನನಗೆ ತಿರಸ್ಕಾರ. ಅಮ್ಮ, ಕೋಪಗೊಳ್ಳಬೇಡ– ನಿನ್ನ ದ್ವಿಜೂ ಆ ಗುಂಪಿಗೇ ಸೇರಿದವನು" ಎಂದ.

ಇದರಿಂದ ಒಳಗೊಳಗೇ ದಯಾಮಯಿ ಕುದಿದರೂ ಮಾತಿನಲ್ಲಿ ತೋರಗೊಡಲಿಲ್ಲ. "ನಿಜ ಅವನಿಂತಹ ಹೇಡಿಯೇ ಸರಿ! ಆದರೆ ಮಗು ನೀನು ಅವಳನ್ನು ತಿರಸ್ಕಾರದಿಂದ ನೋಡದಿದ್ದರೆ ಅವಳು ಮುಟ್ಟಿದುದನ್ನೇಕೆ ತಿನ್ನುವುದಿಲ್ಲ? ಅವಳನ್ನು ಅಡಿಗೆ ಮನೆಗೆ ಕಳುಹಿಸಿದಂದಿನಿಂದ ಅಲ್ಲಿ ಊಟ ನಿಲ್ಲಿಸಿ ನನ್ನ ಅಡಿಗೆಯನ್ನೇ ಊಟ ಮಾಡಲಾರಂಭಿಸಿದೆ. ಉಳಿದವರಿಗೆ ತಿಳಿಯಲಿ ಬಿಡಲಿ ನನಗೂ ಅರ್ಥವಾಗುವುದಿಲ್ಲವೇ ಇದು?" ಎಂದರು.

ನಿನಗೆ ಅರ್ಥವಾಗದಿದ್ದರೆ ನೀನು "ನನ್ನ ಅಮ್ಮ" ಹೇಗಾಗುತ್ತಿದ್ದೆ? ನಾನು ನಿಜವಾಗಿ ಜಾತಿಭೇದವನ್ನೊಪ್ಪಿಕೊಳ್ಳುವವನು. ಆದರಿಂದ ಅವಳು ಮುಟ್ಟಿದುದೊಂದನ್ನೂ ನಾನು ತಿನ್ನಲಾರೆ. ಯಾವತ್ತು ನಾನು ಅದನ್ನೊಪ್ಪಿಕೊಳ್ಳುವುದಿಲ್ಲವೋ ಆವತ್ತೆ ಎಲ್ಲರೆದುರಿಗೂ ಅವಳ ಕೈಯಿಂದಲೇ ತಿನ್ನುತ್ತೇನೆ. ಆದರಲ್ಲೇನೂ ಮುಚ್ಚುಮರೆಮಾಡುವುದಿಲ್ಲ" ಎಂದ ವಿಪ್ರದಾಸ್.

"ಅವಳಿಗೆಲ್ಲಾದರೂ ಈ ಮಾತು–ನಾವು ಆಡಿಕೊಂಡ ಮಾತು ತಿಳಿದುಬಿಟ್ಟೀತು. ವಿಪಿನ್, ಅವಳಿಲ್ಲಿಗೆ ಬರಲಿ ಬಿಡಲಿ, ಅವಳಿಗೆ ಈ ಮಾತು ತಿಳಿಯುವುದು ಬೇಡ. ಅವಳಿಗೆ ಬಹಳ ನೋವಾಗುತ್ತೆ. ಅಲ್ಲದೆ ನಿನ್ನಲ್ಲಿ ಅವಳಿಗೆ ಬಹಳ ಗೌರವ ಇದೆ" ಎಂದಳು.

"ನನಗೆ ಅವಳು ಗೌರವ ಕೊಡುವಳೋ ಇಲ್ಲವೋ, ಅದು ನನಗೆ ತಿಳಿಯದು. ಆದರೆ ನಾನು ಅವಳು ಮುಟ್ಟಿದುದನ್ನು ತಿನ್ನುವುದಿಲ್ಲವೆಂದು ಅವಳಿಗೆ ಚೆನ್ನಾಗಿ ಗೊತ್ತು."

"ಏನು? ಇಷ್ಟೊಂದು ಅಭಿಮಾನದ ಹುಡುಗಿಯಾಗಿದ್ದೂ, ಇದನ್ನು ತಿಳಿದೂ, ನಿನ್ನಲ್ಲಿ ಗೌರವ ಭಕ್ತಿಯನ್ನಿಟ್ಟುಕೊಂಡಿರುವಳೇನು? ಎಂದರೆ ಅರ್ಥ?"

"ಗೌರವ–ಭಕ್ತಿಯ ಮಾತು ನಿಮಗೆ ಗೊತ್ತಮ್ಮ. ನನಗಿಷ್ಟು ಮಾತ್ರ ಗೊತ್ತು. ಅವಳು ಬಹಳ ಬುದ್ಧಿಶಾಲಿ, ನೀವು ಅವಳಿಂದ ಮುಚ್ಚಿ

ಡಲು ಯತ್ನಿಸಿದುದೆಲ್ಲ ವ್ಯರ್ಥವಾಯಿತೆಂದು ಮಾತ್ರ ಗೊತ್ತು."

ದಯಾಮಯಿ ಕೊಂಚ ಹೊತ್ತು ಸುಮ್ಮನಿದ್ದು ಮತ್ತೆ "ಅವಕ್ಕೇ ಇರಬೇಕು ಅವಳಷ್ಟು ಹಠ ಮಾಡುತ್ತಿದ್ದುದು" ಎಂದಳು.

"ಏನು ಹಠ ಅಮ್ಮ ?" ಎಂದ ವಿಪ್ರದಾಸ್.

"ನಾನಂತೂ ವಿಧವೆ–ಒಂದಿಷ್ಟು ಉಪ್ಪು, ಅನ್ನ ಸಾಕು. ಆದರೆ ಅವಳು ಕೇಳಬೇಕಲ್ಲ. ದಿನವೂ ಅಂಗಡಿಯಿಂದ ಬೇರೆ ಬೇರೆ ಕಾಯಿಪಲ್ಯ ತರುತ್ತಿದ್ದಳು. ತಾನೇ ಅದನ್ನು ಹೆಚ್ಚಿ ಬ್ರಾಹ್ಮಣಿಯ ಕೈಗೆ ಕೊಟ್ಟು ಹೇಳಿ ಅಡಿಗೆ ಮಾಡಿಸಿ ಕಳುಹುತ್ತಿದ್ದಳು. ಎದುರಿಗೇ ಹೋಗಿ ಯಾರಿಗೆ ಕಾಣಿಕೆ ಕೊಡಲು ಸಾಧ್ಯವಿಲ್ಲವೋ ಅವರಿಗೆ ಎರಡನೆಯವರ ಮೂಲಕವಾದರೂ ನಜರೊಪ್ಪಿಸಬೇಕೆಂದು ಅವಳಿಗೆ ಗೊತ್ತಿತ್ತು. ಅಂತಹ ಅಡಿಗೆಯನ್ನು ನಮ್ಮ ಬ್ರಾಹ್ಮಣಿ ಏಳೇಳು ಜನ್ಮದಲ್ಲಿಯೂ ತಾನಾಗಿಯೇ ಮಾಡಲಾರಳೆಂದು ನಿನಗೆ ಗೊತ್ತಾಗಲಿಲ್ಲವೇನು ?"

ವಿಪ್ರದಾಸ ನಗುತ್ತಲೇ ಉತ್ತರಕೊಟ್ಟ "ಇಲ್ಲಮ್ಮ, ನನಗೆ ಬುದ್ಧಿ ಅಷ್ಟು ದೂರ ಓಡಲಿಲ್ಲ. ನಿನ್ನ ಅತಿಥಿಗಳ ಅಡಿಗೆ ಮನೆಯ ಭಾರೀ ಯೋಜನೆಯಲ್ಲಿ ಒಂದೆರಡು ಚೂರು ಪಾರು ತಪ್ಪಿಸಿಕೊಂಡು ನಮ್ಮ ಅಡಿಗೆ ಮನೆಗೂ ಬಂದಿರಬಹುದೆಂದು ಸಂಶಯ ಬರುತ್ತಿತ್ತು. ಆದರೆ ಅದು ದೇವರ ಕೆಲಸವಲ್ಲ, ಯಾವುದೋ ವ್ಯಕ್ತಿಯ ಇಚ್ಛೆಯಿಂದಾದ ಕೆಲಸವೆಂದು ಕೇಳಿ ಮನಸ್ಸಿಗೆ ಈಗ ಆನಂದವಾಗುತ್ತಿದೆ. ಅದು ಹೋಗಲಿ ನಿನ್ನ ಆಜ್ಞೆಯೇನು ಹೇಳಿಬಿಡಮ್ಮ. ಗಾಡಿಗೆ ಹೊತ್ತಾಗಿಹೋಯಿತು. ನಾನಿನ್ನು ಸ್ಟೇಷನ್ನಿಗೆ ಓಡಬೇಕಾಗಬಹುದು. ನೀನು ವಂದನಳಿಗೆ ಕೊಟ್ಟಿದ್ದ ಆಮಂತ್ರಣ ಹಾಗೆಯೆ ಇದೆಯೋ, ಹಿಂದಕ್ಕೆ ತೆಗೆದುಕೊಂಡುಬಿಟ್ಟೆಯೋ, ಈಗಲೇ ಹೇಳಿ ಬಿಡಮ್ಮ" ಎಂದ.

ದಯಾಮಯಿ ಸತಿಯ ಕಡೆ ತಿರುಗಿ "ನಿನ್ನಭಿಪ್ರಾಯವೇನು ಸೊಸೆ ?" ಎಂದರು. ಚಿಕ್ಕತನದಲ್ಲಿ ಸತಿ, ತನ್ನ ಗಂಡನ ಜತೆಯಲ್ಲಿದ್ದಾಗ ಅತ್ತೆಯ ಜತೆಯಲ್ಲಿ ಮಾತಾಡುತ್ತಿದ್ದಳು. ಆದರೆ ಈಗಿಲ್ಲ. ಆ ಕಡೆಗೋ ಈ ಕಡೆಗೋ ಹೊರಟು ಹೋಗುವಳು; ಇಲ್ಲವೇ ಮಾತಿಲ್ಲದೆ ನಿಂತಿರುವಳು.

ಆದರೆ ಈವತ್ತು ಮಾತಾಡಿಯೇ ಬಿಟ್ಟಳು. ಮೆಲ್ಲನೆ "ಬೇಡ ಬಿಡಿ ಅತ್ತೆ–ಅವಳಿಲ್ಲಿಗೆ ಬರುವ ಅವಶ್ಯಕತೇಯೇನೂ ಇಲ್ಲ" ಎಂದಳು.

ಈ ಉತ್ತರದಿಂದ ಅತ್ತೆಗೆ ಸಂತೋಷವಾಗುವಂತಿರಲಿಲ್ಲ. ಅವರ ಅಭಿಪ್ರಾಯವೂ ಬೇರೆಯೇ ಇತ್ತು. ಬಾಯಿಯಲ್ಲಿ ಅದನ್ನು ಹೇಳಲು ಅವರಿಗೂ ಸಾಗುತ್ತಿರಲಿಲ್ಲ. ಅದರಿಂದ ಕೂಡಲೇ "ದೊಡ್ಡ ಮನುಷ್ಯರ ಮಗಳಿಗೆ ಆಗಲೇ ಅಭಿಮಾನ ಬಂತೇನೋ" ಎಂದಳು.

"ಇಲ್ಲ ಅತ್ತೆ ಅಭಿಮಾನವಲ್ಲ ಆದರೆ ನಾವಿಲ್ಲಿಗೆ ಹಿಂದಿರುಗಿ ಬಂದ ರೀತಿಯಲ್ಲಿ ಅವರನ್ನಿಲ್ಲಿಗೆ ಕರೆಸುವುದು ಸಾಧ್ಯವಿಲ್ಲ"

"ಯಾಕೆ ಸಾಧ್ಯವಿಲ್ಲ ಸೊಸೆ?–ಒಂದುಸಾರಿ ಅಚಾತುರ್ಯದ ಮಾತಾಗಿಬಿಟ್ಟರೆ ಅದನ್ನು ಮತ್ತೆ ಸರಿಮಾಡಲು ಸಾಧ್ಯವೇ ಇಲ್ಲವೇನು?"

"ಸಾಧ್ಯವೇ ಇಲ್ಲವೆಂದು ನಾ ಹೇಳುವುದಿಲ್ಲ. ಆದರೆ ಅದರ ಅವಶ್ಯಕತೆ ಏನು? ಮೊದಲೇ ಎಷ್ಟೋಬಾರಿ ಅವಳಿಲ್ಲಿಗೆ ಬರುವ ಆಸೆ ತೋರಿದಳು. ಆದರೆ ನಾವು ಒಪ್ಪಲಿಲ್ಲ. ಈಗಲೂ ಅದೇ ಅಡ್ಡಿಗಳಿವೆ. ಅವಳು ಅಡಿಗೆ ಮನೆಗೆ ಹೊಕ್ಕದಿನದಿಂದ ಆಕಡೆ ಸುಳಿಯುವುದನ್ನೇ ಬಿಟ್ಟು ಬಿಟ್ಟರು ಮೈದುನ ಹಾಗೂ ಇವರು. ಅಂತಹುದರಲ್ಲಿ ಅವಳನ್ನು ಕರೆಸುವ ಅವಶ್ಯಕತೆಯಾದರೂ ಏನು?"

ವಿಪ್ರದಾಸ್ ನಗುತ್ತ "ಆದರೆ ವಂದನಳಿಗೆ ನನ್ನಲ್ಲಿ ಶ್ರದ್ಧಾಭಕ್ತಿಯಿದೆಯೆನ್ನಲು ಅಮ್ಮನೇ ಸಾಕ್ಷಿ" ಎಂದ.

ಅತ್ತೆ ಎದುರಿಗೇ ನಿಂತಿರುವುದನ್ನು ಕ್ಷಣಕಾಲ ಮರೆತೋ ಏನೋ ಸತಿ ಮುಖವೆತ್ತಿ ಮಾತಾಡಿಬಿಟ್ಟಳು—"ಬರಿಯ ಅವರೇ ಏಕೆ, ನಾನೂ ಸಾಕ್ಷಿ. ಹೆಂಗಸರು ಒಂದುಸಾರಿ ಶ್ರದ್ಧಾಭಕ್ತಿ ತೋರಿದರೆ ಮತ್ತೆ ದೂರಲು ಹೊರಡುವುದಿಲ್ಲ. ದೇವಿ–ದೇವತೆಯರು ಕಷ್ಟ ಕೊಡುವುದೇನೂ ಕಡಿಮೆಯಿಲ್ಲ. ಆದರೂ ಪೂಜೆ ಮಾತ್ರ ನಿಲ್ಲಿಸುವುದಿಲ್ಲ–"ದುಃಖವನ್ನವರು ಒಳ್ಳೆಯದಕ್ಕೇ ಕೊಟ್ಟಿರುವರು" ಎಂದುಕೊಳ್ಳುವರು. ಅತ್ತೆ, ನಿಮ್ಮ ವಿಷಯಕ್ಕೆ ಕೂಡ ಅವಳಿಗೆ ಶ್ರದ್ಧಾಭಕ್ತಿಗಳಿಗೆ ಕಡಿಮೆಯಿಲ್ಲ. ನಿಮ್ಮಲ್ಲಿ ಅವಳಿಗಿರುವ ಪ್ರೇಮವೂ ಕಡಿಮೆಯಿಲ್ಲ. ನಿಮ್ಮ ಅಡಿಗೆ ಮನೆಯಲ್ಲಿ ಅವಳು

ಮಾಡುತ್ತಿದ್ದ ಏರ್ಪಾಟೆಲ್ಲಾ ಇವರಿಗಾಗಿ ಮಾತ್ರವೆಂಬ ನಿಮ್ಮ ಭಾವನೆಯಿರಬಹುದು. ಅದು ತಪ್ಪು. ಅವಳು ನಿಮ್ಮಿಬ್ಬರಿಗಾಗಿಯೂ ಮಾಡುತ್ತಿದ್ದಳು. ನಿಮ್ಮಿಬ್ಬರಲ್ಲಿ ಅವಳಿಗೆ ಬಹಳ ಪ್ರೀತಿ. ಅವಳ ಮೇಲೆ ನೀವು ಅಡಿಗೆಯ ಭಾರವನ್ನೆಲ್ಲಾ ವಹಿಸಿದ್ದಿರಿ. ಎಲ್ಲರ ಊಟಉಪಚಾರದ ಏರ್ಪಾಡನ್ನೂ ಅವಳಿಗೆ ಕೊಟ್ಟಿದ್ದಿರಿ. ಆದರೆ ನಿಮ್ಮನ್ನು ಬಿಟ್ಟು ಉಳಿದವರಿಗೆಲ್ಲಾ ಸೊಗಸಾದ ಊಟ ಹಾಕಲು ಅವಳಿಗೆ ಆಗುತ್ತಿರಲಿಲ್ಲ ಅತ್ತೆ. ಇಲ್ಲದಿದ್ದರೆ ಎಲ್ಲರೂ ಉಪ್ಪು, ಅನ್ನ ತಿನ್ನಬೇಕಾಗುತ್ತಿತ್ತು. ಅದಿರಲಿ ಈಗ ಮತ್ತೆ ಯಾಕೆ ಅವಳನ್ನು ಈ ಒದ್ದಾಟಕ್ಕೆ ಎಳೆಯುತ್ತೀರಿ. ನಮ್ಮ ಆಸೆಮುರುಟಿ ಬಿಟ್ಟು ಅವಳು ಹೊರಟುಹೋದಳು. ಇನ್ನು ಹಿಂದಿರುಗಿ ಬರುವುದು ಅಸಾಧ್ಯ" ಎನ್ನುತ್ತಾ ಸತಿ ಅಲ್ಲಿಂದ ಹೊರಟುಹೋದಳು.

ಆಶ್ಚರ್ಯದಿಂದ ಇಬ್ಬರೂ ಬುದ್ಧಿಶೂನ್ಯರಂತಾದರು. ಸತಿಯ ಸ್ವಭಾವ ನೋಡಿದರೆ ಈ ರೀತಿಯ ಮಾತು, ನಡವಳಿಕೆ ಬಹಳ ಅಸ್ವಾಭಾವಿಕ ಆಶ್ಚರ್ಯವಾಗಿತ್ತು. ಅವಳು ಎಂದಿನ ರೀತಿಯಲ್ಲಿ ವರ್ತಿಸಿದಳೆಂದು ಹೇಳುವುದೇ ಕಷ್ಟಸಾಧ್ಯವಾಗಿತ್ತು.

" ಏನಮ್ಮ ಸಮಾಚಾರ " ಎಂದ ವಿಪ್ರದಾಸ್.

" ನನಗೆ ತಿಳಿಯದು ಮಗು " ಎಂದಳು ದಯಾಮಯಿ.

" ಯಾತಕ್ಕೋಸ್ಕರ ನೀವು ವಂದನಳನ್ನು ಪ್ರೀತಿಸುತ್ತಿದ್ದಿರಿ? ನಿಮ್ಮ ಯಾವ ಆಸೆ ಮುರಿಯಿತು ? '' ಎಂದ ವಿಪ್ರದಾಸ್.

ನಾಚಿಕೆಯಿಂದ ದಯಾಮಯಿಯ ಮನಸ್ಸು ಕುಗ್ಗಿಹೋಯಿತು. ತಮ್ಮ ಆಸೆಯೇನಿತ್ತೆಂಬುದನ್ನು ಏನೇ ಮಾಡಿದರೂ ಬಾಯಲ್ಲಿ ಹೇಳಲಾರದಾದರು. "ಆ ಮಾತು ಇನ್ಯಾವತ್ತಾದರೂ ಹೇಳುತ್ತೇನೆ ಮಗು" ಎಂದರು.

" ಅಮ್ಮ—ಅಕ್ಷಯಬಾಬುವಿನ ಮಗಳ ವಿಷಯದಲ್ಲಿ ಈಗ ನಿಮ್ಮ ಅಭಿಪ್ರಾಯವೇನೆಂಬುದನ್ನಾದರೂ ತಿಳಿಸಿಬಿಡಿ. ಅವರಿಗೆ ಏನಾದರೊಂದು ಉತ್ತರ ಕೊಡಬೇಡವೇ " ಎಂದ ವಿಪ್ರದಾಸ್.

" ನನ್ನದೇನೂ ಅಭ್ಯಂತರವಿಲ್ಲ ವಿಪಿನ್. ನಿಮ್ಮ ಇಷ್ಟವಿದ್ದರೆ ಸರಿ. ಹಾಗೆಯೇ ದ್ವಿಜುವನ್ನೂ ಒಂದು ಮಾತು ಕೇಳಿಬಿಡು-ಏನು ಹೇಳುವನೊ"

ಎಂದು ಹೇಳಿ ದಯಾಮಯಿ ಕೋಣೆಬಿಟ್ಟು ಹೊರಟುಹೋದಳು. ವಿಪ್ರದಾಸನಿಗೆ ಅವಳ ಮಾತು ಚೆನ್ನಾಗಿ ಸ್ಫುರಿಸಲಿಲ್ಲ. ಆದರೆ ಸ್ಪಷ್ಟಮಾಡಿಕೊಳ್ಳಲು ಅವನಿಗೆ ಸಮಯವೂ ಇರಲಿಲ್ಲ!

* * * *

ವಿಪ್ರದಾಸ್ ಕಲಕತ್ತೆ ಸೇರಿ ನೋಡಿದರೆ ಮನೆ ತೆರವಾಗಿತ್ತು. ವಂದನ ಅವಳ ತಂದೆ ಇಬ್ಬರೂ ಕೊಂಚಹೊತ್ತಿಗೆ ಮುಂಚೆ ಹೊರಟುಹೋಗಿದ್ದರು. ಹಾಗಾದೀತೆಂದು ಅವನಿಗೆ ಇದುವರೆಗೂ ಅನಿಸಿರಲಿಲ್ಲ. ಇಷ್ಟು ಅವಸರವಾಗಿ ಏಕೆ ಹೊರಟುಹೋದರೆಂದೂ ಅವನಿಗೆ ತಿಳಿಯಲಿಲ್ಲ. ಅನ್ನದಳಿಗೂ ಕಾರಣ ಗೊತ್ತಿರಲಿಲ್ಲ. ರಾಯ್ ಸಾಹೇಬರಿಗೆ ಹೋಗಲಿಷ್ಟವಿರಲಿಲ್ಲ, ಆದರೆ ಅವರ ಮಗಳೇ ಹಠಮಾಡಿ ಅವರನ್ನು ಇಲ್ಲಿಂದ ಹೊರಡಿಸಿದಳೆಂಬುದು ಮಾತ್ರ ಅನ್ನದಳಿಗೆ ಗೊತ್ತಿತ್ತು. ವಂದನಳ ಮೇಲೆ ಯಾವ ಬಗೆಯ ಅಡ್ಡಿ ಆತಂಕವೂ ಇರಲಿಲ್ಲ ನಿಜ. ಇಲ್ಲಿ ಅವಳು ಅತಿಥಿ ಮಾತ್ರ—ಆದರೂ ಅವಳು ಹೇಳದೆ ಕೇಳದೆ, ಕಾಯಿಲೆಯಿಂದ ವೈತಿಳಿಯದ ದ್ವಿಜದಾಸನನ್ನು ಕೂಡ ಬಿಟ್ಟು ಕಾರಣವೇ ಇಲ್ಲದೆ ಅವಸರದಿಂದ ಹೊರಟುಹೋದಳಲ್ಲ—ಎಂದು ವಿಪ್ರದಾಸನ ಮನಸ್ಸಿಗೆ ಬಹಳ ದುಃಖವಾಯಿತು. ಕೋಪಗೊಂಡ ಅವನಿಗೆ ವಂದನ ನಿಷ್ಠುರ ನಿರ್ದಯಳೆಂದೂ ಅವಳು ಶಿಕ್ಷಾರ್ಹಳೆಂದೂ ಎನಿಸಿತು. ಆದರೆ ತನ್ನ ಅಂತರ್ಯವನ್ನು ಪ್ರಕಾಶಗೊಳಿಸುವುದು ಅವನ ಸ್ವಭಾವಕ್ಕೇ ವಿರುದ್ಧ. ಅಂತೆಯೇ ಅದು ಮನಸ್ಸಿನಲ್ಲಿಯೇ ಉಳಿಯಿತು.

ನಾಲ್ಕೈದು ದಿನದ ನಂತರ ವಿಪ್ರದಾಸ್ ಹೈಕೋರ್ಟಿನಿಂದ ಮನೆಗೆ ಹಿಂದಿರುಗಿದಾಗ ಬಹಳ ಜ್ವರ ಬಂದಿತ್ತು. ಮಲೇರಿಯಾ ಇದಬಹುದು—ಇನ್ನೇನಾದರೂ ಇರಬಹುದು. ಕಣ್ಣುಗಳೆರಡೂ ಕೆಂಡವಾಗಿದ್ದುವು. ತಲೆ ಸಿಡಿಯುತ್ತಿತ್ತು ಅನ್ನದಳ ಹತ್ತಿರ ಬಂದವನೇ "ಅನ್ನದ, ನಾನೆಂದೂ ಕಾಯಿಲೆ ಬಿದ್ದವನೇ ಅಲ್ಲ ಜ್ವರಾಸುರನಿಗೆ ಬಹಳ ದಿನದಿಂದ ಮೋಸ ಮಾಡುತ್ತಾ ಬಂದಿದೇನೆ. ಅವನ್ನೆಲ್ಲಾ ಈಗ ಬಡ್ಡಿಯ ಸಮೇತ ವಸೂಲು ಮಾಡಿಕೊಳ್ಳುವಂತೆ ಕಾಣುತ್ತದೆ. ಕೊಂಚದಿನವಾದರೂ ತ್ರಾಸಮಾಡೀತೆಂದೇ ಕಾಣುತ್ತದೆ. ಸುಮ್ಮನೆ ಹಾಗೆಯೇ ಬಿಟ್ಟರೆ" ಎಂದ.

ಅವನ ಸ್ಥಿತಿ ನೋಡಿ ಅನ್ನದಳಿಗೂ ಗಾಬರಿಯಾಯಿತು. ಆದರೂ ಅವನಿಗೆ ಧೈರ್ಯಕೊಡುವ ದನಿಯಲ್ಲಿ "ಇಲ್ಲ, ಈ ಪುಣ್ಯಪುರುಷನ ಮೇಲೆ ಯಾವ ರಾಕ್ಷಸ ಶಕ್ತಿಯೂ ನಡೆಯದು. ಎರಡೇ ದಿನದಲ್ಲಿ ನೀವು ಸ್ವಸ್ಥವಾಗುವಿರಿ. ಆದರೂ ವೈದ್ಯರನ್ನು ಕರೆಯಲು ಯಾರನ್ನಾದರೂ ಕಳಿಸುತ್ತೇನೆ. ನಾವು ಅಸಡ್ಡೆ ಮಾಡಬಾರದು" ಎಂದಳು.

"ಕರೆಸು" ಎಂದು ಹಾಸಿಗೆಯ ಮೇಲೆಬಿದ್ದುಕೊಂಡ ವಿಪ್ರದಾಸ್.

ಅನ್ನದಳಿಗೆ ಬಹಳ ತೊಂದರೆಗಿಟ್ಟುಕೊಂಡಿತು. ಹಳ್ಳಿಯಲ್ಲಿ ವಾಸುದೇವನ ಕಾಯಿಲೆಯ ಸುದ್ದಿ ಕೇಳಿ ದ್ವಿಜದಾಸ ಹೊರಟುಹೋಗಿದ್ದ, ದತ್ತಜಿ ಊರಿನಲ್ಲಿರಲಿಲ್ಲ–ಯಾವುದೋ ಕೆಲಸದ ಮೇಲೆ ಹೋಗಿದ್ದರು; ತಾನೊಬ್ಬಳೇ; ಏನು ಮಾಡುವುದೆಂದು ಅವಳಿಗೆ ತೋಚಲಿಲ್ಲ. ಬೆಳಿಗ್ಗೆಯೇ ವಿಪ್ರದಾಸನ ಬಳಿ ಬಂದು "ವಿಪಿನ್‌ಬಾಬು, ಒಂದು ಮಾತು ಹೇಳುತ್ತೇನೆ. ಕೋಪಗೊಳ್ಳುವುದಿಲ್ಲ ತಾನೆ?" ಎಂದಳು.

"ನಿನ್ನ ಮಾತಿಗೆ ಯಾವತ್ತಾದರೂ ಕೋಪಗೊಂಡಿರುವೆನೇ?"

ಅನ್ನದ ಹತ್ತಿರ ಕುಳಿತು ಹಣೆಯ ಮೇಲೆ ಕೈಯಾಡಿಸುತ್ತಾ ಹೇಳಲಾರಂಭಿಸಿದಳು. "ಪ್ರಾಣಕೊಟ್ಟಾದರೂ ರೋಗಿಯ ಸೇವೆ ಮಾಡಬಲ್ಲೆ ಆದರೆ ನಾನು ಹೆಣ್ಣು ಹೆಂಗಸು. ನನಗೇನೂ ತಿಳಿಯುವುದಿಲ್ಲ. ಹಳ್ಳಿಗೆ ಹೇಳಿಕಳಿಸಲೆಂದರೆ ಅಲ್ಲಿಯೂ ಮಗುವಿಗೆ ಕಾಯಿಲೆ–ಮಗುವನ್ನು ಬಿಟ್ಟು ಸೊಸೆ ಹೇಗೆ ತಾನೇ ಬಂದಾಳು. ಅದಕ್ಕೇ ಯೋಚಿಸುತ್ತಾ ಇದೀನಿ-ವಂದನಳಿಗೆ ಯಾಕೆ ಹೇಳಿಕಳಿಸಬಾರದು?" ಅಂತ ಎಂದಳು.

"ಬೊಂಬಾಯಿಯೇನು ಪಕ್ಕದಲ್ಲಿದೆಯೇ ಅನ್ನದ, ಸುದ್ದಿ ಕೇಳಿ ಕೂಡನೆಯೇ ಅವಳಿಲ್ಲಿಗೆ ಓಡಿಬರಲು. ಅವಳು ಬರುವಷ್ಟರಲ್ಲಿ–ಹುಳಿ ಕಿವುಚುವುದರಲ್ಲೇ ಬೇಳೆ ಕರಗಿ ಹೋದರೆ!" ಎಂದ ವಿಪ್ರದಾಸ್ ನಗುತ್ತ

"ದೇವರೇ ಕಾಪಾಡಬೇಕು, ಬಿಡ್ತು ಬಿಡ್ತು–ಇಂತಹ ಮಾತ ಆಡಬೇಡಿ. ವಂದನಾ ಕಲ್ಕತ್ತೆಯಲ್ಲೇ ಇದಾಳೆ. ಇನ್ನೂ ಬೊಂಬಾಯಿಗೆ ಹೋಗಿಲ್ಲ."

" ವಂದನ ಕಲ್ಕತ್ತದಲ್ಲೇ ಇರುವಳೇ ? "

" ಹೌದು, ಅವಳ ಸೋದರತ್ತೆಯ ಮನೆಯಲ್ಲಿದ್ದಾಳೆ. ಬಾಲೀಗಂಜಿನಲ್ಲಿ. ಅವಳ ಸೋದರಮಾವ ಪಂಜಾಬಿನಲ್ಲಿ ದೊಡ್ಡ ವೈದ್ಯ. ತಮ್ಮ ಮಗಳ ಮದುವೆ ಮಾಡಲು ಇಲ್ಲಿಗೆ ಬಂದಿದಾರೆ. ಅನಿರೀಕ್ಷಿತವಾಗಿ ಹೌರಾ ನಿಲ್ದಾಣದಲ್ಲಿ ಭೇಟಿಯಾಯಿತಂತೆ. ಅವರು ರೈಲಿನಿಂದಿಳಿಯುತ್ತಿದ್ದರು. ಇವರು ರೈಲಿಗೆ ಹತ್ತುವುದರಲ್ಲಿದ್ದರು. ಸೋದರತ್ತೆ ಬಲವಂತದಿಂದ ತಮ್ಮ ಮನೆಗೆ ಇವರನ್ನು ಕರೆದುಕೊಂಡುಹೋದಳು. 'ಸದ್ಯ-ಒಮ್ಮೆ ನನ್ನ ಕೈಗೆ ಸಿಕ್ಕಿರುವಾಗ, ಇನ್ನು ಹುಡುಗಿಯ ಮದುವೆಯಾಗುವತನಕ ನಿಮ್ಮನ್ನು ಬಿಡುವುದಿಲ್ಲ' ವೆಂದಳು. ವಂದನಳ ತಂದೆಯು ಒಂದು ದಿನವಿದ್ದು ಮಾರನೆಯ ದಿನ ಬೊಂಬಾಯಿಗೆ ಹೋದರು."

" ಸೋದರತ್ತೆಯೇ ? "

" ಹೂಂ. ಅವಳ ದೊಡ್ಡ ಸೋದರತ್ತೆ. ದೂರದೇಶದಲ್ಲಿರುವುದರಿಂದ ಅಷ್ಟಾಗಿ ಹೋಗಿ ಬರುವಂತಿಲ್ಲ. ಆದರೇನು-ಸೋದರತ್ತೆಯೇ "

" ನಿನಗೆ ಇಷ್ಟೆಲ್ಲ ಸಮಾಚಾರ ಹೇಗೆ ತಿಳಿಯಿತು ಅನ್ನದ ? "

" ನಿನ್ನೆ ಸಂಜೆ ಅವರು ತಿರುಗಾಡುತ್ತ ಹಾಗೆಯೇ ಇಲ್ಲಿಗೂ ಬಂದಿದ್ದರು. ದ್ವಿಜುವಿನ ಆರೋಗ್ಯ ವಿಚಾರಿಸಲು. ಸಂಜೆ ನಾನು ಕಿಟಕಿಯ ಹತ್ತಿರ ಕುಳಿತು ಹಂಜಿ ನೂಲುತ್ತಿದ್ದೆ-ಆಗ ಇದ್ದಕ್ಕಿದ್ದಂತೆ ಹೊರ ಅಂಗಳದಲ್ಲಿ ಯಾರೋ ಎರಡು ಗಾಡಿಯ ಜನ ಬಂದು ನಿಂತರು. ಗಂಡಸರು ಹೆಂಗಸರೆಲ್ಲಾ ಇದ್ದರು. ಯಾರಿರಬಹುದು ಎಂದು ತಿರುಗಿನೋಡಲು ವಂದನಾ ಕಣ್ಣಿಗೆ ಬಿದ್ದಳು. ಆದರೆ ಅವಳ ಉಡಿಗೆ ತೊಡಿಗೆ ಹೇಗಿತ್ತೆಂದರೆ ಅವಳನ್ನು ಒಮ್ಮೆಗೇ ಗುರುತು ಹಿಡಿಯುವುದೇ ಕಷ್ಟವಾಗುತ್ತಿತ್ತು. ಅವಳು ಹುಡುಗಿಯೆಂದು ಹೇಳುವಂತಿರಲಿಲ್ಲ. ಏನುಮಾಡಲಿ, ಎಲ್ಲಿ ಕೂಡಿಸಲಿ ನನಗೊಂದೂ ತೋಚಲೇ ಇಲ್ಲ. ಕೊಂಚ ಹೊತ್ತಾದಮೇಲೆ ಅವಳೇ ಮೇಲೆ ಬಂದಳು. ಎಲ್ಲರನ್ನೂ ವಿಚಾರಿಸಿ, ತನ್ನ ವಿಚಾರವನ್ನೂ ಹೇಳಿದಳು. "ಇನ್ನು ಏನಿಲ್ಲೆಂದರೂ ಒಂದು ತಿಂಗಳು ಕಲಕತ್ತೆಯಲ್ಲೇ

ಇರುತ್ತೇವೆ. ಬಹಳ ಸುಖವಾಗಿದೆ–ಥಿಯೇಟರ್, ಸಿನಿಮಾ, ವನಭೋಜನ ಇದೇ ನಮ್ಮ ನಿತ್ಯ ಹೊಸ ಅನುಭವಗಳು '' ಎಂದು ಅವಳ ಬಾಯಿಂದಲೇ ಕೇಳಿದೆ."

"ವಾಸುವಿನ ಕಾಯಿಲೆಯ ವಿಚಾರವಾಗಿ ಏನಾದರೂ ಹೇಳಿದೆಯಾ?" ಎಂದ ವಿಪ್ರದಾಸ.

" ಹೂಂ–ಹೇಳದೆ ಏನು. ಕೇಳಿ 'ಏನೂ ಪರವಾಗಿಲ್ಲ, ಸರಿಹೋಗುತ್ತಾನೆ,' ಎಂದಳು."

ವಿಪ್ರದಾಸ ಕ್ಷಣಕಾಲ ಸುಮ್ಮನಿದ್ದು " ಅವಳಿಗೆ ಸುದ್ದಿ ಕೊಟ್ಟಾದರೂ ಏನು ಪ್ರಯೋಜನ ಅನ್ನದ. ಆರೋಗ್ಯ ಸರಿಹೋಗುತ್ತದೆ. ಕೆಲವು ದಿನ ನೀನೇ ನನಗೆ ಆರೈಕೆ ಮಾಡಲಾರೆಯಾ ?'' ಎಂದ.

" ಮಾಡದೆ ಏನು, ಆದರೂ ಒಂದು ಮಾತು ಹೇಳಿ ಬಿಡುವುದು ಸರಿಯೆಂದು ನನಗೆ ತೋರುತ್ತೆ. ಇಲ್ಲದಿದ್ದರೆ ನೊಸೆ ಬಹಳ ಅಸಮಾಧಾನ ಪಟ್ಟುಕೊಳ್ಳಬಹುದು ಏನಾದರೂ ಆಗಲಿ, ಎಷ್ಟಾದರೂ ಅವರ ತಂಗಿಯಲ್ಲವೇ ?"

" ನಿನಗೆ ಮನೆ ಗೊತ್ತೇ ?"

" ನಮ್ಮ ಡ್ರೈವರಿಗೆ ಗೊತ್ತು. ಅವರನ್ನೆಲ್ಲಾ ಅಲ್ಲಿಗೆ ಅಂದು ಬಿಟ್ಟು ಬಂದಿದ್ದ."

ವಿಪ್ರದಾಸ ಕೊಂಚ ಹೊತ್ತು ಸುಮ್ಮನಿದ್ದು–" ಹೂಂ–ಹೇಳಿ ಕಳಿಸು. ಆದರೆ ಅಷ್ಟೊಂದು ಸಂತೋಷ ಆನಂದಗಳನ್ನು ಬಿಟ್ಟು ಅವಳಿಲ್ಲಿಗೆ ಬರಬೇಕಲ್ಲ! ಏನಾದರೂ ಮಾಡಿಕೋ, ನನಗೊಂದೂ ತಿಳಿಯುವುದಿಲ್ಲ " ಎಂದ.

" ನನಗೂ ಗೊತ್ತಾಗುವುದಿಲ್ಲ. ಆದರೂ ಒಂದು ಮಾತು ಹೇಳಿ ಕಳಿಸುತ್ತೇನೆ."

ವಿಪ್ರದಾಸ್ ನಿರುತ್ಸಾಹದ ದನಿಯಲ್ಲಿ ಒಣಗಿದ ಕಂಠದಿಂದ ಮೆಲ್ಲನೆ '' ನಿನಗೆ ಅದೇ ಇಷ್ಟವಾದರೆ ಹೇಳಿಕಳಿಸನ್ನದ'' ಎಂದ.

## ೧೭

ಆಕಸ್ಮಾತ್ ಹೌರಾ ನಿಲ್ದಾಣದಲ್ಲಿ ವಂದನಳನ್ನು ಭೇಟಿಮಾಡಿದ ಸೋದರತ್ತೆಗೆ ವಂದನಳ ಬೊಂಬಾಯಿ ಪ್ರಯಾಣ ನಿಲ್ಲಿಸಿ ಅವಳನ್ನು ತಮ್ಮ ಮನೆಗೆ ಕರೆದೊಯ್ಯಲು ಕಷ್ಟವಾಗಲಿಲ್ಲ. ತಮ್ಮ ಮಗಳ ಮದುವೆಗಾಗಿ ಅವರು ತಮ್ಮ ಗಂಡ ಕೆಲಸದಲ್ಲಿದ್ದ ಪಂಜಾಬಿನಿಂದ ಕಲ್ಕತ್ತೆಗೆ ಹಿಂದಿರುಗುತ್ತಿದ್ದರು. ತನ್ನ ಸೋದರತ್ತೆಯ ಮಾತಿಗೆ ವಂದನ ಸುಲಭವಾಗಿ ಒಪ್ಪಿಕೊಳ್ಳಲು ಈ ಕಾರಣವಲ್ಲದೆ ಮತ್ತೂ ಒಂದು ಕಾರಣ ವಿತ್ತು. ಚಿಕ್ಕಂದಿನಿಂದಲೂ ವಂದನ ಹೆಚ್ಚು ದಿನಗಳು ಪ್ರವಾಸಗಳಲ್ಲಿಯೇ ಕಳೆದಿದ್ದಳು. ಅವಳು ಯಾವ ಸಮಾಜದವಳೋ ಭಾಗವೋ ಆ ಸಮಾಜದ ಕಲಕತ್ತೆಯಲ್ಲಿಯೇ ಇದ್ದರೂ, ಇದುವರೆಗೂ ಅವಳಿಗೆ ಅವರೊಂದಿಗೆ ಜನ ಬರಿಯ ಪರಿಚಯವಿತ್ತೇ ಹೊರತು ಆಳವಾದ ಮೈತ್ರಿಬೆಳೆದಿರಲಿಲ್ಲ. ಅವಳಿಗೆ ಆಗಿದ್ದ ಸಾಧಾರಣ ಪರಿಚಯು ಕೂಡ ಪತ್ರಿಕೆಗಳು, ಉಪನ್ಯಾಸಗಳು, ಕಾದಂಬರಿಗಳಿಂದ ಮಾತ್ರ. ಕಲಕತ್ತೆ ನಿತ್ಯದ ಪ್ರಯಾಣದ ಸ್ಥಳವಾದವರ ಬಾಯಿಂದ ಎಷ್ಟೋ ನಿಜವಾದ ಸಂಗತಿ ಕೇಳಿದ್ದಳು. ಅನಿತಾಚಟರ್ಜಿ, ಎಂ.ಎ. ಬಿನೀತಾಬ್ಯಾನರ್ಜಿ, ಬಿ.ಎ.—ಅನುಸೂಯಾ, ಚಿತ್ರಲೇಖಾ, ಪ್ರಿಯಂವದಾ ಇತ್ಯಾದಿ ಬೆರಗು ಹೆಸರಿನ ಬೆಡಗಿನ ಕಾದಂಬರಿಗಳು–ಇಪ್ಪತ್ತನೆಯ ಶತಮಾನದ ಅತ್ಯಾಧುನಿಕ ಮನೋಭಾವದ ರೋಮಾಂಚಕಾರಿ ಜೀವನ ಯಾತ್ರೆಯ ವಿವರಣೆಗಳು ಇತ್ಯಾದಿ; ಆದರೆ ಇದರಲ್ಲಿ ಎಷ್ಟು ಮಾತು ನಿಜ, ಎಷ್ಟು ಸುಳ್ಳೆಂದು ತಿಳಿದುಕೊಳ್ಳುವುದು ಅವಳಿಗೆ ಕಷ್ಟವಾಗಿತ್ತು. ಇದರಿಂದ ಅವಳ ಮನಸ್ಸಿನಲ್ಲಿದ್ದ ತನ್ನ ಸಮಾಜದ ವಿಚಾರಗಳಲ್ಲಿ ಕೆಲವು ಚಿತ್ರಗಳು ಅತಿ ಬಣ್ಣವಾಗಿದ್ದುವು, ಕೆಲವು ಮಸಕಾಗಿದ್ದುವು, ಪ್ರತ್ಯಕ್ಷವಾದ ಅನುಭವದಿಂದ ಈ ಚಿತ್ರವನ್ನು ಸ್ಪಷ್ಟಗೊಳಿಸಿಕೊಳ್ಳುವಂತಹ ಸುಯೋಗ ತನ್ನ ಸೋದರತ್ತೆಯ ಮಗಳು ಪ್ರಕೃತಿಯ ಮದುವೆ. ಅದನ್ನು ಬಿಟ್ಟುಬಿಡುವ ಮನಸ್ಸು ಅವಳಿಗಾಗಲಿಲ್ಲ. ಅಂತೆಯೇ ಸುಲಭವಾಗಿಯೇ ಅವಳು ಅವರ ಮಾತಿಗೆ ಒಪ್ಪಿ ಅವರೊಂದಿಗೆ ಬಾಲಿಗಂಜಿನ ಮನೆಗೆ ಬಂದು ಬಿಟ್ಟಳು. ಅವರ ಸಮಾಜದ ಬಹುಮಂದಿಯ ಪರಿಚಯ ಅವರಿಗಿತ್ತು. ಇದೂ ಅಲ್ಲದೆ ಪ್ರಕೃತಿ ತನ್ನ ಬಿ.ಎ. ಪರೀಕ್ಷೆಗೆ ಇಲ್ಲಿಯೇ ಓದಿದ್ದುದರಿಂದ

ಅವಳ ಶಾಲಾ ಕಾಲೇಜಿನ ಗೆಳತಿಯರ ಸಂಖ್ಯೆಯೂ ಏನೂ ಕಡಿಮೆಯಿರ ಲಿಲ್ಲ. ಇಲ್ಲಿಗೆ ಬಂದ ಮೇಲೆ ಅವರೆಲ್ಲರ ಜತೆಯಲ್ಲಿ ಕೆಲವುಕಾಲ ಕಳೆದು ಹೋಯಿತು ತಂದೆ ಅನಾಥನಾಥರಾಯ್, ಬೊಂಬಾಯಿಗೆ ಹೊರಟು ಹೋದರು. ಆದರೆ ಸುಧೀರ್ ಅಲ್ಲಿಯೇ ಉಳಿದುಕೊಂಡ. ಬರಲಿರುವ ವಿವಾಹೋತ್ಸವ ದಿನವೂ ಹತ್ತಿರಬರುತ್ತಿತ್ತು. ಅಂದು ಎಲ್ಲರೂ ವಿಹಾರಾರ್ಥ ಹೋಗಿದ್ದಾಗ ಬರುವ ದಾರಿಯಲ್ಲೇ ದ್ವಿಜದಾಸನ ದೇಹಸ್ಥಿತಿ ವಿಚಾರಿಸಿ ಕೊಂಡು ಹೋಗಲು ಅವರೆಲ್ಲರೊಂದಿಗೆ ಅಲ್ಲಿಗೆ ಹೋಗಿದ್ದಳು. ಅನ್ನದ ಅದೇ ಸುದ್ದಿಯನ್ನೇ ಅಂದು ವಿಪ್ರದಾಸನಿಗೆ ಹೇಳಿದ್ದು.

ಸೋದರತ್ತೆಯ ಮನೆಯಲ್ಲಿ ಅವಳ ಸಮಾಜದ ಜನರ ಹೋಗೋಣ ಬರೋಣ, ತಿನ್ನೋಣ ಮಾಡೋಣ, ಗಲಾಟೆ, ಸಲಹೆ-ಜಗಳಗಳಿಗೇನೂ ಕೊರತೆಯಿರಲಿಲ್ಲ. ಅತಿಥಿಗಳೆಲ್ಲ ಬಂದರು. ಮಹಡಿಯ ಮೇಲಿನ ಕೋಣೆ ಯಲ್ಲಿ ಬಹಳ ಸಮಾರಂಭದಿಂದ ಎಲ್ಲರೂ ಚಾ ಕುಡಿಯುತ್ತಿದ್ದರು. ಅಷ್ಟ ರಲ್ಲೇ ವಿಪ್ರದಾಸನ ದೊಡ್ಡಕಾರು ಹೊರಬಾಗಿಲಿನಿಂದ ಒಳಕ್ಕೆ ಪ್ರವೇಶಿಸಿತು. ನೌಕರ ಚಾಕರರೆಲ್ಲರೂ ಎಚ್ಚತ್ತರು. ಆದರೆ ಡ್ರೈವರು ತೆರೆದ ಬಾಗಿಲಿನಿಂದ ಹೊರಗಿಳಿದ ಅನ್ನದಳ ಪೋಷಾಕಿನ ಸಾಮಾನ್ಯತೆ, ಸರಳತೆ ಕಂಡು ಅವರೆಲ್ಲರಿಗೂ ಆಶ್ಚರ್ಯವಾಯಿತು. ಅಸಮಾಧಾನವೂ ಆಯಿತು. ಕಾರಿಗೂ ಈ ಹೆಂಗಸಿಗೂ ಕೊಂಚವೂ ಹೊಂದಿಕೊಳ್ಳುತ್ತಿರಲಿಲ್ಲ. ಅನ್ನದಳ ಉಡುಪು ಬಹು ಸಾಧಾರಣ. ಒಂದು ಅಂಚಿಲ್ಲದ ಬಿಳಿಯ ಸೀರೆ, ಅಂತ ಹುದೇ ಒಂದು ಬಿಳಿಯ ಚದ್ದರ್, ಖಾಲಿ ಕೈ, ತಲೆಯ ಮೇಲಿನ ಸೆರಗು ಮುಖವನ್ನರ್ಧ ಮುಚ್ಚುವಂತೆ ಇಳಿಬಿದ್ದಿತ್ತು. ನೌಕರ ಚಾಕರರ ಉಡು ಪಿನ ಬಗೆ ಕಂಡು ಅವಳಿಗೆ ಸಂಕೋಚವಾಗಿರಬೇಕು. ಅವರಲ್ಲಿ ಯಾರು ಯಾವ ದೇಶದವರೆಂದು ಹೇಳುವುದೇ ಕಠಿಣವಾಗಿರಬೇಕು. ಹಾಗೂ ಹತ್ತಿರದಲ್ಲಿದ್ದ ಒಬ್ಬ ನೌಕರನನ್ನು ಅವನು ಬಂಗಾಳಿಯೇ ಇರಬೇಕೆಂದು ಕೂಗಿ "ವಂದನಾ ಮನೆಯಲ್ಲಿರುವರೇ ?" ಎಂದು ಕೇಳಿದಳು.

ಆ ಬಂಗಾಲಿ ನೌಕರ "ಇದ್ದಾರೆ. ಮಹಡಿಯಮೇಲೆ ಎಲ್ಲರೂ ಚಾ ಕುಡಿಯುತ್ತಿದ್ದಾರೆ. ನೀವು ಒಳಗೆ ಬಂದು ಕುಳಿತಿರಿ" ಎಂದ.

" ಇಲ್ಲ. ನಾಸಿಲ್ಲೇ ನಿಂತಿರುತ್ತೇನೆ ಅವರಿಗೊಂದಿಷ್ಟು ಸುದ್ದಿ ಕೊಡಲಾಗುವುದಿಲ್ಲವೇ ?"

" ಏನು ಹೇಳಲಿ ?"

" ವಿಪ್ರದಾಸಬಾಬುವಿನ ಮನೆಯಿಂದ ಅನ್ನದ ಬಂದಿರುವಳೆಂದು ಹೇಳು ಹೋಗು "

ಆಳು ಹೊರಟುಹೋದ. ಕೊಂಚ ಹೊತ್ತಾದ ಮೇಲೆ ವಂದನ ಕೆಳಗಿಳಿದು ಬಂದಳು ಅನ್ನದಳ ಕೈಹಿಡಿದುಕೊಂಡು ಅವಳನ್ನು ಕೋಣೆಯೊಳಕ್ಕೆ ಕರೆದುಕೊಂಡು ಹೋಗಿ ಕೂರಿಸಿಕೊಂಡಳು. ಅವಳು ಹೀಗೆಂದೂ ಮಾಡಿರಲಿಲ್ಲ. ಸಾಮಾಜಿಕ ದೃಷ್ಟಿ ಕೋನದಲ್ಲಿ ಈ ವಿಧವೆ ತನಗಿಂತ ಬಹಳ ಕೀಳೆಂಬುದನ್ನೂ ಅವಳು ಕೇವಲ ದಾಸಿಯೆಂಬುದನ್ನೂ ಮರೆತುಬಿಟ್ಟಳು. ಕಾರಣವೇ ಇಲ್ಲದೆ ಅವಳ ಕಣ್ಣುಗಳು ತುಂಬಿ ಬಂದವು. " ಅನು, ಅಕ್ಕ, ನೀನು ನನ್ನನ್ನು ನೋಡಿಕೊಂಡು ಹೋಗಲು ಬರುವೆಯೆಂದು ನಾನು ಅಂದುಕೊಂಡೇ ಇರಲಿಲ್ಲ. ನೀವೆಲ್ಲ ನನ್ನನ್ನು ಮರೆತುಬಿಟ್ಟಿರುವಿರಿ ಎಂದಿದ್ದೆ." ಎಂದಳು.

"ಯಾಕೆ ಮರೆಯುವುದು? ಮರೆತಿಲ್ಲ. ದೊಡ್ಡಬಾಬು ನನ್ನನ್ನು ತಮ್ಮ ಬಳಿಗೆ—"

" ಉಹುಂ ಅನು ನನ್ನನ್ನು " ತಾವು '' ಎನ್ನ ಕೂಡದು. ನಾನು ಉತ್ತರವನ್ನೆ ಕೊಡುವುದಿಲ್ಲ "

ಅನ್ನದ ಈಕೆ ಮಾತಿಗೇನೂ ಅಡ್ಡಿಯನ್ನೊಡ್ಡಲಿಲ್ಲ. ಸುಮ್ಮನೆ ನಕ್ಕು—" ಅವರನ್ನೆಲ್ಲಾ ನಾನೇ ಕಂಕುಳಲ್ಲೆತ್ತಿ ಆಡಿಸಿ ಬೆಳೆಸಿದೆ ಆದರಿಂದ ' ನೀನು ' ಎನ್ನುತ್ತೇನೆ. ಆದರೆ ನಿಮ್ಮನ್ನು ಹಾಗನ್ನಲೆ! ಇಷ್ಟಲ್ಲದೆ ನಾನು ಬರಿಯ ದಾಸಿ ಅಲ್ಲವೆ ?" ಎಂದಳು.

" ಅದಿರಲಿ. ಮುಖರ್ಜಿಗಳು ಕಲಕತ್ತೆಗೆ ಬಂದು ಐದಾರು ದಿನವಾಗಿರಬೇಕಲ್ಲವೇ ? ಅವರೇ ಒಂದು ದಿನ ಇಲ್ಲಿಗೆ ಬರಲಾಗಲಿಲ್ಲವೇ ? ನಾನು ಬೊಂಬಾಯಿಗೆ ಹೋಗಿಲ್ಲವೆಂಬುದು ಅವರಿಗೆ ತಿಳಿಯದೇ ?''

"ತಿಳಿದಿದೆ. ನಾನೇ ತಿಳಿಸಿವೆ. ಆದರೆ ಅವರಿಗೆಷ್ಟು ಕೆಲಸವಿದೆ ಯೆಂದು ನಿನಗೇ ಗೊತ್ತು. ಒಂದು ಕ್ಷಣವೂ ಅವರಿಗೆ ಪುರುಸತ್ತೇ ಸಿಕ್ಕು ವುದಿಲ್ಲ.

ಇದನ್ನು ಕೇಳಿ ವಂದನಳಿಗೇನೂ ಸಮಾಧಾನವಾಗಲಿಲ್ಲ. "ಕೆಲಸ ಎಲ್ಲರಿಗೂ ಇರುತ್ತದೆ. ಅವರಿಗೆ ಹೋಗಿ ಹೇಳು, ನನ್ನ ಸೋದರತ್ತೆಯ ಬಳಿ ಅವರಿಗಿರುವಷ್ಟು ಧನ-ದೌಲತ್ತು ಇಲ್ಲ ನಿಜ. ಆದರೂ ಒಂದು ಸಾರಿ ನನ್ನನ್ನು ವಿಚಾರಿಸಿಕೊಂಡು ಹೋಗಲು ಇಲ್ಲಿಗೆ ಬಂದರೆ ಅವರ ಜಾತಿ ಯೇನೂ ಕೆಡುವುದಿಲ್ಲ, ಅವರ ಮಾನ ಮರ್ಯಾದೆಗೂ ಕುಂದುಂಟಾ ಗುವುದಿಲ್ಲವೆಂದು ಹೇಳು" ಎಂದಳು.

ಈ ಚುಚ್ಚು ಮಾತುಗಳಿಗೆಲ್ಲಾ ಉತ್ತರಕೊಡುವುದು ಅನ್ನದಳ ಕೆಲಸವಲ್ಲ. ಅಲ್ಲಿಗೆ ಬಾರೆಂದು ಮಾತ್ರ ಹೇಳಿದಳು. ಆದರೆ ಅವಳ ಮಾತನ್ನು ಕೇಳುವಷ್ಟು ಸಹನೆ ವಂದನಳಿಗಿರಲಿಲ್ಲ. ಮಾತು ಮುಗಿಯುವಷ್ಟರಲ್ಲೇ "ಇಲ್ಲ ಅನು, ನನಗೆ ಅಲ್ಲಿಗೆ ಹೋಗಿಬರಲು ಪುರುಸೊತ್ತಿಲ್ಲ. ನಾಡಿದ್ದೇ ನನ್ನ ತಂಗಿಯ ಮದುವೆ" ಎಂದಳು.

"ನಾಡಿದ್ದು ?"

"ಹೌದು ನಾಡಿದ್ದು"

ಅನ್ನದ ಈ ಸಮಯದಲ್ಲಿ ಖಾಯಿಲೆಯ ಸುದ್ದಿ ಹೇಳುವುದೋ ಬೇಡವೋ ಎಂದು ಯೋಚಿಸಲಾರಂಭಿಸಿದಳು. ಆದರೆ ಅಷ್ಟರಲ್ಲೇ ವಂದನ ಪ್ರಶ್ನೆಗಳ ಸುರಿಮಳೆ ಸುರಿಸಿಬಿಟ್ಟಳು -"ನನ್ನನ್ನು ಕರೆಯಲು ನಿನ್ನನ್ನು ಕಳುಹಿಸಿದವರು ಯಾರು ? ಚಿಕ್ಕಬಾಬುವಿಗೆ ನನ್ನ ಪರಿಚಯವೇ ಇಲ್ಲ. ದೊಡ್ಡಬಾಬುವೇ ಇರಬೇಕು. ಆದರೆ ಅವರಿಗೆ ಹೇಳಿಬಿಡು–ಆಜ್ಞೆಮಾಡಿ ಅವರು ತಮ್ಮ ಅಧಿಕಾರವನ್ನೇ ಕೆಡಿಸಿಕೊಂಡಿರುವರೆಂದು ಹೇಳು. ನಾನು ಅವರ ಜಮೀನ್ದಾರಿಯ ಆಳಲ್ಲ ಅವರ ಸೇವಕಿಯೂ ಅಲ್ಲ. ಅವರು ಕೇಳುವು ದಿದ್ದರೆ ತಾವೇ ಬಂದು ಕೇಳಬೇಕು. ಅಕ್ಕ ಹೇಗಿದ್ದಾಳೇ" ಎಂದಳು.

"ಸೌಖ್ಯವಾಗಿದ್ದಾರೆ"

" ಉಳಿದವರೆಲ್ಲಾ ?"

" ಮಗುವಿಗೆ ಕಾಯಿಲೆಯೆಂದು ಸುದ್ದಿ ಬಂದಿದೆ"

" ಯಾರಿಗೆ ಕಾಯಿಲೆ–ವಾಸುವಿಗೆ!–ಏನಾಗಿದೆ ?"

" ನನಗೆ ಸರಿಯಾಗಿ ಗೊತ್ತಿಲ್ಲ."

" ಅತ್ತ ಮಗುವಿಗೆ ಕಾಯಿಲೆಯಾದರೂ ಅಲ್ಲಿಗೆ ಹೋಗದೆ ಮುಖರ್ಜಿ ಬಾಬು ಇಲ್ಲಿಯೇ ಕುಳಿತಿದಾರೆಯೇ ! ಹಣದ ಸೆಳೆತ ಅವರಿಗೆ ಅಷ್ಟು ಮಿತಿ ಮೀರಿ ಹೋಗಿದೆ. ಅನು, ಯಾವುದು ಹಿತ, ಯಾವುದು ಅಹಿತ ಎಂದಾದರೂ ತಿಳಿಯ ಬೇಡವೆ ಅವರಿಗೆ ?" ಎಂದಳು ವಂದನ.

" ಹಣದ ವ್ಯಾಮೋಹವಲ್ಲ ತಂಗಿ. ಎರಡು ದಿನಗಳಿಂದ ಅವರೂ ಹಾಸಿಗೆ ಹಿಡಿದಿದಾರೆ. ಮಗುವಿನ ಕಾಹಿಲೆಯಿಂದ ಹಳ್ಳಿಯಲ್ಲಿ ಆಗಲೇ ಎಲ್ಲರೂ ಗಾಬರಿಯಾಗಿರುತ್ತಾರೆ. ಈ ಸುದ್ದಿಯನ್ನೂ ಕಳಿಸಿದರೆ ಇನ್ನೂ ಗಾಬರಿಯಾಗಬಹುದು. ಆದ್ದರಿಂದ ಅಲ್ಲಿಗೆ ಸುದ್ದಿ ಕಳಿಸುವಂತಿಲ್ಲ. ಇತ್ತ ನೋಡಿ ದತ್ತಜೀಯವರೂ ಇಲ್ಲಿಲ್ಲ. ಯಾವುದೋ ಕೆಲಸದ ಮೇಲೆ ಢಾಕಾಕ್ಕೆ ಹೋಗಿದಾರೆ. ನಾನು ಹುಚ್ಚು ಹೆಂಗಸು ಒಬ್ಬಳೇ–ನನಗೇನೂ ತಿಳಿಯುವುದೂ ಇಲ್ಲ. ಎಲ್ಲಾದರೂ ಕಾಯಿಲೆ ಹೆಚ್ಚೀತು ಎಂದು ಹೆದರಿಕೆ ವಿಪ್ರದಾಸರಿಗೆ ಎಂದೂ ಕಾಯಿಲೆ ಬಂದುದೇ ಇಲ್ಲ. ಆದುದರಿಂದ ಹೆದರಿಕೆ ಇನ್ನೂ ಹೆಚ್ಚು. ಮದುವೆಮುಗಿದಮೇಲಾದರೂಒಂದು ಬಾರಿ ಅತ್ತ ಬರಲಾಗುವುದಿಲ್ಲವೇ ತಂಗಿ ?"

ವಂದನಳ ಮುಖ ಇದ್ದಕ್ಕಿದ್ದಂತೆ ಇಳಿಬಿತ್ತು–' ವೈದ್ಯರು ಬಂದಿದ್ದರೇ ? ಏನು ಹೇಳಿದರು ? ' ಎಂದಳು.

" ಏನೂ ಹೆದರಿಕೆ ಇಲ್ಲವೆಂದರು. ಆದರೆ ಬೇರೆ ಯಾವ ವೈದ್ಯರನ್ನಾದರೂ ಕರೆಸಲು ಹೇಳಿದಾರೆ" ಎನ್ನುತ್ತ ಅನ್ನದ ಕಣ್ಣಿಂದ ಹನಿಗರೆದಳು. ವಂದನಳ ಕೈಹಿಡಿದುಕೊಂಡು " ಈ ಎರಡು ದಿನ ಹೇಗೋ ಕಳೆಯುತ್ತೇನೆ ತಂಗಿ. ಆದರೆ ಮದುವೆ ಮುಗಿದ ಮೇಲೆ ಬರುವಿಯೋ ಇಲ್ಲವೋ ? ನಮ್ಮ ಮೇಲೆ ಕೋಪಗೊಂಡತೆ ಬೇರೆ ಭಾಸವಾಗುತ್ತದೆ. ನಿಮ್ಮ ನಿಮ್ಮ ನಡುವೆ ಏನಾಗಿದೆಯೆಂಬುದೂ ನನಗೆ ಗೊತ್ತಿಲ್ಲ.

ಗೊತ್ತಾಗಬೇಕಾದ್ದೂ ಇಲ್ಲ. ಆದರೆ ತಪ್ಪು ಯಾರಿಂದ ಬೇಕಾದರೂ ಆಗಿರಲಿ, ವಿಪ್ರದಾಸಬಾಬುವಿನಿಂದ ಮಾತ್ರ ಖಂಡಿತ ಆಗಿಲ್ಲವೆಂದು ನನ್ನ ನಂಬಿಕೆ. ಅವರನ್ನು ಸರಿಯಾಗಿ ತಿಳಿದುಕೊಳ್ಳದೆ ತಪ್ಪು ಮಾಡಿದರೂ ಮಾಡಬಹುದು. ತಿಳಿದುಕೊಂಡಮೇಲೆ ಇಂತಹ ತಪ್ಪುಗಳು ಎಂದಿಗೂ ಆಗಲಾರವು ".

ವಂದನ ಮಂತ್ರ ಮುಗ್ಧಳಂತೆ ಕುಳಿತಿದ್ದಳು. ಸ್ವಲ್ಪ ಹೊತ್ತಿನಮೇಲೆ ಎಚ್ಚೆತ್ತು " ಅನ್ನದ ಹೊರಡು, ನಾನು ಖಂಡಿತ ಬರುತ್ತೇನೆ " ಎಂತ ಹೇಳಿ ಹೊರಟಳು.

" ಏನು ಈಗಲೇ ಹೊರಡುವಿರಾ ?

" ಈಗಲೆ ಈ ಕೂಡಲೆ "

" ಮನೆಯಲ್ಲಿ ತಿಳಿಸುವುದಿಲ್ಲವೆ ? ಆಮೇಲೆ ಇವರೆಲ್ಲ ಯೋಚಿಸುತ್ತಿರುತ್ತಾರೆ. "

" ಹೇಳಿ ಕೇಳಿ ಮಾಡುವುದರಲ್ಲಿ ಹೊತ್ತಾಗಿ ಹೋಗುತ್ತದೆ. ಸುಮ್ಮನೆ ಹೊರಡು "–ಇಷ್ಟು ಹೇಳಿ ಹತ್ತಿರದಲ್ಲಿ ನಿಂತಿದ್ದ ಒಬ್ಬ ಜವಾನನ್ನು ಕರೆದು– " ಅಮ್ಮಾವರು ಅಕ್ಕನ ಮನೆಗೆ ಹೊರಟು ಹೋದರು, ಅಲ್ಲಿ ವಿಪ್ರದಾಸಬಾಬುಗಳಿಗೆ ಖಾಯಿಲೆಯಂತೆ ಎಂದು ಚಿಕ್ಕಮ್ಮನಿಗೆ ತಿಳಿಸು " ಎಂದು ಹೇಳಿದಳು.

ವಂದನ ಬಂದು ವಿಪ್ರದಾಸನ ಕೋಣೆಯಲ್ಲಿ ಕಾಲಿಟ್ಟಾಗ ಹೊತ್ತು ಮುಳುಗುವುದರಲ್ಲಿತ್ತು. ಇನ್ನೂ ದೀಪ ಹಚ್ಚುವ ಹೊತ್ತಾಗಿರಲಿಲ್ಲ. ವಿಪ್ರದಾಸನು ದಿಂಬುಗಳ ಮೇಲೆ ಕುಳಿತಿದ್ದನು. ಅವನು ಕುಳಿತ ರೀತಿಯನ್ನು ನೋಡಿ ಅವನಿಗೆ ಹೆಚ್ಚು ಖಾಯಿಲೆಯಾಗಿದೆ ಎಂದು ಹೇಳುವುದು ಕಷ್ಟವಾಗಿತ್ತು. ವಂದನಳ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. " ಮುಖರ್ಜಿ ಸಾಹಬ್, ನಮಸ್ಕಾರ " ಎಂದು ವಂದನ ಹೇಳಿ ಮಾತನ್ನು ಮುಂದುವರಿಸಿದಳು—" ಅಕ್ಕ ಇದ್ದಿದ್ದರೆ ದೊಡ್ಡವರಿಗೆ ಕಾಲು ಮುಟ್ಟಿ ನಮಸ್ಕಾರ ಮಾಡಬೇಕೆಂದು ಹೇಳುತ್ತಿದ್ದಳು. ಆದರೆ ಈಗ ಮುಟ್ಟುವುದಕ್ಕೆ ಹೆದರಿಕೆಯಾಗುತ್ತೆ. ಎಲ್ಲಾದರೂ ಮೈಲಿಗೆ ಆಗಿಬಿಟ್ಟರೆ ?

ವಿಪ್ರದಾಸನು ಬಾಯಿಬಿಟ್ಟು ಏನೂ ಹೇಳದೆ ಸುಮ್ಮನೆ ನಕ್ಕುಬಿಟ್ಟ.

ವಂದನ ಪುನಃ ಕೇಳತೊಡಗಿದಳು—ನನಗೇಕೆ ಹೇಳಿಕಳಿಸಿದಿರಿ ?—ಸೇವೆ ಮಾಡಿಸಿಕೊಳ್ಳುವುದಕ್ಕೋ ? ಔಷಧಿಕೊಡುವ ಹೊತ್ತಾಯಿತೆಂದು ಅನ್ನದ ಹೇಳುತ್ತಿದಳು. ಇದೇನಿದು ? ವೈದ್ಯರಾಜರ ಗುಳಿಗೆಗಳೆಲ್ಲಿ ? ಡಾಕ್ಟರನ್ನು ಕರೆಯುವಷ್ಟು ಬುದ್ಧಿ ನಿಮಗೆ ಬಂದದ್ದು ಹೆಚ್ಚೇ ಸರಿ !'

"ನಮ್ಮಲ್ಲಿ ಪಡ್ಡ ಎಂಬ ಪದ ಇದೆಯಲ್ಲ ಅದರ ಅರ್ಥ ಗೊತ್ತೆ? " ವಿಪ್ರದಾಸ ಕೇಳಿದ.

'ಗೊತ್ತಿದೆ ಮಹಾಸ್ವಾಮಿ ಗೊತ್ತಿದೆ. ಮನುಷ್ಯನಾಗಿದ್ದೂ ಮನುಷ್ಯರನ್ನು ಕಂಡು ಹೇಸುವ, ಅವರನ್ನು ಮುಟ್ಟದ ಪಾಖಂಡಿಗಳಿಗೆ ಹಾಗೆ ಅನ್ನುತ್ತಾರೆ. ಅವರಿಗಿಂತಲೂ ಬೇರೆ 'ಪಡ್ಡ' ರಿದ್ದಾರೆಯೆ ?'

"ಇದ್ದಾರೆ. ಸತ್ಯಾಸತ್ಯತೆಯ ವಿಚಾರ ಮಾಡುವಷ್ಟು ಸೈರಣೆ ಇಲ್ಲದ, ವಿನಾಕಾರಣ ನಿರ್ದೋಷಿಗಳ ಮೇಲೆ ರೇಗಿ ಅವರನ್ನು ನೋಯಿಸುವುದರಲ್ಲಿ ತಮ್ಮ ಸಾಹಸವನ್ನು ತೋರಿಸುವ ಜನ ಅಂಥವರು. ಅವರ ಗುಂಪಿಗೆ ನೀನೇ ಗುರು."

"ಎಲ್ಲಿ ಯಾವ ನಿರ್ದೋಷಿಯನ್ನು ಸುಮ್ಮನೆ ನೋಯಿಸಿದ್ದೇನೆ ಹೇಳು ನೋಡೋಣ ? "

"ನಾನು ಹೇಳಬೇಕಾದ್ದಿಲ್ಲ. ಸಮಯ ಬಂದಾಗ ತಾನೇ ಗೊತ್ತಾಗುತ್ತದೆ "

"ಸರಿ ಆ ಸಮಯವನ್ನೇ ಎದುರುನೋಡುತ್ತಿರುತ್ತೇನೆ "—ಹೀಗೆ ಹೇಳಿ ವಂದನ ಮಂಚದ ಹತ್ತಿರ ಒಂದು ಕುರ್ಚಿಯನ್ನೆಳೆದುಕೊಂಡು ಅದರಮೇಲೆ ಕುಳಿತುಕೊಂಡು. "ಆ ಮಾತಿರಲಿ, ಈಗ ನಿಮ್ಮ ದೇಹಸ್ಥಿತಿ ಹೇಗಿದೆ ಹೇಳಿ ? " ಎಂದು ಕೇಳಿದಳು.

"ಚೆನ್ನಾಗಿದೆ ಸ್ವಲ್ಪ ಜ್ವರ. ರಾತ್ರಿಗೆ ಹೆಚ್ಚಾದರೂ ಆಗಬಹುದು."

"ನನಗೇಕೆ ಹೇಳಿ ಕಳಿಸಿದಿರಿ ? ನನ್ನಿಂದೇನಾಗಬೇಕು ?"

"ನನಗೇನೂ ಆಗಬೇಕಾದ್ದಿಲ್ಲ. ಅನ್ನದ ಹೆದರಿದ್ದಾಳೆ. ಅವಳಿಗೆ ನಿನ್ನ ಅವಶ್ಯಕತೆ ಇದೆ. ಅವಳು ಹೇಳಿದಳು ನಾಳಿದ್ದು ನಿನ್ನ ಅಕ್ಕನ ಮದುವೆಯಂತೆ. ಮದುವೆಯಾದಮೇಲೆ ಒಂದು ದಿನದಮಟ್ಟಿಗೆ ಬಾ.

ನಿನಗೆ ಹೇಳಬೇಕೆಂದು ನಿಮ್ಮಕ್ಕ ಏನೇನೋ ಹೇಳಿ ಕಳಿಸಿದ್ದಾಳೆ. ಅದನ್ನು ತಿಳಿಸಬೇಕಾಗಿದೆ ''

" ಇವತ್ತು ಹೇಳಲು ಸಾಧ್ಯವಿಲ್ಲವೆ ? "

" ಉಹುಂ, ಇವತ್ತು ಆಗುವುದಿಲ್ಲ. ''

ವಂದನ ಒಂದೆರಡು ನಿಮಿಷ ಸುಮ್ಮನೆ ಕುಳಿತಿದ್ದು ಅನಂತರ—" ನಿಮ್ಮ ದೇಹಸ್ಥಿತಿ ಅಷ್ಟೇನೂ ಕೆಟ್ಟಿಲ್ಲ. ಇನ್ನು ಒಂದೆರಡು ದಿನಗಳಲ್ಲಿ ಗುಣವಾಗುತ್ತದೆ ನಿಮಗೆ ನನ್ನಿಂದ ಏನೂ ಆಗಬೇಕಾದ್ದಿಲ್ಲವೆಂಬುದು ನನಗೆ ಗೊತ್ತು. ಆದಾಗ್ಯೂ ನಿಮ್ಮ ಶುಶ್ರೂಷೆಯನ್ನು ನೆಪಮಾಡಿಕೊಂಡು ನಾನು ಇಲ್ಲೇ ಇರುತ್ತೇನೆ. ಅಲ್ಲಿಗೆ ಹೋಗುವುದಿಲ್ಲ. ನನ್ನ ಟ್ರಂಕ್ ತರಲು ಹೇಳಿ ಕಳುಹಿಸಿದ್ದೇನೆ. ನೀವು ಏನೂ ಅಡ್ಡಿ ಮಾಡಬೇಡಿ."

" ಏನು ಅಡ್ಡಿ ವಂದನ ? ನೀನು ಇಲ್ಲಿರಲು ನನ್ನದೇನೂ ಅಡ್ಡಿ ಆತಂಕವಿಲ್ಲ ಆದರೆ ನಾಳಿದ್ದು ನಿನ್ನ ಅಕ್ಕನ ಮದುವೆ ಇದೆಯಲ್ಲ ? ''

" ಇರಲಿ ಮದುವೆ ಏನೂ ನನಗೆ ತಪ್ಪಲ್ಲವಲ್ಲ. ನಾನು ಹೋಗದಿದ್ದರೂ ಮದುವೆಯಾಗುತ್ತೆ."

" ನಿಜವಾಗಿ ನೀನು ಅದರಲ್ಲಿ ಭಾಗವಹಿಸುವುದಿಲ್ಲವೆ ? ''

" ಇಲ್ಲ "

" ಆದರೆ ಇದಕ್ಕೋಸ್ಕರ ನೀನು ನಿಲ್ಲಲಿಲ್ಲವೆ ? ''

" ಬೊಂಬಾಯಿಗೇಂತ ಹೊರಟೆ. ಸ್ಟೇಷನ್ನಿನಿಂದ ಹಿಂದಕ್ಕೆ ಬಂದೆ. ಆದರೆ ಇದಕ್ಕೋಸ್ಕರವೇ ಅಲ್ಲ. ದೂರದಲ್ಲಿದ್ದರಿಂದ ನಮ್ಮ ಸಮಾಜದ ಒಬ್ಬರ ಪರಿಚಯವೂ ಇರಲಿಲ್ಲ; ಯಾರ್ಯಾರ ಬಾಯಿಂದಲೋ ಏನೇನೋ ಕೇಳಿದ್ದೆ; ಕಥೆಕಾದಂಬರಿಗಳಲ್ಲಿ ಏನೇನೊ ಓದಿದ್ದೆ, ಆದರೆ ಅದನ್ನು ಕಣ್ಣಾರೆ ಕಾಣುವ ಸೌಭಾಗ್ಯ ದೊರೆಕಿರಲಿಲ್ಲ. ನಮಾಜದಿಂದ ಬಹಿಷ್ಕೃತರಾಗಿ ಜಾತಿಭ್ರಷ್ಟರಾದವರಿರುವಂತೆ ಇದ್ದೆವು. ಚಿಕ್ಕಮ್ಮ ಸಿಕ್ಕಿ, ಇದ್ದು ಹೋಗೆಂದು ಆಗ್ರಹಮಾಡಿದಾಗ, ಸರಿ ಎಂದೆ. ಪ್ರಕೃತಿಯು ವಿವಾಹದ ನೆಪ ಸಿಕ್ಕಿ ಆ ಸುಯೋಗ ದೊರೆತಿದೆ; ಪುನಃ ಇಂತಹ ಒಂದು ಸನ್ನಿವೇಶ ಸಿಕ್ಕುವುದು ಕಷ್ಟ ಎಂತ ಯೋಚಿಸಿ ನಿಂತುಬಿಟ್ಟೆ.''

" ಆದರೆ ಇನ್ನೂ ಮದುವೆ ಮುಗಿದೇ ಇಲ್ಲ. ನಮ್ಮ ಸಮಾಜದ

ಜನಗಳ ಪರಿಚಯವಾಗುವ ಅವಕಾಶ ಇನ್ನೂ ದೊರೆತೇ ಇಲ್ಲ.''—ವಿಪ್ರ ದಾಸನು ನಕ್ಕು ಹೇಳಿದನು.

"ಪೂರ್ತಿ ಅವಕಾಶ ದೊರತಿಲ್ಲ, ನಿಜ. ಆದರೆ ಈಗ ಸಿಕ್ಕಿರುವಷ್ಟು ನನಗೆ ಸಾಕು."

"ವಂದನ, ನಿನಗೂ ಅವರಿಗೂ ಹೇಗೆ ಹೊಂದಿಕೊಂಡು ಹೋಯಿತು. ಅದನ್ನು ನಾನು ಕೇಳಬಹುದೆ?"

ವಂದನ ನಕ್ಕು "ನಿಮಗೆ ಗುಣವಾಗಲಿ. ಆಮೇಲೆ ಎಲ್ಲವನ್ನೂ ವಿಶದವಾಗಿ ಹೇಳುತ್ತೇನೆ'' ಎಂದಳು.

ಆಳು ದೀಪ ಹಚ್ಚಿ ಹೊರಟುಹೋದ. ತಲೆಯ ಕಡೆ ಇದ್ದ ಕಿಟಕಿಯನ್ನು ಮುಚ್ಚಿ ವಂದನ ಔಷಧಿ ಕುಡಿಸಿದಳು. 'ತಾವು ಇನ್ನು ಕುಳಿತಿರಬೇಡಿ ಮಲಗಿ' ಎಂದು ಹೇಳಿ ಸುಕ್ಕುಸುಕ್ಕಾದ ಹಾಸಿಗೆಯನ್ನು ಕೊಡವಿ ಸರಿಮಾಡಿದಳು. ದಿಂಬುಗಳನ್ನು ಯಥಾಸ್ಥಾನದಲ್ಲಿ ಸರಿಯಾಗಿಟ್ಟಳು. ವಿಪ್ರದಾಸನು ಮಲಗಿದಮೇಲೆ ಕಾಲಿನಿಂದ ಕುತ್ತಿಗೆಯವರೆಗೆ ಹೊದ್ದಿಕೆಯನ್ನು ಹೊದಿಸಿ—"ಎದ್ದು ಹುಷಾರಾದಮೇಲೆ ಶುದ್ಧಿಯಾಗಲು ಎಷ್ಟು ಗೋಮಯ ಮತ್ತು ಗಂಗಾಜಲ ಬೇಕಾಗುತ್ತೊ ಏನೊ" ಎಂತ ಹೇಳಿದಳು.

ವಿಪ್ರದಾಸನು ತನ್ನ ಎರಡು ಕೈಗಳನ್ನೂ ಬಿಚ್ಚಿ 'ಇಷ್ಟು' ಎಂದು ಹೇಳಿ ಹಾಗೆಯೆ ಮಾತನ್ನು ಮುಂದುವರಿಸಿ "ನಿನಗೂ ಸೇವೆ ಶುಶ್ರೂಷೆ ಮಾಡಲು ಅಲ್ಪ ಸ್ವಲ್ಪ ಬರುತ್ತೇಂತ ಕಾಣುತ್ತೆ" ಅಂದನು. "ಅಲ್ಪ ಸ್ವಲ್ಪವೆ? ಇಲ್ಲ ಇಲ್ಲ, ಹಾಗೆ ಹೇಳಬೇಡಿ. ನಮ್ಮ ವಿಚಾರವಾಗಿ ಏನಾದರೂ ಹೇಳಬೇಕಾಗಿದ್ದರೆ ವಿಚಾರಮಾಡಿ ಹೇಳಿ"

"ಅಂದರೆ—''

"ಅಂದರೆ ಏನಿಲ್ಲ. ನಮ್ಮವರನ್ನು ನಿಂದಿಸಲೇ ಬೇಕೆಂದು ಮನಸ್ಸಿದ್ದರೂ ನೀವು ಅದನ್ನು ಸರಿಯಾಗಿ ತಿಳಿದು ಮಾಡಬೇಕು. ಹೀಗೆ ಕಣ್ಣು ಮುಚ್ಚಿಕೊಂಡು ಏನೇನೋ ಅನ್ನುತ್ತಿದ್ದರೆ ನಾನು ಕೇಳುವುದಿಲ್ಲ."

ವಿಪ್ರದಾಸನ ಮುಖದ ಮೇಲೆ ಪರಿಹಾಸದ ನಗು ಎದ್ದು ಮೂಡಿತು. "ಆ ನಿನ್ನ 'ನಮ್ಮವರು' ಯಾರು? ಯಾರ ವಿಚಾರವಾಗಿ ನಾನು

ಇನ್ನೂ ಚೆನ್ನಾಗಿ ವಿಚಾರಮಾಡಿ ತಿಳಿದುಕೊಳ್ಳಬೇಕು. ನೀನು ಈಗ ಯಾರ ಗುಂಪಿನಿಂದ ಓಡಿಬಂದಿದ್ದೀಯೊ ಆ ಜನಗಳ ವಿಚಾರವಾಗಿಯೆ ?"

"ನಾನು ಓಡಿ ಬಂದಿದ್ದೇನೆಂದು ನಿಮಗೆ ಯಾರು ಹೇಳಿದರು ?"

"ನಾನೇ ಹೇಳುತ್ತಿದ್ದೇನೆ."

"ನಿಮಗೆ ಹೇಗೆ ತಿಳಿಯಿತು ?"

"ನಿನ್ನ ಮುಖ ನೋಡಿ ತಿಳಿದುಕೊಂಡೆ".

ಸ್ವಲ್ಪಹೊತ್ತಿನವರೆಗೆ ವಂದನ ಅವನ ಮುಖವನ್ನೇ ದೃಷ್ಟಿಸಿ ನೋಡುತ್ತಿದ್ದು ಅನಂತರ ಹೇಳಿದಳು:–"ನಮ್ಮ ಅಣ್ಣನ ದೃಷ್ಟಿಯಿಂದ ಯಾವುದನ್ನೂ ಮರೆಮಾಚಲು ಸಾಧ್ಯವಿಲ್ಲವೆಂದು ದ್ವಿಜದಾಸ ಬಾಬು ಅಂದೇ ಹೇಳಿದ್ದರು. ಆದರೆ ಈ ಮಾತು ಅಷ್ಟು ನಿಜವೆಂದು ಆಗ ನಂಬಿರಲಿಲ್ಲ. ನಿಮಗೆ ಖಾಯಿಲೆಯಾಗಲೆಂದು ಮಾತ್ರ ನಾನು ಬಯಸಲಿಲ್ಲ. ಆದರೆ ಇದು ನನ್ನನ್ನು ನಿಜವಾಗಿಯೂ ಉದ್ಧರಿಸಿತು. ನಾನು ಇಲ್ಲಿಗೆ ಓಡಿಬಂದು ಬದುಕಿದೆ.

"ಆದರೂ ಆ ಜ್ಞಾನ ಬೇಕಲ್ಲ"

"ಬೇಕಾಗಿಲ್ಲ. ಆ ಜ್ಞಾನ ಮಿತಿಮೀರಿ ಬಾಯಲ್ಲಿನ ಅಮೃತ ವಿಷವಾಗುತ್ತಿದೆ. ನನ್ನ ಅಕ್ಕನಂತೆ ಎಲ್ಲರನ್ನೂ ಪ್ರೀತಿಸುವುದು ಅವರಿಗೆ ಬರುತ್ತದೆಯೆ ? ಇಲ್ಲ. ಬರುವುದಿಲ್ಲ. ನನ್ನ ಅಕ್ಕನಂತೆ ಅವರು ಭಕ್ತಿ ಇಡಬಲ್ಲರೆ ? ಇಲ್ಲ ಎಂದಿಗೂ ಸಾಧ್ಯವಿಲ್ಲ. ಅವರಲ್ಲಿ ಒಬ್ಬರಿಗೆ ಮತ್ತೊಬ್ಬ ಮಿತ್ರನಿದ್ದಾನೆಯೆ ? ಎಲ್ಲಿಯದು ? ಅವರಲ್ಲಿ ಪರಸ್ಪರ ದ್ವೇಷ, ಅಸೂಯೆಗಳಿಗೆ ಕಡಿಮೆಯೆ ? ಅಭಾವದ ಕೊರತೆಗೆ ಕಡಿಮೆಯೆ ? ಹೊರಗಿನ ಡೌಲು ನೋಡಿದವರಿಗೆ ಒಳಗಿನ ಹುಳುಕು ಗೊತ್ತಾಗುವುದು ಕಷ್ಟ. ಮತ್ತೆ ಯಾವ ಕಾರಣದಿಂದ ಅವರನ್ನು ಹಚ್ಚಿಕೊಂಡು ಪ್ರೀತಿಸಬೇಕು ? ಒಟ್ಟಿನಲ್ಲಿ ಈ ಹುಳುಗಳು ಅವರನ್ನು ಒಳಒಳಗೆ ಕೊರೆದು ಬರಡುಮಾಡಿಬಿಟ್ಟಿವೆ.

ವಿಪ್ರದಾಸನು ನಗುತ್ತ—"ವಂದನ ಇವತ್ತು ನಿನಗೇನಾಗಿದೆ ? ಏಕಿಷ್ಟು ಸಿಟ್ಟು ? ಯಾರಾದರೂ ಮೋಸ ಮಾಡಿ ದುಡ್ಡು ಹೊಡೆದು ಬಿಟ್ಟರೋ ?"

" ಮೋಸ ಮಾಡಿ ತೆಗೆದುಕೊಂಡಿಲ್ಲ. ಸಾಲ ತೆಗೆದುಕೊಂಡಿದ್ದಾನೆ"

" ಎಷ್ಟು ?

" ಹೆಚ್ಚೇನೂ ಅಲ್ಲ ಸುಮಾರು ನಾನೂರು ಐನೂರು ರೂಪಾಯಿ "

" ಅವರ ಹೆಸರಾದರೂ ಗೊತ್ತಿದೆಯೆ ?"

" ಗೊತ್ತಿತ್ತು ; ಆದರೆ ಮರೆತು ಬಿಟ್ಟಿದ್ದೇನೆ ಎಂದು ಹೇಳಿ ವಂದನ ನಕ್ಕಳು—" ಛೀಛೀ ಇಷ್ಟು ಅಲ್ಪ ಸ್ವಲ್ಪ ಪರಿಚಯ ಉಳ್ಳವರಲ್ಲಿಯೂ ಹೋಗಿ ಯಾರಾದರೂ ಸಾಲ ಕೇಳಬಲ್ಲರೆಂದು ನನಗೆ ಯೋಚಿಸಲು ಕೂಡ ಸಾಧ್ಯವಿಲ್ಲ. ಕೇಳುವಾಗ ಸ್ವಲ್ಪವೂ ನಾಲಿಗೆ ಹಿಡಿಯುವುದಿಲ್ಲ; ಕಣ್ಣಿನಲ್ಲಿ ನಾಚಿಕೆಯ ಸುಳಿವು ಸಹ ಕಾಣಿಸುವುದಿಲ್ಲ; ಇದು ಅವನ ನಿತ್ಯ ಕರ್ಮವೋ ಎನ್ನುವಂತೆ ತೋರುತ್ತದೆ."

ವಿಪ್ರದಾಸನು ಗಂಭೀರ ಮುದ್ರೆಯಲ್ಲಿ ಸ್ವಲ್ಪ ಹೊತ್ತು ಸ್ತಬ್ಧನಾಗಿ ಕುಳಿತಿದ್ದು ಅನಂತರ ಹೇಳಿದನು—" ವಂದನ, ಆ ಜನಗಳು ನಿನ್ನ ಮನಸ್ಸಿನಲ್ಲಿ ತುಂಬ ವಿಷವನ್ನು ತುಂಬಿದ್ದಾರೆ. ನಿನ್ನ ಚಿಕ್ಕಮ್ಮನ ಸಮಾಜವೇ ನಿಮ್ಮ ಸಂಪೂರ್ಣ ಸಮಾಜವೆಂದು ತಿಳಿಯಬೇಡ. ಆ ಗುಂಪಿನಿಂದ ಹೊರಗಡೆ ಹುಡುಕಿ ನೋಡು ಒಂದಲ್ಲ ಒಂದು ದಿನ ಅವರು ಸಿಗುತ್ತಾರೆ."

" ಸಿಕ್ಕರಂತು ಒಳ್ಳೆಯದೆ ಆಯಿತು ನನ್ನ ಭಾವನೆಯನ್ನು ತಿದ್ದಿಕೊಳ್ಳುತ್ತೇನೆ. ಆದರೆ ಈಗ ನಾನು ಯಾರನ್ನು ನೋಡಿಬಂದಿದ್ದೇನೆಯೊ ಅವರು ಶಿಕ್ಷಿತರೆ ; ಮೇಲ್ಪಟ್ಟದ ಜನಗಳ ಆತ್ಮೀಯರೇ ; ಕತೆ ಕಾದಂಬರಿಗಳ ರಸವಾಣಿಯಿಂದ ಅಲಂಕೃತರಾಗಿ ದೂರದಿಂದ ನೋಡಿದರೆ ಇವರು ಎಷ್ಟು ಸುಂದರರಾಗಿ ಕಾಣುತ್ತಿದ್ದರು ; ಎಷ್ಟು ಮನೋಹರವಾಗಿ ತೋರುತ್ತಿದ್ದರು. ಎಷ್ಟು ಆಶ್ಚರ್ಯವನ್ನು ಉಂಟುಮಾಡುತ್ತಿದ್ದರು ! ನನಗೆ ಇವರ ಮೇಲೆ ಎಷ್ಟು ಅಭಿಮಾನವಿತ್ತು. ಇದರಿಂದ ಇನ್ನು ಮುಂದೆ ಸ್ತ್ರೀಯರು ಹಿಂದುಳಿದಿದ್ದಾರೆಂಬ ಕಲಂಕ ದೂರವಾಯಿತೆಂದು ಯೋಚಿಸುತ್ತಿದ್ದೆ. ಆದರೆ ಆ ಭಾವನೆ ಮತ್ತೆ ಬದಲಾಯಿಸಿತು."

ವಿಪ್ರದಾಸನು ನಕ್ಕು " ಯಾವುದು ತಪ್ಪು ಭಾವನೆ ?—ಅವರು ಬಹಳ ವೇಗವಾಗಿ ಮುಂದರಿಯುತ್ತಿದ್ದಾರೆ.—ಇದು ಎಂದಿಗೂ ಸುಳ್ಳಲ್ಲ." ಎಂತ ಹೇಳಿದನು.

ಇದನ್ನು ಕೇಳಿ ವಂದನ ಸಹ ನಕ್ಕಳು—"ಆದರೆ ಅವರ ಸಂಖ್ಯೆ ಬಹಳ ಕಡಿಮೆಯಾಗಿದೆಯಲ್ಲ, ಅದೊಂದು ನನ್ನ ಮನಸ್ಸಿಗೆ ಸಮಾಧಾನ— ಇವರನ್ನು ಹೊಗಳಿ ಹೊಗಳಿ ಅಟ್ಟಕ್ಕೇರಿಸಿ ಕೂಡಿಸುವುದು ಎಷ್ಟು ವ್ಯರ್ಥವೋ ಅಷ್ಟೆ ಹಾಸ್ಯಾಸ್ಪದವಾದುದು."

"ತನ್ನ ಧರ್ಮವನ್ನು ಬಿಟ್ಟು ಬಿಡುವುದರಲ್ಲಿ ಇಲ್ಲದ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಬಹಳ ಜಾಗರೂಕತೆಯಿಂದ ವರ್ತಿಸು."

ವಿಪ್ರದಾಸನ ಈ ಮಾತಿನ ಕಡೆ ವಂದನ ಅಷ್ಟು ಲಕ್ಷ್ಯ ಕೊಡಲಿಲ್ಲ. ಸುಮ್ಮನೆ ತನ್ನ ಮಾತನ್ನು ಮುಂದುವರಿಸಿದಳು. —"ಈ ಅಲ್ಪ ಸಂಖ್ಯೆಯ ಜನಗಳಲ್ಲದೆ ಹೊರಗಡೆ ನಮ್ಮ ಬಂಗಾಲದ ವಿಶಾಲ ನಾರಿಸಮಾಜವಿದೆ. ಇದುವರೆಗೂ ನಾನು ಅದನ್ನು ನೋಡಿಲ್ಲ; ಬಹುಶಃ ಅದರಿಂದ ದೂರವಾಗಿ ನಿಂತು ಅದನ್ನು ತಿಳಿದುಕೊಳ್ಳುವುದು ಅಸಾಧ್ಯವಿರಬೇಕು. ಆದರೂ ಸಮಾಜದ ಪ್ರಾಣವಾಯುವಿನಂತೆ ಈ ಸಮಾಜವು ಎಲ್ಲೆಡೆಯಲ್ಲಿ ಹಬ್ಬಿರಬೇಕು. ಅವರುಗಳಲ್ಲಿ ಚಿಕ್ಕವರೂ ಇದ್ದಾರೆ ದೊಡ್ಡವರೂ ಇದ್ದಾರೆ— ದೊಡ್ಡವರ ಆದರ್ಶ ಎನಿಸುವವರೆ ನನ್ನ ಅಕ್ಕ ಮತ್ತು ಅವಳ ಅತ್ತೆ.—ಈ ಸಲ ಕಲ್ಕತ್ತೆಗೆ ಬಂದುದು ಸಾರ್ಥಕವಾಯಿತು. —ಏಕೆ ನಗು? ಮುಖರ್ಜಿಗಳೆ, ಏಕೆ ನಗುತ್ತಿದ್ದಿರಿ?"

"ದುಡ್ಡಿನ ದುಃಖ ಮನುಷ್ಯನನ್ನು ಎಷ್ಟು ದೊಡ್ಡ ವಾಗ್ಮಿಯನ್ನಾಗಿ ಮಾಡುತ್ತದೆಂಬುದನ್ನು ಯೋಚಿಸುತ್ತಿದ್ದೆ. ಈ ದೋಷ ನನ್ನಲ್ಲಿಯೂ ಇದೆ!"

"ಏನು ದುಡ್ಡಿನ ದುಃಖ?—ಆ ಐದುನೂರು ರೂಪಾಯಿಗಳ ದುಃಖವೆ?"

"ಹಾಗೇ ಕಾಣುತ್ತೆ."

ವಂದನ ನಕ್ಕು ಉತ್ತರಕೊಟ್ಟಳು—"ಈಗ ದುಡ್ಡಿನ ಚಿಂತೆ ಏಕೆ? ತಮ್ಮ ಸೇವಾಶುಶ್ರೂಷೆಯನ್ನು ಮಾಡಿದ್ದಕ್ಕೆ ಬಿಲ್ ಮಾಡಿ ಒಂದಕ್ಕೆರಡು ವಸೂಲು ಮಾಡಿಕೊಳ್ಳುತ್ತೇನೆ. ಒಂದುಪಕ್ಷ ನೀವು ಕೊಡದಿದ್ದರೆ ನಿಮ್ಮ ಅಮ್ಮನಿಂದ ವಸೂಲು ಮಾಡುತ್ತೇನೆ.

ಇಷ್ಟರಲ್ಲಿ ಅನ್ನದ ಬಂದು "ಎಂಟು ಗಂಟೆ ಹೊಡೆಯಿತು ಇದು ಊಟದ ಹೊತ್ತು" ಎಂದು ಹೇಳಿದಳು.

ವಂದನ ಬಹಳ ಗಡಿಬಿಡಿಯಿಂದ "ಅಣ್ಣದ, ಹೊರಡು ನಾನೂ ಬಂದೆ. ಹೋಗಲೇ, ಮುಖರ್ಜಿಗಳೆ ?" ಎಂದಳು.

ವಿಪ್ರದಾಸನು ನಕ್ಕು—" ಸರಿ ಹೊರಡು ಆದರೆ ಸೇವೆಯಲ್ಲಿ ಏನಾದರೂ ತಪ್ಪು ಕಂಡುಬಂದರೆ ಕೂಲಿಯಲ್ಲಿ ಹಿಡಿಯುತ್ತೇನೆ ಎಚ್ಚರಿಕೆ" ಎಂದು ಉತ್ತರ ಕೊಟ್ಟನು.

" ತಪ್ಪು ಗಿಪ್ಪು ಏನೂ ಸಿಕ್ಕುವುದಿಲ್ಲ ಮಹಾಸ್ವಾಮಿ ಸಿಕ್ಕುವುದಿಲ್ಲ" ಎಂದು ಹೇಳಿ ವಂದನ ನಗುತ್ತ ಹೊರಟುಹೋದಳು.

* * * *

೧೮

ವಂದನ:—" ಊಟಕ್ಕೆ ಸಿದ್ಧವಾಗಿದೆ ತರಲೆ ?"

ವಿಪ್ರದಾಸ ನಕ್ಕು—"ನೀನು ಮೊದಲಿನಿಂದಲೂ ನನ್ನ ಜಾತಿಯನ್ನು ಕುಲಗೆಡಿಸಬೇಕೆಂದು ನಿಶ್ಚಯಿಸಿದ್ದೀಯ. ಇನ್ನೂ ನಾನು ಸಂಧ್ಯಾವಂದನೆ ಮಾಡಿಲ್ಲ. ಮೊದಲು ಅದಕ್ಕೆ ವ್ಯವಸ್ಥೆ ಮಾಡು."

—" ನಾನೇ ಏರ್ಪಾಟು ಮಾಡಲೆ ? ''

ವಿಪ್ರದಾಸ—" ಇಲ್ಲದಿದ್ದರೆ ಇಲ್ಲಿ ಇನ್ಯಾರಿದ್ದಾರೆ ? ದೇವರ ಮನೆಯವರೆಗೆ ನಡೆದು ಹೋಗಲಾರೆ–ಬಹಳ ನಿಶ್ಶಕ್ತಿ—ಈ ಕೋಣೆಯಲ್ಲಿ ಏರ್ಪಾಡು ಮಾಡಬೇಕು. ಮೊದಲು ನೀನು ಇದಕ್ಕೆ ಹೇಗೆ ಸಿದ್ಧತೆಮಾಡುತ್ತೀಯ. ಅದರಲ್ಲೇನಾದರೂ ತಪ್ಪು ಗಿಪ್ಪು ಸಿಕ್ಕುತ್ತದೆಯೆ—ನೋಡಿ ತಿಳಿದುಕೊಂಡು ಆಮೇಲೆ ನೀನೇ ಊಟಕ್ಕೆ ತರಬೇಕೊ ಬೇಡವೊ ಹೇಳುತ್ತೇನೆ."

ವಂದನ ಹಿರಿಹಿರಿ ಹಿಗ್ಗಿದಳು. " ಸರಿ ಈ ಷರತ್ತು ನನಗೂ ಒಪ್ಪಿಗೆ. ಆದರೆ ಪರೀಕ್ಷೆಯಲ್ಲಿ ಪಾಸಾದರೂ ಸುಳ್ಳು ನೆಪಹಾಕಿ ಫೇಲು ಮಾಡಿಸಕೂಡದು, ಮಾತುಕೊಡಿ ಮೊದಲು."

" ಆಗಬಹುದು, ಆದರೆ ನನಗೆ ಬಡಿಸಿದ್ದರಿಂದ ನಿನಗೆ ಬರುವ ಲಾಭವೇನು ?"

" ಅದನ್ನು ನಾನು ಹೇಳುವುದಿಲ್ಲ"—ವಂದನ ಜಾಗ್ರತೆ ಕೆಳಕ್ಕಿಳಿದು ಹೊರಟುಹೋದಳು.

ಹತ್ತು ಹನ್ನೆರಡು ನಿಮಿಷಗಳ ತರುವಾಯ ವಂದನ ಮೈತೊಳೆದು, ಮಡಿಯುಟ್ಟು, ಶುಭ್ರವಾಗಿ ತೊಳೆದಿರುವ ಪಂಚಪಾತ್ರೆಯಲ್ಲಿ ನೀರು ತೆಗೆದುಕೊಂಡು ವಿಪ್ರದಾಸನ ಕೋಣೆಯೊಳಕ್ಕೆ ಬಂದಳು. ಪೂರ್ವದ ಬಿಸಿಲು ಯಾವ ಕಿಟಕಿಯಿಂದ ಹಾದು ಕೋಣೆಯೊಳಕ್ಕೆ ಬರುತ್ತಿತ್ತೊ ಆ ಕಡೆಯ ನೆಲದಲ್ಲಿ ನೀರು ಚಿಮುಕಿಸಿ, ಸೆರಗಿನಿಂದ ಒರಸಿದಳು. ಅನಂತರ ದೇವರ ಮನೆಯಿಂದ ಮಣೆ, ಅರ್ಘ್ಯಪಾತ್ರೆ ಮುಂತಾದುವನ್ನು ತಂದು ಕ್ರಮವಾಗಿ ಸಿದ್ಧಪಡಿಸಿದಳು. ಧೂಪದಾನಿಯಲ್ಲಿ ಊದುಬತ್ತಿಯನ್ನು ಹಚ್ಚಿಟ್ಟಳು. ಅನಂತರ ಮಡಿಪಂಚೆಯನ್ನು ಮಡಿಸಿಟ್ಟು, ಕೈಕಾಲನ್ನು ತೊಳೆದುಕೊಳ್ಳಲು ನೀರನ್ನೂ, ಒರೆಸಿಕೊಳ್ಳಲು ಟವಲನ್ನೂ ತಂದು ವಿಪ್ರದಾಸನ ಮುಂದಿಟ್ಟು, "ಹೂವನ್ನು ಬಿಡಿಸಿ ಮಾಲೆಕಟ್ಟುವುದಕ್ಕೆ ಈ ದಿನ ಅವಕಾಶಸಿಗಲಿಲ್ಲ; ನಾಳೆಯ ದಿನ ಇಂಥ ತಪ್ಪನ್ನು ಮಾಡುವುದಿಲ್ಲ. ಈಗ ನಿಮಗೆ ಅರ್ಧಗಂಟೆ ಅವಕಾಶ ಕೊಡುತ್ತೇನೆ. ಈಗಾಗಲೇ ಒಂಬತ್ತು ಹೊಡೆಯಿತು. ಒಂಬತ್ತೂವರೆ ಗಂಟೆಗೆ ಸರಿಯಾಗಿ ಬರುತ್ತೇನೆ. ಇಗೋ ಹೊರಟೆ" ಎಂದು ಹೇಳಿ ಬಾಗಿಲನ್ನು ಮುಚ್ಚಿಕೊಂಡು ಹೊರಟು ಹೋದಳು.

ಆಗ ವಿಪ್ರದಾಸನು ಏನೂ ಮಾತನಾಡದೆ ಅವಳಕಡೆ ಸುಮ್ಮನೆ ನೋಡುತ್ತಿದ್ದನು. ಅರ್ಧಗಂಟೆಯಮೇಲೆ ವಂದನ ಪುನಃ ಬಂದಳು. ಅಷ್ಟು ಹೊತ್ತಿಗೆ ಸಂಧ್ಯಾವಂದನೆಯನ್ನು ಮುಗಿಸಿ ವಿಪ್ರದಾಸ್ ಆರಾಮ ಕುರ್ಚಿಯ ಮೇಲೆ ಕುಳಿತಿದ್ದನು.

ವಂದನ—"ಪಾಸೊ? ಫೇಲೋ?"

"ಫಸ್ಟ್ ಡಿವಿಷನ್‌ನಲ್ಲಿ ಪಾಸ್ ನಮ್ಮ ಅಮ್ಮನನ್ನು ಮಿರಿಸಿ ಬಿಟ್ಟೆಯ ನೀನು. ಯಾರಾದರೂ ನಿನ್ನನ್ನು ಮ್ಲೇಚ್ಛೆ ಎಂದು ಕರೆಯಬೇಕಲ್ಲ ನೀನು ಮ್ಲೇಚ್ಛರ ಸ್ಕೂಲು ಕಾಲೇಜುಗಳಲ್ಲಿ ಓದಿ ಬಿ.ಎ. ಪಾಸುಮಾಡಿದ್ದೀ ಯೆಂದು ಯಾರು ತಾನೆ ಹೇಳಬಲ್ಲರು?"

"ಅಂದರೆ ಈಗ ಊಟಕ್ಕೆ ಬಡಿಸಲೊ?"

"ಬಡಿಸು. ಅದಕ್ಕೆ ಮೊದಲು ಈ ಪಾತ್ರೆಪದಾರ್ಥ ತೆಗೆದುಬಿಡು."— ವಿಪ್ರದಾಸನು ಸಂಧ್ಯಾವಂದನೆಗೆಂದು ತಂದಿಟ್ಟ ಪಾತ್ರೆಗಳನ್ನು ತೋರಿಸಿದನು.

" ಇದನ್ನು ನನಗೇನೂ ಹೇಳಬೇಕಾಗಿಲ್ಲ ಮಹಾಸ್ವಾಮಿ ;" ಎಂದು ಹೇಳಿ ಆ ಪಾತ್ರೆಗಳನ್ನು ತೆಗೆದುಕೊಂಡು ಹೊರಡುವುದರಲ್ಲಿದ್ದಳು. ಮರು ಕ್ಷಣದಲ್ಲಿ 'ನಿಮ್ಮ ಚಿಕ್ಕಮ್ಮ'—ಮುಂತಾಗಿ ಹೇಳುತ್ತಿರುವ ಅನ್ನದಳ ದನಿ ಕೇಳಬಂದಿತು.

ಹೆಚ್ಚು ಹೇಳಬೇಕಾದ ಅವಶ್ಯಕತೆ ಇರಲಿಲ್ಲ.

ಅಷ್ಟರಲ್ಲಿ ಕೋಣೆಯ ಹೊರಗಡೆ ಅನೇಕ ಹೈಹೀಲ್ಡ್ ಷೂಗಳ ಸಪ್ಪಳ ಕೇಳಿ ಬಂದಿತು. ಅವಳ ಚಿಕ್ಕಮ್ಮ ಮತ್ತು ಒಬ್ಬಿಬ್ಬರು ಚಿಕ್ಕ ವಯಸ್ಸಿನ ಹುಡುಗಿಯರೂ ಕೋಣೆಯೊಳಕ್ಕೆ ನುಗ್ಗಿದರು. ವಿಪ್ರದಾಸನು ಎದ್ದು ನಿಂತು 'ಬನ್ನಿ' ಎಂದು ಸ್ವಾಗತಿಸಿದನು.

ಚಿಕ್ಕಮ್ಮ " ವಿಪ್ರದಾಸ ಬಾಬುಗಳೇ ಮೈಯಲ್ಲಿ ಚೆನ್ನಾಗಿದೆ ಎಂದು ಈಗ ತಾನೆ ಕೆಳಗೆ ವಿಚಾರಿಸಿದಾಗ ತಿಳಿಯಿತು."

" ನಿಜ ನಿಜ ಈಗ ನಾನು ಆರೋಗ್ಯವಾಗಿದೇನೆ."

ವಂದನಳನ್ನು ಕಂಡು, ಬಂದ ಹುಡುಗಿಯರಿಗೆ ಮಿತಿಮೀರಿ ಆಶ್ಚರ್ಯ ವಾಯಿತು. ಕಾಲಿನಲ್ಲಿ ಷೂ ಇಲ್ಲ. ಮೈಮೇಲೆ ಬ್ಲೌಸ್ ಇಲ್ಲ; ಒದ್ದೆ ಕೂದಲು ರೇಷ್ಮೆಯ ಬಿಳಿ ಸೀರೆಯನ್ನು ನೆನೆಸುತ್ತಿದೆ. ಬೆನ್ನುಮೇಲೆ ಕರಿಯ ಕೇಶರಾಶಿ ಹರಡಿ ಬಿದ್ದಿವೆ. ಕೈಯಲ್ಲಿ ಪೂಜಾ ಸಾಮಗ್ರಿಗಳನ್ನು ಹಿಡಿದುಕೊಂಡಿದ್ದಾಳೆ-- ಅವಳನ್ನು ಈ ವೇಷದಲ್ಲಿ ಅವರು ಯಾವಾಗಲೂ ನೋಡಿಯೇ ಇರಲಿಲ್ಲ. ಅದರ ಕಲ್ಪನೆ ಕೂಡ ಅವರಿಗೆ ಇರಲಿಲ್ಲ. ಆಗ ವಂದನ ಅವರನ್ನು ಕುರಿತು—" ತಾವು ಬಾಗಿಲು ಬಿಟ್ಟು ಸ್ವಲ್ಪ ದೂರ ಸರಿದು ನಿಂತುಕೊಳ್ಳಿ. ನಾನು ಇವನ್ನು ಒಳಗಿಟ್ಟು ಬರುತ್ತೇನೆ."

" ಎಲ್ಲಾದರೂ ತಗುಲೀತು ಎಂತಲೋ " ಒಬ್ಬ ಹುಡುಗಿ ಹೇಳಿದಳು.

" ಹೌದು "—ವಂದನ ಹೊರಕ್ಕೆ ಹೊರಟು ಹೋದಳು.

ಸ್ವಲ್ಪ ಹೊತ್ತಿನಲ್ಲಿ ವಂದನ ಹಿಂತಿರುಗಿ ಬಂದಳು. ಅವಳು ಉಡು ಪನ್ನು ಬದಲಿಸಿರಲಿಲ್ಲ. ಅವಳು ಬಂದು ವಿಪ್ರದಾಸನ ಕುರ್ಚಿಗೆ ಒರಗಿ ನಿಂತಳು. ಅವಳ ಚಿಕ್ಕಮ್ಮ " ವಂದನ, ನಮಗೆಲ್ಲ ತಿಳಿಸದೆ ಹೊರಟು ಬಂದೆ, ಅದಕ್ಕೆ ನನಗೇನೂ ಸಿಟ್ಟಿಲ್ಲ. ಆದರೆ ಈವತ್ತು ನಿನ್ನ ಅಕ್ಕನ ಮದುವೆ—ಈಗ ನೀನು ಹೊರಡಲೇ ಬೇಕು." ಎಂದು ಹೇಳಿದಳು.

" ನಿನ್ನ ಎಳೆದುಕೊಂಡು ಹೋಗೋಣ ಎಂತ ಬಂದಿದ್ದೇನೆ'' ಎಂದು ಇಬ್ಬರು ಹುಡುಗಿಯರೂ ಹೇಳಿದರು.

"ಚಿಕ್ಕಮ್ಮ, ನನಗೆ ಬರಲು ಸಾಧ್ಯವಿಲ್ಲ" ವಂದನ ಉತ್ತರಕೊಟ್ಟಳು.

" ಏನು ಮಾತನಾಡುತ್ತೀ ವಂದನ? ನೀನು ಬರದಿದ್ದರೆ ಪ್ರಕೃತಿಗೆ ಎಷ್ಟು ದುಃಖವಾಗುತ್ತದೆ ಗೊತ್ತಿದೆಯೇ ? "

" ಗೊತ್ತಿದೆ. ಆದರೂ ನಾನು ಬರಲಾರೆ "

ಚಿಕ್ಕಮ್ಮನಿಗೆ ಆಶ್ಚರ್ಯವೂ, ದುಃಖವೂ ಆಯಿತು.—" ಈ ಮದುವೆಗೋಸ್ಕರವೆ, ಬೊಂಬಾಯಿಗೆ ಹೋಗದೆ ನಿಂತೆ.—ನಿನ್ನ ತಂದೆ ನಿನ್ನನ್ನೂ ನನ್ನ ಹತ್ತಿರ ಇದಕ್ಕೆಂದು ಬಿಟ್ಟು ಹೋಗಿದ್ದಾರೆ. ಅವರು ಈ ಸುದ್ದಿ ಕೇಳಿದರೆ ಏನು ಹೇಳುತ್ತಾರೆ ಹೇಳು. "

ಅಷ್ಟೇ ಅಲ್ಲ ಸುಧೀರಬಾಬು—ಮಿಸ್ಟರ್ ಡಾಟ—ಬೇರೆ ಬಹಳ ಸಿಟ್ಟುಗೊಂಡಿದ್ದಾರೆ. ನೀನು ಹೊರಟು ಬಂದದ್ದು ಅವರಿಗೆ ಎಳ್ಳಷ್ಟೂ ರುಚಿಸಲಿಲ್ಲ.—ಒಬ್ಬ ಹುಡುಗಿ ಹೇಳಿದಳು.

ವಂದನ ಆ ಹುಡುಗಿಯ ಕಡೆಗೊಮ್ಮೆ ನೋಡಿ ತನ್ನ ಚಿಕ್ಕಮ್ಮನಿಗೆ ಉತ್ತರ ಕೊಟ್ಟಳು—' ನಾನು ಬರದೇ ಇದ್ದರೆ ಪ್ರಕೃತಿಯ ಮದುವೆ ಯೇನೂ ನಿಲ್ಲುವುದಿಲ್ಲ. ಆದರೆ ಮುಖರ್ಜಿಯವರ ಸೇವೆಯಲ್ಲಿ ಲೋಪ ಉಂಟಾಗುತ್ತದೆ. ಅವರ ಯೋಗಕ್ಷೇಮವನ್ನು ನೋಡಿಕೊಳ್ಳಲು ಬೇರೆ ಯಾರೂ ಇಲ್ಲ. "

" ಅವರು ಈಗ ಆರೋಗ್ಯವಾಗಿದ್ದಾರಲ್ಲ. ನ್ಯಾಯವಾಗಿ ಹೋಗು ಎಂದು ಅವರೇ ಹೇಳಬೇಕು. "

" ಸರಿ ನೀವು ಬಾ ಎಂದು ಕರೆಯುತ್ತಿದ್ದೀರಿ. ಬರುತ್ತೇನೆ. ಆದರೆ ರಾತ್ರಿ ಅಲ್ಲಿರಲಾರೆ. ಆದಕ್ಕೆ ನೀವು ಒಪ್ಪಲೇ ಬೇಕು."

" ಒಂದು ರಾತ್ರಿಯೂ ಇರಲಾರೆಯಾ ? "

'' ಇಲ್ಲ.

" ಸರಿ, ಹಾಗೇ ಆಗಲಿ "—ಎಂದು ಹೇಳಿದರು. ಅವರಿಗೆ ಮನಸ್ಸಿನಲ್ಲೇ ತುಂಬಾ ಕೋಪ. ಎಲ್ಲರೂ ಹಿಂತಿರುಗಿಬಿಟ್ಟರು.

* * * *

"ನೋಡಲಿಲ್ಲವೆ ? ನಿನ್ನ ಚಿಕ್ಕಮ್ಮ ಎಷ್ಟು ಸಿಟ್ಟಿನಿಂದ ಹೊರಟು ಹೋದರು. ಅಲ್ಲ ಇದ್ದಕ್ಕಿದ್ದಂತೆ ಯದ್ವಾತದ್ವ ಏಕೆ ನಿಶ್ಚಯಿಸಿದೆ ?" ವಿಪ್ರ ದಾಸ ಕೇಳಿದನು.

"ಸಿಟ್ಟಿನಿಂದ ಹೊರಟು ಹೋದರೆಂಬುದು ನನಗೆ ಗೊತ್ತು. ಆದರೆ ನಾನು ಮಾತ್ರ ಯದ್ವಾತದ್ವ ಮನಸ್ಸಿಗೆ ಬಂದಂತೆ ನಿಶ್ಚಯಿಸಿಲ್ಲ. ಅವರ ನೆರಳು ಸಹ ನನಗೆ ಕಂಡರೆ ಆಗದಂತೆ ಆಗಿದೆ. ನನಗೆ ಅಲ್ಲಿರುವುದು ಇಷ್ಟ ವಿಲ್ಲ. ಆದುದರಿಂದ ಇನ್ನು ಮೇಲೆ ಅಲ್ಲಿಗೆ ಹೋಗುವುದಕ್ಕೂ ನನಗೆ ಮನಸ್ಸು ಬಾರದು" ವಂದನ ಉತ್ತರ ಕೊಟ್ಟಳು.

"ಏನೇ ಅಂದರೂ ಇದು ಸ್ವಲ್ಪ ಹೆಚ್ಚಾಯಿತು ವಂದನ"

"ನಿಜವಾಗಿಯೂ ಅದು ಹೆಚ್ಚೋ, ಕಡಿಮೆಯೋ ಹೇಳುವದು ಕಷ್ಟ. ಈ ವಿಚಾರವಾಗಿ ಎಷ್ಟೋಸಲ ನನ್ನನ್ನು ನಾನೇ ಪ್ರಶ್ನಿಸಿಕೊಂಡಿದ್ದೇನೆ, ಆದರೆ ಅಲ್ಲಿ ಹೋಗುವುದರಿಂದ ಸುಖವಾಗಲೀ ಮನಸ್ಸಿಗೆ ಶಾಂತಿಯಾಗಲಿ ದೊರೆಯುವುದಿಲ್ಲ. ಒಂದುಸಲ ಬೊಂಬಾಯಿಯಲ್ಲಿ ಒಂದು ಬಟ್ಟೆ ಕಾರ್ಖಾನೆ ನೋಡಲು ಹೋಗಿದ್ದೆ; ಯಾವಾಗಲೂ ಅದು ಜ್ಞಾಪಕಕ್ಕೆ ಬರುತ್ತಿರುತ್ತದೆ—ಎಷ್ಟು ಯಂತ್ರಗಳು—ಎಷ್ಟು ಚಕ್ರಗಳು. ಅಕ್ಕ-ಪಕ್ಕ, ಹಿಂದೆ ಮುಂದೆ ಒಂದೇ ಸಮ ಸುತ್ತುತ್ತಿದ್ದುವು—ಅದು ಲೆಕ್ಕವಿಲ್ಲದಷ್ಟು ಎಲ್ಲಿಯಾದರೂ ಕೊಂಚ ಅಜಾಗರೂಕರಾಗಿದ್ದರೆ ಸರಿ, ತನ್ನ ಕಡೆ ಎಳೆದು ಕೊಂಡು ಎಲ್ಲಿ ಕೈಕಾಲು ಮುರಿಯುವುದೋ ಅನ್ನುವಂತಿತ್ತು. ನೋಡುವು ದಕ್ಕೆ ಅವು ಚೆನ್ನಾಗಿದ್ದುವು. ಆದರೆ ಮನಸ್ಸುಮಾತ್ರ ಅಲ್ಲಿಂದ ಯಾವಾಗ ಹೊರಬೀಳುವೆನೋ ಎನ್ನುವಂತಿತ್ತು—ಇನ್ನು ಹೊತ್ತುಮಾಡಬಾರದು. ನಿಮ್ಮ ಪಥ್ಯದ ಸಾಮಾನುಗಳನ್ನು ತರುತ್ತೇನೆ" ಎಂದು ಹೇಳಿ ಹೊರಕ್ಕೆ ಹೋಗಬೇಕೆಂದಿದ್ದಳು. ಅಷ್ಟರಲ್ಲಿ ಬಾಗಿಲಿನ ಮುಂದೆ ಬಿದ್ದಿರುವ ಬೂಡ್ಸು ಗಳ ಗುರುತು ಮತ್ತು ಕಾಲಿನ ಧೂಳನ್ನು ಕಂಡು ಹಿಂದಕ್ಕೆ ಸರಿದು ನಿಂತಳು—" ಪಥ್ಯಕ್ಕೆ ತರೋಣ ಅಂದರೆ ಮತ್ತೆ ಅಡ್ಡಿ ಬಂತು. ಸ್ವಲ್ಪ ತಾಳ ಬೇಕು ಮುಖರ್ಜಿಗಳೇ ಮೊದಲು ಜವಾನನಿಗೆ ಇಲ್ಲಿ ಗುಡಿಸಲು ಹೇಳು ತ್ತೇನೆ. ಇಷ್ಟು ಹೇಳಿ ವಂದನ ಹೊರಡುವುದರಲ್ಲಿದ್ದಳು. ಆಗ ವಿಪ್ರದಾಸನ

ಬಹಳ ಆಶ್ಚರ್ಯಗೊಂಡು "ವಂದನ, ಇಷ್ಟು ದ್ವೇಷಮಾಡಲು ಯಾರಿಂದ ಕಲಿತೆ" ಎಂದು ಕೇಳಿದನು.

ಇದನ್ನು ಕೇಳಿ ವಂದಳಿಗೂ ಆಶ್ಚರ್ಯವಾಯಿತು. "ಯಾರಿಂದ ಕಲಿತೆನೊ ಮರೆತುಹೋಗಿದೆ—ಸ್ವಲ್ಪ ಸುಮ್ಮನಿದ್ದು ಪುನಃ ಹೇಳಿದಳು—"ಬಹುಶಃ ಯಾರೂ ಹೇಳಿಕೊಟ್ಟಿಲ್ಲ. ನಿಮ್ಮ ಸೇವೆಯನ್ನು ಮಾಡಲು ಇದು ಅಪರಿಹಾರ್ಯವೆಂದು ನನಗೆ ತೋರುತ್ತಿದೆ. ಇಲ್ಲದಿದ್ದರೆ ನಿಮ್ಮ ಸೇವೆ ಕೆಟ್ಟುಹೋಗುತ್ತದೆ"—ಇಷ್ಟು ಹೇಳಿ ಅವಳು ಹೊರಟುಹೋದಳು.

* * * *

ಮಧ್ಯಾಹ್ನ ನಾಲ್ಕು ಗಂಟೆಯಾಗಿರಬೇಕು. ಅಷ್ಟುಹೊತ್ತಿಗೆ ವಂದನ ತನ್ನ ಅಭ್ಯಾಸಕ್ಕೆ ತಕ್ಕಂತೆ ಯಥೋಚಿತ ಪೋಷಾಕನ್ನು ಧರಿಸಿ ವಿಪ್ರದಾಸನ ಕೋಣೆಯ ಬಾಗಿಲಿನಲ್ಲಿ ಬಂದು ನಿಂತು ಕೂಗಿದಳು—"ಮುಖರ್ಜಿ ಸಾಹೇಬ್, ಇಗೊ ನಾನು ನನ್ನಕ್ಕನ ಮದುವೆಗೆ ಹೋಗಿ ಬರುತ್ತೇನೆ. ಚಿಕ್ಕಮ್ಮ ಬೆನ್ನು ಬಿಡಲಿಲ್ಲ. ಅದಕ್ಕೋಸ್ಕರ ಹೋಗಬೇಕಾಗಿದೆ. ಹೋಗಿ ಬರಲೆ ?"

"ನೀನು ಸಹ ಆದಷ್ಟು ಜಾಗ್ರತೆ ತಕ್ಕ ಪ್ರತೀಕಾರವನ್ನು ಮಾಡು. ಪಂಜಾಬಿನಿಂದ ನಿನ್ನ ಚಿಕ್ಕಮ್ಮನನ್ನು ಬೊಂಬಾಯಿಗೆ ಎಳೆದುಕೊಂಡು ಹೋಗು ಇದು ನನ್ನ ಆಶೀರ್ವಾದ" ವಿಪ್ರದಾಸನು ಉತ್ತರ ಕೊಟ್ಟನು.

"ನನಗೆ ಚಿಕ್ಕಮ್ಮನ ಮೇಲೆ ಅಷ್ಟು ಸಿಟ್ಟಿಲ್ಲ ಆದರೆ ನಿಮ್ಮನ್ನು ಮಾತ್ರ ಖಂಡಿತ ಎಳೆದುಕೊಂಡು ಹೋಗುತ್ತೇನೆ. ಹೆದರಿಕೆ ಏನೂ ಬೇಡ ನಾವೇ ಛಾರ್ಜು ಕೊಡುತ್ತೇವೆ. ನಿಮ್ಮ ಕೈಯಿಂದ ಒಂದು ಕಾಸೂ ಖರ್ಚಾಗುವುದಿಲ್ಲ—ಎಂದು ಹೇಳುತ್ತ ವಂದನ ನಕ್ಕುಬಿಟ್ಟಳು—ಎಲ್ಲ ಏರ್ಪಾಡುಮಾಡಿದ್ದೇನೆ. ಏನಾದರೂ ಸ್ವಲ್ಪ ಹೆಚ್ಚುಕಡಿಮೆ ಆದರೆ ಬಂದು ಸಿಟ್ಟು ಮಾಡುತ್ತೇನೆ." ಅಂದಳು.

"ಸಿಟ್ಟು ಮಾಡದೆ ಏನು ಮಾಡುತ್ತೀ ! ಮೈಯಲ್ಲಿ ಚೆನ್ನಾಗಿಲ್ಲಾಂತ ಕಾಣುತ್ತೆ. ಮದುವೆ ಮನೆಯಲ್ಲಿ ಮಿತಿಮೀರಿ ತಿಂದುದರಿಂದ ದೇಹಾಲಸ್ಯವಾಗಿರಬೇಕೆಂದು ಯೋಚಿಸುತ್ತೇನೆ ಅಷ್ಟೇ."

ವಂದನ ನಕ್ಕು ತಲೆಯಲ್ಲಾಡಿಸುತ್ತ ಹೇಳಿದಳು "ಸಾಕು ಸಾಕು.

ನನ್ನನ್ನು ತೆಗೆಳುವುದಿರಲಿ. ನೀವು ಸಂಧ್ಯಾವಂದನೆ ಮಾಡಲು ದೇವರ ಮನೆಗೆ ಹೋಗಬೇಡಿ. ಅನ್ನದ ಎಲ್ಲ ಸಿದ್ಧತೆಯನ್ನು ಇಲ್ಲಿಯೇ ಮಾಡಿ ಕೊಡುತ್ತಾಳೆ. ಅದಾದ ಅರ್ಧಗಂಟೆಗೆ ಸರಿಯಾಗಿ ಅಡಿಗೆಯವನು ಬಂದು ಬಡಿಸುತ್ತಾನೆ. ಊಟವಾದ ಒಂದು ಗಂಟೆಯ ಮೇಲೆ ಝುಂಡು ಔಷಧಿ ಕೊಟ್ಟು ದೀಪ ಆರಿಸಿ, ಬಾಗಿಲು ಹಾಕಿಕೊಂಡು ಹೋಗುತ್ತಾನೆ. ಕಟ್ಟಪ್ಪಣೆ ಮಾಡಿ ಹೋಗುತ್ತಿದ್ದೇನೆ, ತಿಳಿಯಿತೆ ?"

" ಸರಿ ಸರಿ ಎಲ್ಲ ತಿಳಿಯಿತು."

" ಹಾಗಾದರೆ ಹೊರಡುತ್ತೇನೆ."

" ಹೊರಡು. ಆದರೆ ಒಂದು ಮಾತು ವಂದನ. ನೀನು ಇವತ್ತು ಈ ಪೋಷಾಕಿನಲ್ಲಿ ಬಹಳ ಚೆನ್ನಾಗಿ ಕಾಣಿಸುತ್ತೀಯ ಕಾರಣ ಇಷ್ಟೆ, ಇದು ನಿನ್ನ ಸ್ವಾಭಾವಿಕವಾದ ಉಡುಪು. ಇಲ್ಲಿ ಧರಿಸುವ ಉಡುಪು ಕೃತ್ರಿಮವಾದದ್ದು."

" ಇದೇನಿದು ? ಹೆಂಗಸರು ಹೈಹೀಲ್ಡ್ ಷೂ ಹಾಕಿದ್ದನ್ನು ಕಂಡರೆ ನಿಮಗೆ ಆಗುವುದಿಲ್ಲವೆಂತ ಕೇಳಿದ್ದೆ."

" ಕೇಳಿರಬಹುದು. ಆದರೆ ಅದು ಶುದ್ಧ ಸುಳ್ಳು. ನೀನು ಮುಟ್ಟಿದುದನ್ನು ತಿನ್ನುವುದಿಲ್ಲವೆಂತ ಹೇಳಿರಲಿಲ್ಲವೆ ಹಾಗೆಯೇ ಇದೂ."

" ಅದು ಹೇಗೆ ಸುಳ್ಳು ? ನಾನು ಮುಟ್ಟಿದುದನ್ನು ತಿನ್ನಲು ನಿಮಗೆ ನಿಜವಾಗಿಯೂ ಅಡ್ಡಿ ಇರಲಿಲ್ಲವೆ ?" ವಂದನ ಆಶ್ಚರ್ಯದಿಂದ ಕೇಳಿದಳು.

" ಅಡ್ಡಿಯೇನೊ ಇತ್ತು. ಅದು ನಿಜವಾದ ಅಡ್ಡಿಯಾಗಿದ್ದ ಪಕ್ಷಕ್ಕೆ ಇವತ್ತಿಗೂ ಇರುತ್ತಿತ್ತು, ಇಂದೆ ಇರುತ್ತಿರಲಿಲ್ಲ."—ವಿಪ್ರದಾಸನು ಪ್ರತ್ಯುತ್ತರಕೊಟ್ಟನು.

ವಂದನಳಿಗೆ ಈ ಮಾತು ಅರ್ಥವಾಗಲಿಲ್ಲ. ಆದರೆ ಅದು ನಂಬುವುದೂ ಕಷ್ಟ.—" ನಮ್ಮ ಅಣ್ಣನ ಮನಸ್ಸು ಹೀಗೆಂದು ಖಚಿತವಾಗಿ ಯಾರೂ ಹೇಳಲಾರರು ; ಸಣ್ಣ ಪುಟ್ಟ ಕೆಲವು ವಿಚಾರಗಳು ಇತರರಿಗೆ ಅದೂ ಅಲ್ಪ ಸ್ವಲ್ಪ ತಿಳಿಯುತ್ತದೆ, ಆದೇ ಅಂತರಂಗದ ಮಾತು ಅಲ್ಲಿಯೆ ಹುದುಗಿ ಹೂತಿಟ್ಟಂತಿರುತ್ತವೆ. ಅದನ್ನು ಯಾರೂ ತಿಳಿಯಲಾರರು ಎಂದು ದ್ವಿಜಬಾಬು ಹೇಳಿದ್ದರು.—ಏನು ಅದು ನಿಜವೆ ?" ವಂದನ ಕೇಳಿದಳು.

ಉತ್ತರವಾಗಿ ದ್ವಿಜದಾಸ ಸುಮ್ಮನೆ ನಕ್ಕು, ' ವಂದನ ಇನ್ನು ನಿನಗೆ ಹೊತ್ತಾಯಿತು. ಅಲ್ಲಿ ರಾತ್ರಿಗೆ ನಿಲ್ಲಲು ಇಷ್ಟವಿಲ್ಲದಿದ್ದರೆ ಹೊರಟು ಬಾ. ' ಎಂದು ಹೇಳಿದನು.

' ಬಂದೇ ಬರುತ್ತೇನೆ–ಅಲ್ಲಿರಲು ಸಾಧ್ಯವಿಲ್ಲ ' ಎಂದು ಹೇಳಿ, ಹೊತ್ತುಮಾಡದೆ ಕೆಳಕ್ಕಿಳಿದು ಹೊರಟು ಹೋದಳು.

* * * *

" ಏನು ಅಕ್ಕನ ಮದುವೆ ಸಾಂಗವಾಗಿ ನೆರವೇರಿತೆ ?" ಎಂದು ಮಾರನೇ ದಿನ ವಿಪ್ರದಾಸನು ಪ್ರಶ್ನಿಸಿದನು.

" ನಡೆಯಿತು. ವಿಘ್ನ ಬರಲಿಲ್ಲ."

" ನಿನ್ನ ಹಠವನ್ನೆ ಗೆಲ್ಲಿಸಿಕೊಂಡೆ. ಚಿಕ್ಕಮ್ಮ ಅಷ್ಟು ಕೇಳಿಕೊಂಡರೂ ನಿಲ್ಲಲಿಲ್ಲ. ಹಿಂತಿರುಗಿ ಬಂದಾಗ ರಾತ್ರಿ ಸುಮಾರು ಎಷ್ಟು ಗಂಟೆಯಾಗಿತ್ತು ?"

" ಆಗ ಸುಮಾರು ಎರಡುಗಂಟೆ ಇರಬಹುದು. ಚಿಕ್ಕಮ್ಮನ ಮಾತು ಕೇಳಲಾಗಲಿಲ್ಲ. ರಾತ್ರಿಯೇ ಹೊರಟುಬರಬೇಕಾಗಿ ಬಂತು.''—ಸ್ವಲ್ಪ ಹೊತ್ತು ಸುಮ್ಮನಿದ್ದಳು. ಬಹುಶಃ ಹೇಳುವುದು ಉಚಿತವೊ ಅನುಚಿತವೊ ಎಂದು ಯೋಚಿಸುತ್ತಿರಬೇಕು. ಅನಂತರ ಹೇಳತೊಡಗಿದಳು—" ಕೇವಲ ಕೆಲವು ಗಂಟೆಗಳಕಾಲ ಅಲ್ಲಿದ್ದೆ. ಆದರೆ ಬಹಳ ದೊಡ್ಡ ಕೆಲಸಮಾಡಿ ಬಂದೆ. ಇಡೀ ಒಂದು ವರುಷದಲ್ಲಿ ಮಾಡಲಾಗದ ಕೆಲಸವನ್ನು ಐದಾರು ನಿಮಿಷಗಳಲ್ಲಿ ಮಾಡಿ ಮುಗಿಸಿದೆ. ಸುಧೀರನನ್ನು ತೊರೆದು ಬಂದುಬಿಟ್ಟೆ.

" ಏನು ಹೇಳುತ್ತಿರುವುದು?''–ವಿಪ್ರದಾಸನಿಗೆ ಆಶ್ಚರ್ಯವಾಯಿತು.

" ಸರಿಯಾದ್ದನ್ನೇ ಹೇಳುತ್ತಿದ್ದೇನೆ. ಆದರೆ ನಡುನೀರಿನಲ್ಲಿ ತೊರೆದು ಬಂದಿಲ್ಲ. ನಿನ್ನೆ ಬೆಳಿಗ್ಗೆ ಬಂದ ಹುಡುಗಿಯನ್ನು ನೋಡಿದ್ದರಲ್ಲ ; ಅವಳ ಹೆಸರು ಹೇಮ್—ಹೇಮನಲಿನಿರಾಯ್ ಎಂತ. ಸುಧೀರನನ್ನು ಅವಳ ವಶಕ್ಕೆ ಕೊಟ್ಟು ಬಂದಿದ್ದೇನೆ. ನನಗೆ ಮತ್ತೆ ಅದೇ ಕಾರ್ಖಾನೆಯು ನೆನಪಾಗುತ್ತದೆ. ಅದರಂತೆ ಇವರ ಪ್ರೇಮ ಪ್ರೀತಿಗಳು.

" ಏನಾಯಿತು ? ಸುಧೀರನನ್ನು ಇದ್ದಕ್ಕಿದ್ದಂತೆ ಬಿಟ್ಟು ಬರಲು ಕಾರಣವೇನು ? ''—ವಿಪ್ರದಾಸನು ಮೊದಲಿನಂತೆ ಆಶ್ಚರ್ಯದಿಂದ ಕೇಳಿದನು.

" ಬಿಟ್ಟು ಬರುವುದು ಎಂದರೆ ಬಿಟ್ಟು ಬರುವುದು ' ಇದ್ದಕ್ಕಿದ್ದಂತೆ ಅನ್ನುವುದು ಸರಿಹೋಗುವುದಿಲ್ಲ. ಅಷ್ಟೆ. ಅವರ ಜೀವನ ಸಂಗೀತದ ತಾಳ ಬಹಳ ಜಾಗ್ರತೆಯಾಗಿ ಬೀಳುತ್ತದೆ. ಆದುದರಿಂದ ಹೊರನೋಟಕ್ಕೆ ಯಾವುದು ' ಆಕಸ್ಮಾತ್ತಾಗಿ ' ನಡೆದಂತೆ ತೋರುವುದೋ ಅದು ವಾಸ್ತವವಾಗಿ ಹಾಗಿರುವುದಿಲ್ಲ....ಸುಧೀರನು ನನ್ನನ್ನು ಕರೆದು ' ನಿನ್ನ ಈ ನಡತೆ ತಕ್ಕದಲ್ಲ ' ಎಂದ. " ಯಾವನಡತೆ, ಹೇಳು ನೋಡೋಣ " ಅಂದೆ. ಅದಕ್ಕೆ ಅವನು ಹೇಳಿದ—" ನಾನು ಯಾರನ್ನೂ ಹೇಳದೆ ಕೇಳದೆ ಇಲ್ಲಿಗೆ ಹೊರಟು ಬಂದದ್ದು ಬಹಳ ಕೆಟ್ಟ ಕೆಲಸವಂತೆ. ಅದರಲ್ಲೂ ಇಲ್ಲಿ ವಿಪ್ರದಾಸ ಬಾಬು ವಿನಃ ಬೇರೆ ಯಾರೂ ಇಲ್ಲದ ವೇಳೆಯಲ್ಲಿ ಇಲ್ಲಿಗೆ ಬಂದದ್ದು ಸರಿಯಲ್ಲವೆಂದರು. ನಾನು ಅನ್ನದೆ ಇದ್ದಾಳಲ್ಲ ಅಂದೆ. ಅದಕ್ಕೆ ಅವನು ' ಅವಳು ಇದ್ದರೇನಂತೆ ? ಅವಳು ದಾಸಿಯಷ್ಟೇ ' ಅಂದ. ದಾಸಿಯಾದರೇನು ? ಎಲ್ಲರೂ ಅವಳನ್ನು ಗೌರವದಿಂದ ಕಾಣುತ್ತಾರೆ ಎಂತ ಹೇಳಿದೆ. ಅಷ್ಟರಲ್ಲಿ ಅವೇ ಹೇಮನಲಿನಿ ಮಧ್ಯದಲ್ಲಿ ಸ್ವಲ್ಪ ಕೊಂಕು ನಗೆ ನಕ್ಕು " ಗ್ರಾಮದಲ್ಲಿ ಪಾಪ ಅದೇ ಆಚರಣೆಯಂತ ಕಾಣುತ್ತೆ ಅದಕ್ಕೇ ಅಲ್ಲಿ ದಾಸ ದಾಸಯರಿಗೆ ಎಲ್ಲೂ ಇಲ್ಲದಷ್ಟು ಜಂಬ ಅಂದ ಮಾತ್ರಕ್ಕೆ ಅವಳೇನೂ ಅಕ್ಕ ಆಗಲಿಲ್ಲ" ಅಂದರು. ' ಏನದು ನೀನು ರಾತ್ರಿಯೇ ಹೊರಟುಹೋಗುತ್ತೀಯಂತೆ ' ಎಂದು ಸುಧೀರ ಕೇಳಿದ. ರಾತ್ರಿ ಇಲ್ಲಿರಲು ಸಾಧ್ಯವಿಲ್ಲವೆಂದು ಇವರಿಗೆ ತಿಳಿಸಿದ್ದೀಯಂತೆ ಆದರೆ ಆ ಮನೆಯಲ್ಲಿ ನೀನೊಬ್ಬಳೆ ಇರುವುದನ್ನು ನಮ್ಮಲ್ಲಿ ಯಾರೂ ಸಹಿಸಲಾರೆವು—ನಿನ್ನ ತಂದೆ ಕೇಳಿ ಏನಂದಾರು ?"—ಅದಕ್ಕೆ ನಾನು ಹೇಳಿದೆ " ತಂದೆ ಏನನ್ನುತ್ತಾರೆ ಅನ್ನುವುದರ ಯೋಚನೆ ನಿಮಗಲ್ಲ ನನಗೆ ಇರಬೇಕಾದದ್ದು. ಅಲ್ಲದೆ ಯಾರಿಗೂ ಅಲ್ಲಿರುವುದು ಸರಿ ಕಾಣುವುದಿಲ್ಲವೆಂತ ಹೇಳಿದೆಯಲ್ಲ ಅವರಲ್ಲಿ ನೀನೂ ಒಬ್ಬನೋ ' ಎಂದು ಕೇಳಿದೆ. ಖಂಡಿತ, ಎಲ್ಲರಲ್ಲಿ ಒಬ್ಬನಾಗಿ ಆಡಿದ ಮಾತು ' ಎಂದು ಹೇಮನಲಿನಿ ಮಧ್ಯೆ ಬಾಯಿ ಹಾಕಿದಳು.

ಆ ಹುಡುಗಿಯ ಈ ತಲೆಹರಟೆಗೆ ಉತ್ತರಕೊಡಲು ನನಗೆ ಇಷ್ಟವಿರಲಿಲ್ಲ—ಅದು ಸರಿಯಾಗಿಯೂ ತೋರಲಿಲ್ಲ. ನಾನು ಸುಧೀರನಿಗೆ ಹೇಳಿದೆ. ನಿನ್ನ ಮಾತಿಗೆ ನಾನು ಉತ್ತರಕೊಡಬಲ್ಲೆ. ಹೀಗೆ ಏನೂ

ವಿಶೇಷ ಕಾರಣವಿಲ್ಲದೆ ರಜತೆಗೆದುಕೊಂಡು ಕಲ್ಕತ್ತೆಯಲ್ಲಿರುವುದು ನನಗೂ ಚೆನ್ನಾಗಿ ಕಾಣಿಸುವುದಿಲ್ಲ. ಆದರೆ ಅದನ್ನು ನಾನು ಹೇಳಲು ಇಷ್ಟಪಡುವುದಿಲ್ಲ. ನೀನು ಯಾವ ಹೇಯ ವಿಚಾರವನ್ನು ಕುರಿತು ಸೂಚಿಸಿರುವೆಯೋ ಅದು ಕೇವಲ ಕೀಳು ಸಮಾಜದಲ್ಲಿ ಮಾತ್ರ ಕಂಡು ಬರುತ್ತದೆ; ಆದರೆ ನಿಮ್ಮಂಥ ಸಭ್ಯರ ಸಮಾಜದಲ್ಲಿಯೂ ಇದೆ ಎಂದು ನಾನು ತಿಳಿದಿರಲಿಲ್ಲ. ಸರಿ, ಈಗ ನನಗೆ ಪುರಸತ್ತಿಲ್ಲ ಹೊರಗೆ ಕಾರು ಕಾದಿದೆ. ನಾನು ಹೋಗುತ್ತೇನೆ." ಇಷ್ಟು ಹೇಳಿ ಹೊರಡಬೇಕೆಂದಿದ್ದೆ. ಅಷ್ಟರಲ್ಲಿ ಆ ಹುಡುಗಿ 'ಸಭ್ಯರೇನು, ಅಸಭ್ಯರೇನು ಅನುಚಿತಕಾರ್ಯವನ್ನು ಕುರಿತು ಎಲ್ಲರೂ ಟೀಕಿಸುತ್ತಾರೆ ಗೊತ್ತಾಯಿತೆ? ಎಂದು ಹೇಳಿದಳು. "ಸರಿ ನೀವು ಬೇಕಾದಷ್ಟು ಟೀಕೆ ಟಿಪ್ಪಣಿಗಳನ್ನು ಮಾಡಿ, ಅದರಿಂದ ನನ್ನದೇನು ಹೋಗುತ್ತೆ? ನಾನು ಹೊರಡುತ್ತೇನೆಂದು ತಿಳಿಸಿದೆ. ಸುಧೀರನಿಗೆ ಏನಾಯಿತೋ ಏನೋ, ಅವನ ಮುಖ ಇಳಿದುಹೋಯಿತು. ಹೇಗೋ ಚೇತರಿಸಿಕೊಂಡು–ಚಿಕ್ಕಮ್ಮನಿಗೆ ಸಹ ತಿಳಿಸದೆ ಹೊರಟುಹೋಗುತ್ತೀಯಾ ಎಂದು ಕೇಳಿದ. ಮೊದಲೆ ಹೇಳಿದ್ದೇನೆ. ಮದುವೆ ಆದ ಕೂಡಲೆ, ಎಷ್ಟೇ ಹೊತ್ತಾಗಿರಲಿ, ಹೊರಟು ಹೋಗುತ್ತೇನೆ ಅಂತ. "ನಾಳೆ ಒಮ್ಮೆ ನಿನ್ನನ್ನು ನೋಡಲು ಸಾಧ್ಯವೇ" ಎಂದು ಸುಧೀರ ಕೇಳಿದ. ಸಾಧ್ಯವಿಲ್ಲ ಅಂದೆ. 'ನಾಳಿದ್ದು' ಅಂದ–"ನಾಳಿದ್ದೂ ಸಾಧ್ಯವಿಲ್ಲ" ಎಂದೆ.

'ಆ ಮುಂದಿನ ದಿನ?"

'ಊಹೂಂ ಆದರ ಮುಂದಿನ ದಿನವೂ ಸಾಧ್ಯವಿಲ್ಲವೆಂದು ಉತ್ತರ ಕೊಟ್ಟೆ. 'ಹಾಗಾದರೆ ಯಾವಾಗ ಆಗುತ್ತೆ? ನನಗೆ ಇನ್ನು ಮೇಲೆ ಆಗುವುದೇ ಇಲ್ಲ ಅಂದೆ. "ಆದರೆ ಸ್ವಂತ ವಿಚಾರವಾಗಿ ಮಾತನಾಡಬೇಕಾಗಿದೆಯಲ್ಲ?"—"ನಿನಗೆ ಇರಬಹುದು ಆದರೆ ನನಗೇನೂ ಅವಶ್ಯಕತೆ ಇಲ್ಲವಲ್ಲ ಎಂತ ಹೇಳಿ ಎದ್ದು ನಿಂತೆ."

ವಿಪ್ರದಾಸನು ಸುಮ್ಮನೆ ಇರುವುದನ್ನು ಕಂಡು ಪುನಃ ಹೇಳ ತೊಡಗಿದಳು "ಸುಧೀರನಿಗೆ ನನ್ನ ಪರಿಚಯವಿಲ್ಲದೆ ಇರಲಿಲ್ಲ. ಆದುದರಿಂದಲೇ ನನ್ನ ಜೊತೆಯಲ್ಲಿ ಬರಲು ಅವನಿಗೆ ಧೈರ್ಯವಿಲ್ಲದೆ ಹೋಯಿತು. ಅಲ್ಲೆ ಕಲ್ಲು ಕಂಬದಂತೆ ನಿಂತಿದ್ದ ನಾನು ಕಾರಿನಲ್ಲಿ ಬಂದು ಕುಳಿತುಬಿಟ್ಟೆ.''

ವಿಪ್ರದಾಸನು ನಕ್ಕು " ಅಂದರೆ ಇದರ ಅರ್ಥ ಸಂಬಂಧ ತೊರೆದು ಬಂದದ್ದೆ ? ವಂದನ, ಇದು ಸುಮ್ಮನೆ ಸಣ್ಣ ಜಗಳ ಅಂತ ತಿಳಿ " ಎಂದ.

ವಂದನ ನಗಲಿಲ್ಲ. ಗಂಭೀರ ವಾಣಿಯಿಂದ ಹೇಳಿದಳು 'ನಮ್ಮಿಬ್ಬರ ಸಂಬಂಧ ಕಡಿದುಹೋಯಿತು ಎಂದು ನನಗೆ ಗೊತ್ತು. ಪುನಃ ಅದೆಂದಿಗೂ ಸರಿಹೋಗಲಾರದು.'

ಅವಳ ಗಂಭೀರ ಆಕೃತಿಯನ್ನು ಕಂಡು ವಿಪ್ರದಾಸನು ದಿಗ್ಭ್ರಾಂತನಾದ --"ವಂದನ ಈ ಒಂದು ಸಣ್ಣಮಾತಿಗೋಸ್ಕರ ಇಷ್ಟು ಜಾಗ್ರತೆ ಅಷ್ಟು ದೊಡ್ಡ ಸಂಬಂಧ ತೊರೆದು ಹೋಗುತ್ತದೆಯೆ ? ಸುಧೀರನಿಗೆ ಎಷ್ಟು ವ್ಯಥೆಯಾಗಿರಬೇಕು. ಯೋಚಿಸಿ ನೋಡು,"—ವಿಪ್ರದಾಸನು ಹೇಳಿದನು.

ವಂದನ—" ಯೋಚಿಸಿದ್ದೇನೆ. ಈ ವ್ಯಥೆಯನ್ನು ಮರೆಯಲು ಸುಧೀರನಿಗೆ ಹೆಚ್ಚುಕಾಲ ಹಿಡಿಯುವುದಿಲ್ಲ. ಆ ಹೇಮ ನಲಿನಿಯೆ ಅವನಿಗೆ ಮಾರ್ಗವನ್ನು ತೋರುತ್ತಾಳೆ. ಕಾರಿನಲ್ಲಿ ಬಂದು ಕುಳಿತಾಗಿನಿಂದ —ಕುಳಿತಾಗಿನಿಂದಲೇ ಏಕೆ ಹಾಸಿಗೆಯ ಮೇಲೆ ಬಂದು ಮಲಗಿದ ಮೇಲೂ ಸಹ—ಯೋಚಿಸುತ್ತಿದ್ದೆ. ರಾತ್ರಿಯೆಲ್ಲ ನಿದ್ರೆ ಇಲ್ಲ; ಮನಸ್ಸಿನಲ್ಲಿ ಏನೋ ಕಳವಳ ಆದರೆ ದುಃಖ ಮಾತ್ರ ಲವಲೇಶವೂ ಇಲ್ಲ.

"ಸಿಟ್ಟು ಇಳಿದು ಸಮಾಧಾನ ತಂದುಕೊಂಡ ಮೇಲೆ ದುಃಖವಾಗುತ್ತದೆ. ಆಗ ಸುಧೀರನನ್ನು ಕುರಿತು ಹಂಬಲಿಸುತ್ತೀ " ಹೀಗೆಂದು ಹೇಳಿ ವಿಪ್ರದಾಸ ನಕ್ಕ.

ಈ ನಗುವಿನೊಂದಿಗೂ ವಂದನ ಸಹಕರಿಸಲಿಲ್ಲ. ತಾನು ಶಾಂತ ಭಾವದಿಂದಿದ್ದು ಉತ್ತರ ಕೊಟ್ಟಳು.—''ನನಗೆ ಸಿಟ್ಟಿಲ್ಲ. ಆದರೆ ಹೊರಟು ಬರುವಾಗ ಕಟುಮಾತುಗಳನ್ನಾಡದೆ ಬಂದಿದ್ದರೆ ಚೆನ್ನಾಗಿರುತ್ತಿತ್ತಲ್ಲ ಎಂದು ತಪಿಸುತ್ತಿದ್ದೇನೆ. ಅವನದೇ ತಪ್ಪೆಂದು ತೋರಿಸಿಕೊಟ್ಟು ಬಂದೆ ; ನಾನು ಬಹು ದುಃಖದಿಂದ ಬಿಟ್ಟು ಹೊರಟುಹೋಗುತ್ತಿರುವುದಾಗಿ ತೋರಿಸಿದೆ. ಆದರೆ ವಾಸ್ತವವಾದ ವಿಚಾರವೇ ಬೇರೆ. ಈ ನನ್ನ ಕೃತ್ರಿಮ ಆಚರಣೆಗಾಗಿ ನನಗೆ ದುಃಖವಾಗುತ್ತಿದೆ ; ಗ್ಲಾನಿಯಿಂದ ಕೊರಗುತ್ತಿದ್ದೇನೆ ಅಷ್ಟೆ" ಎಂದು ಹೇಳುತ್ತಿರುವಾಗ ಅವಳ ಕಣ್ಣಿನಲ್ಲಿ ನೀರು ಉಕ್ಕಿ ಬಂದಿತು.

ವಿಪ್ರದಾಸನ ಆಶ್ಚರ್ಯ ನೂರ್ಮಡಿ ಹೆಚ್ಚಿತು. ಇದು ನಟನೆಯಲ್ಲ ವೆಂದು ಅವನು ಅರಿತು 'ನಿಜವಾಗಿಯೂ ಸುಧೀರನನ್ನು ಬಿಟ್ಟುಬಿಟ್ಟೆಯಾ' ಎಂದು ಕೇಳಿದನು.

ಹೌದು ಬಿಟ್ಟೆ.

"ಅವನನ್ನು ಇದುವರಿಗೂ ಪ್ರೀತಿಸುತ್ತಿದ್ದೆ. ಇಷ್ಟು ಜಾಗ್ರತೆ ಪ್ರೇಮವು ಅಳಿದು ಹೋಗುವುದೆ?"

"ಇಷ್ಟು ಜಾಗ್ರತೆ ಅಳಿದುಹೋಗುವಂತಹ ಪ್ರೇಮವಾದುದ ರಿಂದಲೇ ನನಗೆ ಉತ್ತರ ಕೊಡಲೇ ಹೊಳೆಯಿತು. ಇಲ್ಲವಿದ್ದರೆ ನಿಮ್ಮ ಮುಂದೆ ಸುಳ್ಳು ಹೇಳಬೇಕಾಗಿತ್ತು--ಇಷ್ಟು ಹೇಳಿ ಸುಮ್ಮನೆ ಅವನ ಮುಖ ನೋಡುತ್ತಾ ಕುಳಿತುಕೊಂಡಳು. ಅನಂತರ ಮಾತನ್ನು ಮುಂದು ವರಿಸಿ "ನಾನು ಸುಧೀರನನ್ನು ಎಂದಾದರೂ ಪ್ರೀತಿಸುತ್ತಿದ್ದೆನೋ ಇಲ್ಲವೊ ಎಂಬುದನ್ನು ತಿಳಿಯಬೇಕೆಂದು ಬಯಸಿದಿರಿ. ಆಗ ನಿಜ ವಾಗಿಯೂ ಅವನನ್ನು ಪ್ರೀತಿಸುತ್ತಿರುವೆನೆಂದು ತಿಳಿದಿದ್ದೆ. ಆದರೆ ಕೆಲವು ದಿನಗಳ ತರುವಾಯ ಕಣ್ಮುಂದೆ ಬೇರೊಬ್ಬ ವ್ಯಕ್ತಿಯು ಬಂದನು—ಆಗ ಸುಧೀರನು ಕಣ್ಮರೆಯಾದ. ಈಗ ಅವನು ದೃಷ್ಟಿಪಥದಿಂದ ದೂರವಾದಂತೆ ತೋರುತ್ತಿದೆ. . . . ಇವನ್ನು ಕೇಳಿ ಬಹುಶಃ ನಿಮಗೆ ಜಿಗುಪ್ಸೆಯಾಗಿರ ಬೇಕು. ಇಷ್ಟು ಚಂಚಲ ಚಿತ್ತದ ಹುಡುಗಿಯರನ್ನು ಎಲ್ಲಿಯೂ ನೋಡಿಲ್ಲ ವೆಂದು ಯೋಚಿಸಬಹುದು. ಇದು ನಾಚಿಕೆಗೆಟ್ಟ ಮಾತೆಂದು ನನಗೆ ಗೊತ್ತು. ಯಾವ ತರುಣಿಯೂ ಇದನ್ನು ಒಪ್ಪಿಕೊಳ್ಳಲು ಇಷ್ಟಪಡುವು ದಿಲ್ಲ—ಇದು ಅವಳ ಶೀಲಕ್ಕೆ ಧಕ್ಕೆಯನ್ನುಂಟುಮಾಡುವ ವಿಚಾರ. ನಾನೂ ಕೂಡ ಬೇರೆ ಇನ್ನಾರ ಮುಂದೆಯೂ ಇದನ್ನು ಒಪ್ಪಿಕೊಳ್ಳಲಾರೆ. ಆದರೆ ಏನೋ ಎಂತೊ ನಿಮ್ಮ ಮುಂದೆ ಮಾತ್ರ ಯಾವ ಮಾತನ್ನಾದರೂ ಮರೆಮಾಚದೆ ನಿಸ್ಸಂಕೋಚವಾಗಿ ಆಡಬಲ್ಲೆ" ಎಂದು ಹೇಳಿದರು.

ವಿಪ್ರದಾಸ ಸುಮ್ಮನಿದ್ದ. ಪುನಃ ವಂದನ ಹೇಳತೊಡಗಿದಳು. "ಇದು ನನ್ನ ಸ್ವಭಾವವಿರಬಹುದು ಅಥವಾ ವಯಸ್ಸಿನ ಸ್ವಭಾವ ವಾದರೂ ಆಗಿರಬಹುದು. ಅಂತೂ ಅಂತಃಕರಣವು ಶೂನ್ಯವಾಗಿರಲು ಸಾಧ್ಯವಿಲ್ಲ. ನಾಲ್ಕುಕಡೆ ಹುಡುಕುತ್ತಿರುತ್ತದೆ. ಅಥವ ಇದು ಎಲ್ಲ ಹುಡು

ಗಿಯರ ಲಕ್ಷಣವಾಗಿದ್ದರೂ ಆಗಿರಬಹುದು. ಪ್ರೇಮಪಾತ್ರವನ್ನು ಹುಡುಕುತ್ತಾ ಹುಡುಕುತ್ತಾ ಕೊನೆಗೂ ಸರಿಯಾದವನು ಸಿಕ್ಕದೆ ಇದ್ದರೂ ಇರಬಹುದು "—ಇಷ್ಟು ಹೇಳಿ ಅವಳು ಏನನ್ನೊ ಯೋಚಿಸುತ್ತಾ ಕ್ಷಣಕಾಲ ಸುಮ್ಮನೆ ಕುಳಿತಿದ್ದು ಪುನಃ ಪ್ರಾರಂಭಿಸಿದಳು—" ಇದು ಹುಡುಕಿದರೂ ಸಿಕ್ಕದ ವಸ್ತುವಾಗಿರಬಹುದು—ಮೃಗಮರೀಚದಂತೆ."

ವಿಪ್ರದಾಸನು ಮೊದಲಿನಂತೆ ಮೌನವಾಗಿದ್ದನು. ಮನಸ್ಸಿನ ದೊಡ್ಡ ಆತಂಕವು ದೂರವಾದಂತೆ ಅವಳು ಪುನಃ ಹೇಳತೊಡಗಿದಳು – ಸುಧೀರನೊಂದಿಗೆ ಮದುವೆಯಾಗಬೇಕೆಂದು ಒಂದು ವರ್ಷದ ಮುಂಚೆಯೇ ಮಾತು ನಡೆದಿತ್ತು. ಆದರೆ ಅವನ ತಾಯಿಗೆ ಖಾಯಿಲೆಯಾದುದರಿಂದ್ದ ಅದು ನೆರವೇರಲಿಲ್ಲ. ನಿನ್ನೆ ರಾತ್ರಿ ಅಲ್ಲಿಂದ ಹೊರಟು ಬಂದಾಗಿನಿಂದ ಯೋಚಿಸುತ್ತಿದ್ದೇನೆ—ಆಗ ಒಂದು ಪಕ್ಷ ಮದುವೆಯಾಗಿದ್ದರೆ ಇಷ್ಟು ಜಾಗ್ರತೆ ಇಷ್ಟು ಅನಾಯಾಸವಾಗಿ ಅವನನ್ನು ತೊರೆಯುತ್ತಿದ್ದೆನೇ! ಆಗ ನನ್ನ ಮನಸ್ಸನ್ನು ಹೇಗೆ ಹತೋಟಿಯಲ್ಲಿ ಇಟ್ಟುಕೊಳ್ಳಬಹುದಾಗಿತ್ತು. ಧರ್ಮ ಬುದ್ಧಿಯಿಂದ? . . . ಸುಸಂಸ್ಕಾರದಿಂದ? . . . ಆದರೆ ಸ್ವೇಚ್ಛೆಯಾದ ಈ ಮನಸ್ಸು ಯಾವ ಶಾಸನವನ್ನೂ ಲೆಕ್ಕಿಸುವುದಿಲ್ಲ. ಅಂದರೆ ಏನುಗತಿ? ಈಗ ಯಾರ ಮಧ್ಯದಲ್ಲಿ ಕೆಲವುದಿನ ಇದ್ದು ಬಂದಿರುವೆನೋ ಅವರಂತೆ ನಾನೂ ಆಗುತ್ತಿದ್ದೇನೆ? ಮುಚ್ಚುಮರೆಯಾಗಿ ಮನಸ್ಸನ್ನು ತೃಪ್ತಿಪಡಿಸಿ, ನಾನಾ ತರಹೆ ಷಡ್ಯಂತ್ರಗಳನ್ನೂ ಹೂಡಿ, ಯತ್ನಪೂರ್ವಕವಾಗಿ ಒಣನಗುವನ್ನು ನಗುತ್ತ, ಜನಗಳ ಕಣ್ಣಿಗೆ ಮಣ್ಣೆರಚಿ ತಿರುಗುತ್ತಿದ್ದೇನೆ. ಅವರಂತೆ ಪರಸ್ಪರ ನಿಂದೆ ದ್ವೇಷ, ಅಸೂಯೆ—ಇವುಗಳಿಂದ ತುಂಬಿ—ನೀವು ಏಕೆ ಮಾತನಾಡುತ್ತಿಲ್ಲ?

" ನಿನ್ನ ಮನಸ್ಸಿನಲ್ಲಿರುವ ಆವೇಗದೊಂದಿಗೆ ನಾನು ಹೇಗೆ ಹೊಂದಿಕೊಳ್ಳಲಿ? ಅದು ಸಾಧ್ಯವಾಗದ ಕಾರಣ ನಾನು ಸುಮ್ಮನಿದ್ದೇನೆ."

" ಇಲ್ಲಿ ಸಾಧ್ಯವಿಲ್ಲ. ಹೀಗೆ ನೀವು ತಪ್ಪಿಸಿಕೊಂಡು ಉಳಿಯಲಾರಿರಿ. ಉತ್ತರವನ್ನು ಕೊಡಿ. ಇಲ್ಲದಿದ್ದರೆ ನಾನು ಬಿಡುವುದಿಲ್ಲ."

" ನಿನ್ನ ಮನಸ್ಸು ಸಮಾಧಾನ ಸ್ಥಿತಿಯಲ್ಲಿಲ್ಲ. ಈಗ ಉತ್ತರ ಕೊಡುವುದರಿಂದ ಪ್ರಯೋಜನವಾದರೂ ಏನು? ಈಗಿನ ನಿನ್ನ ಸ್ಥಿತಿ

ಸ್ವಾಭಾವಿಕವಲ್ಲವೆಂದು ನಿನಗೆ ತಿಳಿಯುವುದಾದರೂ ಹೇಗೆ ? "

"ತಿಳಿದುಕೊಳ್ಳಲಾರನೆ ? ನನ್ನ ಬುದ್ಧಿ ಇನ್ನೂ ಹಾಳಾಗಿಲ್ಲ."

"ಹಾಳಾಗಿಹೋಗಿಲ್ಲ ಆದರೆ ಮನಸ್ಸಿನ ಉದ್ವೇಗದಿಂದ ಅದು ಸ್ವಲ್ಪ ಕುಂಠಿತವಾಗಿದೆ. ಸಾಯಂಕಾಲ, ನೀನು ಸ್ವಲ್ಪ ಸ್ಥಿರಚಿತ್ತಳಾಗಿ ಕುಳಿತಾಗ ಮಾತಾಡೋಣ. ಇವಕ್ಕೆಲ್ಲ ಆಗ ಸಾಧ್ಯವಾದರೆ ಉತ್ತರ ಕೊಡುತ್ತೇನೆ."

"ಹಾಗಾದರೆ ಸರಿ. ಈಗ ನನಗೂ ಪುರಸತ್ತಿಲ್ಲ" ಎಂದು ಹೇಳಿ ವಂದನ ಹೊರಟುಹೋದಳು. ಅವಳಿಗೆ ಬೇಕಾದಷ್ಟು ಕೆಲಸವಿತ್ತು. ಅನ್ನದ ರಜಾ ತೆಗೆದುಕೊಂಡು ಕಾಳಿಘಾಟ್ ಕಡೆ ಬೆಳಿಗ್ಗೆ ಹೋಗಿದ್ದಾಳೆ. ಅವಳ ಕೆಲಸವನ್ನು ವಂದನ ಮಾಡಬೇಕು. ಎಷ್ಟು ಜನ ಆಳುಕಾಳುಗಳು, ಎಷ್ಟುಜನ ವಿದ್ಯಾರ್ಥಿಗಳು ಮನೆಯಲ್ಲಿ—ಅವರ ಮೇಲ್ವಿಚಾರಣೆಯಾಗ ಬೇಕು. ಕೆಲಸದ ಭರದಲ್ಲಿ ನಿನ್ನೆರಾತ್ರಿ ನಿದ್ರೆ ಕೆಟ್ಟಿರುವುದೂ, ಆಯಾಸ ವಾಗಿರುವುದೂ ಮರೆತುಹೋಯಿತು.

ರಾತ್ರಿ ವಿಪ್ರದಾಸನ ಊಟ ಮುಗಿದಿತ್ತು. ವಂದನ ತನ್ನ ಕೆಲಸ ವನ್ನು ಪೂರೈಸಿಕೊಂಡು ವಿಪ್ರದಾಸನ ಕೋಣೆಗೆ ಬಂದಳು. ಮಂಚದ ಹತ್ತಿರ ಒಂದು ಕುರ್ಚಿಯನ್ನೆಳೆದುಕೊಂಡು ಕುಳಿತುಕೊಂಡು "ನನ್ನ ಒಂದು ಪ್ರಶ್ನೆಗೆ ಉತ್ತರ ಕೊಡುವಿರಾ ?" ಎಂದು ವಿಪ್ರದಾಸನನ್ನು ಕೇಳಿ ದಳು.

ವಿಪ್ರದಾಸ —"ಸಾಧಾರಣವಾಗಿ ಉತ್ತರ ಕೊಟ್ಟೇಕೊಡುತ್ತೇನೆ. ಏನದು ಪ್ರಶ್ನೆ ?

ವಂದನ—"ನಿಜವಾಗಿಯೂ ನೀವು ಅಕ್ಕನನ್ನು ಪ್ರೀತಿಸುತ್ತೀರಾ ? ಹುಡುಗುತನದಲ್ಲಿ ನಿಮ್ಮ ಮದುವೆಯಾಯಿತು.—ಅದೂ ಎಷ್ಟೋ ವರ್ಷ ಗಳ ಹಿಂದೆ—ಅಂದಿನಿಂದ ನಿಮ್ಮ ಮನಸ್ಸಿನಲ್ಲಿ ಬೇರೆಭಾವನೆ ಬಂದಿಲ್ಲವೆ ?"

ವಿಪ್ರದಾಸ ದಂಗುಬಡಿದು ಸುಮ್ಮನೆ ಕುಳಿತುಬಿಟ್ಟ. ಇಂತಹ ಯೋಚನೆಗಳು ಯಾರಮನಸ್ಸಿನಲ್ಲಿಯಾದರೂ ಏಳಬಹುದೆಂಬುದರ ಕಲ್ಪನೆ ಸಹ ಅವನಿಗಿರಲಿಲ್ಲ. ಅವನು ಸ್ವಲ್ಪ ಚೇತರಿಸಿಕೊಡು ನಗುತ್ತ ಈ ಪ್ರಶ್ನೆ ಯನ್ನು ನಿನ್ನ ಅಕ್ಕನಿಗೆ ಹಾಕು ಎಂದು ಹೇಳಿದನು.

ವಂದನ—' ಅವಳಿಗೆ ಹೇಗೆ ಗೊತ್ತಾಗುತ್ತದೆ. ನಿಮ್ಮ ಮನಸ್ಸಿನ ನಿಜವಾದ ವಿಚಾರವು ಯಾರಿಗೂ ತಿಳಿಯುವುದಿಲ್ಲವಂತೆ. ಹೇಳಲು ಇಷ್ಟ ವಿಲ್ಲದಿದ್ದರೆ ಹೇಳಬೇಡಿ; ಒಂದಲ್ಲ ಒಂದು ತರದಲ್ಲಿ ಗೊತ್ತಾಗುತ್ತದೆ. ಹೇಳಿದರೆ ನಿಜ ಹೇಳಿ ಅಷ್ಟೆ."

"ನಿಜವನ್ನೇ ಹೇಳುತ್ತೇನೆ. ಏಕೆ, ನಿನಗೆ ಅನುಮಾನವಾಗಿದೆಯೆ ?"

" ನಿಜ ಅನುಮಾನವಿದೆ. ತಾವೇನೋ ದೊಡ್ಡ ಮನುಷ್ಯರು ಆದರೂ ಮನುಷ್ಯರು ತಾನೆ? ನಿಮ್ಮನ್ನು ನೋಡಿದರೆ ಎಲ್ಲಾ ಕ್ಷೇತ್ರದಲ್ಲೂ ಒಬ್ಬಂಟಿಗರಾಗಿಯೇ ಕಾಣುತ್ತೀರಿ. ನಿಮಗೆ ಗೆಳೆಯರಿಲ್ಲ, ಆಪ್ತರಿಲ್ಲ, ಇಷ್ಟ ವಿಲ್ಲ. ಇದು ಸುಳ್ಳೆ ? " ವಿಪ್ರದಾಸನು ಇದಕ್ಕೆಲ್ಲ ಉತ್ತರವನ್ನು ಕೊಡದೆ ವಂದನ "ಹೆಂಡತಿಯನ್ನು ಪ್ರೀತಿಸುವುದು ನನ್ನ ಧರ್ಮ" ಎಂದು ಮಾತ್ರ ಹೇಳಿದನು.

ವಂದನ—" ಧರ್ಮದ ವ್ಯಾಪ್ತಿ ಎಲ್ಲಿಯವರೆಗಿದೆಯೊ ಅಲ್ಲಿಯವರೆಗೆ ತಾವು ನಿರ್ದೋಷಿಗಳು. ಆದರೆ ಪ್ರಪಂಚದಲ್ಲಿ ಧರ್ಮಕ್ಕಿಂತಲೂ ದೊಡ್ಡ ದಾದ ಬೇರೆ ವಸ್ತುವಿಲ್ಲವೆ ? "

ವಿಪ್ರದಾಸ—" ಬೇರೆ ಏನೂ ಕಾಣಿಸುವುದಿಲ್ಲ."

ವಂದನ—" ನನಗೆ ಕಾಣಿಸುತ್ತದೆ. ಹೇಳಲೇ ? "

ವಿಪ್ರದಾಸನ ಮುಖ ಪೆಚ್ಚು ಬಿತ್ತು.—ಬಲಿಷ್ಠನಾದ ವಿಪ್ರದಾಸನ ಮುಖದಲ್ಲಿ ಒಂದು ತೊಟ್ಟು ರಕ್ತವಾದರೂ ಇದೆಯೊ ಇಲ್ಲವೊ ಎನ್ನುವಂತೆ ತೋರುತ್ತಿತ್ತು. ಅವನು ತನ್ನ ಎರಡು ಕೈಗಳನ್ನೂ ಅಡ್ಡ ಹಿಡಿದು ' ಬೇಡ ಬೇಡ ವಂದನ ಮುಂದೆ ಒಂದು ಮಾತೂ ಆಡಬೇಡ. ಈಗ ನೀನು ನಿನ್ನ ಕೋಣೆಗೆ ಹೊರಟುಹೋಗು—ನಾಳೆ—ನಾಳಿದ್ದು—ಅಂತೂ ಯಾವಾಗ ನಿನ್ನ ಮನಸ್ಸು ಸಮಾಧಾನ ಸ್ಥಿತಿಯಲ್ಲಿರುವುದೊ, ಯಾವಾಗ ನಿನ್ನಲ್ಲಿ ತಿಳಿದು ಆಲೋಚಿಸುವಷ್ಟು ತಾಳ್ಮೆ ಬರುವುದೊ ಆಗ ನಿನಗೆ ನಾನು ಉತ್ತರ ಕೊಡುತ್ತೇನೆ. ಆಗ ನಿನ್ನ ಚಿಕ್ಕಮ್ಮನ ಮನೆಯಲ್ಲಿರುವ—ನಿನ್ನ ಮನ ಸ್ಸನ್ನು ಕಲಕಿ ಉದ್ವೇಗಕ್ಕೆ ಕಾರಣವಾಗಿರುವ—ಜನಗಳು ಮಾತ್ರ ಅಲ್ಲ, ಈ ಪ್ರಪಂಚದಲ್ಲಿ ಬೇರೆಯವರೂ ಇದ್ದಾರೆಂದು ತಿಳಿದುಕೊಳ್ಳುತ್ತೀ. ಯಾರು ಧರ್ಮವನ್ನು ಬಿಡಲಾರರೊ ಅಂಥವರೂ ಪ್ರಪಂಚದಲ್ಲಿದ್ದಾರೆ.

ಬೇಡ ಈಗ ಕುತರ್ಕಬೇಕಾಗಿಲ್ಲ.—ನೀನು ಹೋಗು–"

ಇದು ವಿಪ್ರದಾಸನ ಅಜ್ಞೆ, ಇದನ್ನು ಉಲ್ಲಂಘಿಸುವಂತಿಲ್ಲವೆಂದು ವಂದನ ಅರಿತಳು. ಬಹುಶಃ ಇದರಿಂದಲೆ ಮನೆ ಮಂದಿಯೆಲ್ಲ ಹೆದರುತ್ತಿರುವುದೆಂದು ಕಾಣುತ್ತದೆ. ವಂದನ ಎದ್ದು ಅಲ್ಲಿಂದ ಸುಮ್ಮನೆ ಹೊರಟು ಹೋದಳು.

"ಮುಖರ್ಜಿ ಸಾಹೆಬ್! ಚಿಕ್ಕಮ್ಮನ ಮನೆಗೆ ಪುನಃ ಹೋಗುತ್ತೇನೆ ಈ ಸಲ ಕೆಲವು ಗಂಟೆಗಳ ಕಾಲ ಅಲ್ಲ, ಚಿಕ್ಕಮ್ಮ ನನ್ನನ್ನು ಎಂದು ಬೊಂಬಾಯಿಗೆ ಕಳಿಸುವ ವ್ಯವಸ್ಥೆ ಮಾಡುವಳೊ ಅಲ್ಲಿಯವರೆಗೆ ಅಲ್ಲಿರುತ್ತೇನೆ ಎಂದು ಮರುದಿನ ಸಾಯಂಕಾಲ ವಂದನ ಬಂದು ತಿಳಿಸಿದಳು.

"ಅಂದರೆ?"

"ಅಂದರೆ ನನ್ನ ತಂದೆಯವರಿಂದ ಅರ್ಜೆಂಟ್ ಟೆಲಿಗ್ರಾಂ ಬಂದಿದೆ. ಅವರ ಆಜ್ಞೆ. ನಾಳೆ ಬೆಳಿಗ್ಗೆ ನನ್ನನ್ನು ಕರೆದುಕೊಂಡು ಹೋಗಲು ಚಿಕ್ಕಮ್ಮನ ಕಾರು ಬರುವುದು."

ಅಂದರೆ ನಿನ್ನ ಚಿಕ್ಕಮ್ಮನಲ್ಲಿ ಪ್ರತೀಕಾರ ಮಾಡಬೇಕೆಂಬ ಉತ್ಸಾಹವೂ ಅದಕ್ಕೆ ತಕ್ಕ ಬುದ್ಧಿವಂತಿಕೆಯೂ ಇವೆ ಎಂದು ಅರ್ಥವಾಯಿತು. ಇದು ಅವರ ಟೆಲಿಗ್ರಾಂಗೆ ಕೊಟ್ಟ ಉತ್ತರವಿರಬೇಕು. ಎಲ್ಲಿ ಆ ಟೆಲಿಗ್ರಾಂ, ನೋಡೋಣ"

"ಊಹೂ ನಿಮಗೆ ನಾನು ತೋರಿಸುವುದಿಲ್ಲ."

ಕೇಳಿ ವಿಪ್ರದಾಸ ಸ್ವಲ್ಪಹೊತ್ತು ಸ್ತಬ್ಧನಾಗಿ ಕುಳಿತುಬಿಟ್ಟ. ಅನಂತರ ನಕ್ಕು ಹೇಳಿದ—"ದೇವರು ಯಾರ ದರ್ಪವನ್ನೂ ಸ್ಥಿರವಾಗಿಡುವುದಿಲ್ಲ, ಅದಕ್ಕೆ ದೃಷ್ಟಾಂತ ಇದೇ. ಯಾವುದಾದರೂ ಪ್ರಸಂಗವನ್ನು ಆಧಾರವಾಗಿಟ್ಟುಕೊಂಡು ನನ್ನ ಮೇಲೂ ಇಲ್ಲ ಸಲ್ಲದ ಅಪರಾಧವನ್ನು ಯಾರಾದರೂ ಹೊರಿಸಬಹುದೆಂದು ನಾನು ನಂಬಿರಲಿಲ್ಲ. ಆದರೆ ಈ ದಿನ ಅದೂ ಸಾಧ್ಯವೆಂದು ಗೊತ್ತಾಯಿತು. ಇಂತಹ ಜನರೂ ಇದ್ದಾರೆ. ನಿನ್ನ ಚಿಕ್ಕಮ್ಮನಿಗೆ ಆ ಉಪಾಯ ಹೊಳೆಯಿತೆ? ಎಲ್ಲಿ ಕೊಡು ನೋಡೋಣ. ದೋಷಾರೋಪಣೆ ಎಷ್ಟು ಗಹನವಾಗಿದೆ."—ಇಷ್ಟು ಹೇಳಿ ವಿಪ್ರದಾಸ ಕೈ ಒಡ್ಡಿದ.

ಈ ಸಲ ವಂದನ ಅವನ ಕೈಗೆ ಟೆಲಿಗ್ರಾಂ ಕೊಟ್ಟಳು. ಅನಾಥ ರಾಯರ ಟೆಲಿಗ್ರಾಂ ಬಹಳ ಉದ್ದವಾಗಿದೆ. ಮೊದಲಿನಿಂದ ಕಡೆಯವರೆಗೆ ಓದಿ ಅದನ್ನು ಹಿಂದಕ್ಕೆ ಕೊಡುತ್ತ ' ಒಟ್ಟಿನಲ್ಲಿ ನಿಮ್ಮ ತಂದೆ ಅಸಂಗತ ವಾದುದನ್ನು ಬರೆಯಲಿಲ್ಲ ನಿಸ್ವಾರ್ಥ ಪರೋಪಕಾರದಲ್ಲಿ ಯಾಕೆ ಅಪವಾದ ಗಳು ಬರುತ್ತವೆ. ಖಾಯಿಲೆ ಮಲಗಿರುವ ಸಂಬಂಧೀಕರ ಸೇವೆಗೆ ಒದಗುವುದೂ ಈ ಪ್ರಸಂಚದಲ್ಲಿ ತಪ್ಪೇ ಎಂದು ಕಾಣುತ್ತದೆ '

" ನಾನು ಚಿಕ್ಕಮ್ಮನ ಮನೆಗೆ ಹೊರಟು ಹೋಗಲೇಬೇಕು ? ನಿಮ್ಮ ಅಭಿಪ್ರಾಯವೇನು ? " ವಂದನ ಕೇಳಿದಳು. " ನಿಮ್ಮ ತಂದೆಯ ಆಜ್ಞೆ ಯಂತೆ ಹೋಗಲೇಬೇಕು. ಇದೇನು ಬಲರಾಮಪುರದ ಮುಖರ್ಜಿ ಪರಿ ವಾರವಲ್ಲ—ಈ ವಿಷಯದಲ್ಲಿ ಏನನ್ನಾದರೂ ಹೇಳುವ ಅಧಿಕಾರ ಮುಖರ್ಜಿ ಮಹಾಶಯರಿಗಿಲ್ಲ.—ನಿಮ್ಮ ಚಿಕ್ಕಮ್ಮನಿಗಿದೆ. ಅದೂ ನಿನ್ನ ತಂದೆಗೆ ಹೇಳಿ ಈ ಆಜ್ಞೆಯನ್ನು ಹೊರಡಿಸಿದ್ದಾಳೆ. ಅಂದರೆ ಅದರಂತೆ ನಡೆಯಲೇಬೇಕು."

" ಇದು ನಿಮ್ಮ ಅತಿ ಸಾಮಾನ್ಯವಾದ ವಿಚಾರವಾಯಿತು. ತಂದೆಗೆ ಇಲ್ಲಿಯ ಸಮಾಚಾರ ಗೊತ್ತಿಲ್ಲ. ಆದರೂ ಅವರ ಆಜ್ಞೆ. ನ್ಯಾಯ ಅನ್ಯಾಯ ಎಂದು ವಿಚಾರಮಾಡದೆ ಅದನ್ನು ಪರಿಪಾಲಿಸಬೇಕೆ? ಚಿಕ್ಕಮ್ಮನ ಮನೆಯ ವಿಷಯವಂತೂ ನಿಮಗೆ ತಿಳಿದೇ ಇದೆ."

ವಿಪ್ರದಾಸ —" ನನಗೆ ಗೊತ್ತಿಲ್ಲ. ಆದರೆ ನಿನ್ನ ಬಾಯಿಂದ ಕೇಳಿದ್ದೇವೆ. ಚೆನ್ನಾಗಿಲ್ಲ ಅಂತ. ನನ್ನ ದೇಹಸ್ಥಿತಿ ಚೆನ್ನಾಗಿದ್ದಿದ್ದರೆ ನಾನೇ ಬೊಂಬಾಯಿಗೆ ಕರೆದುಕೊಂಡುಹೋಗಿ ಬಿಟ್ಟು ಬರುತ್ತಿದ್ದೆ. ಈಗ ಅಷ್ಟು ಶಕ್ತಿ ಇಲ್ಲ. "

ವಂದನ—" ಇಂಥ ಸ್ಥಿತಿಯಲ್ಲಿ ನಿಮ್ಮನ್ನು ಬಿಟ್ಟುಹೋಗಬೇಕೆ ? ಅಪರಿಚಿತ ಚಿಕ್ಕಮ್ಮನ ಹಟವೇ ಎಲ್ಲಕ್ಕಿಂತಲೂ ಮೇಲೊ ? "

" ಅಲ್ಲ ಆದರೆ ಬೇರೆ ಉಪಾಯ ? "

" ಉಪಾಯ ಇಷ್ಟೆ. ನಾನು ಹೋಗುವುದಿಲ್ಲ. "

ವಿಪ್ರದಾಸ—' ಹಾಗಾದರೆ ಇರು. ನಿಮ್ಮ ತಂದೆಗೆ ಟೆಲಿಗ್ರಾಂ ಕೊಟ್ಟು ಬಿಡು. ಆದರೆ ಚಿಕ್ಕಮ್ಮ ಬಂದು ಕರೆದಾಗ ಏನು ಹೇಳುತ್ತೀ? "

" ನನಗೆ ಬರಲು ಸಾಧ್ಯವಿಲ್ಲ ಅಂತ. ಹೆಚ್ಚೇನೂ ಹೇಳುವುದಿಲ್ಲ."

"ಇಷ್ಟಕ್ಕೆ ಸುಮ್ಮನಾಗುತ್ತಾಳೆಯೆ ನಿನ್ನ ಚಿಕ್ಕಮ್ಮ? ಆಗ ನಮ್ಮ ತಾಯಿ ಹೆಸರಿಗೆ ತಂತಿಕೊಡುತ್ತಾಳೆ." ಹೀಗೆ ಅವಳು ಮಾಡಬಹುದೆಂದು ವಂದನ ಯೋಚಿಸಿರಲಿಲ್ಲ. ವಿಪ್ರದಾಸನ ಮಾತು ಕೇಳಿ ಅವಳ ಮನಸ್ಸಿನಲ್ಲಿ ಕಳವಳ ಉಂಟಾಯಿತು. "ನೀವು ಹೇಳಿದುದು ನಿಜ. ಬಹುಶಃ ಅವಳು ತಂತಿ ಕೊಟ್ಟಿದ್ದರೂ ಕೊಟ್ಟಿರಬಹುದು—ಇದನ್ನು ಮಾಡಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಏಕಿರಬಹುದು? ನಿಮಗೇನಾದರೂ ಗೊತ್ತೆ?"

ವಿಪ್ರದಾಸ–"ಹೇಗೆ ಗೊತ್ತಾಗಬೇಕು. ಆದರೂ ಇಷ್ಟು ಮಾತ್ರ ಊಹಿಸಬಲ್ಲೆ. ಇಷ್ಟೆಲ್ಲ ಪ್ರಯತ್ನ ನಿಸ್ವಾರ್ಥ ಭಾವನೆಯಿಂದ ಎಂದಿಗೂ ಮಾಡಿಲ್ಲ. ಇದರಿಂದ ನಿನಗೆ ಒಳ್ಳೆಯದಾಗುವುದೆಂಬ ಭರವಸೆ ಇಲ್ಲ. ಏನೋ ವಿಚಾರ ಅವಳ ಮನ್ಸಿನಲ್ಲಿರಬೇಕು."

ವಂದನ—"ಅವಳ ಮನಸ್ಸಿನಲ್ಲಿರುವುದು ನನಗೆ ಗೊತ್ತು. ಅವಳ ಅಣ್ಣನ ಮಗ ಒಬ್ಬನಿದ್ದಾನೆ. ಅವನು ಬ್ಯಾರಿಸ್ಟರ್ ಪರೀಕ್ಷೆ ಪಾಸುಮಾಡಿ ಬಂದಿದ್ದಾನೆ. ಚಿಕ್ಕಮ್ಮ ನಮ್ಮಿಬ್ಬರಿಗೂ ಪರಿಚಯ ಮಾಡಿಸಿಕೊಟ್ಟು ಮಾತುಕತೆಗೆ ಅವಕಾಶವನ್ನು ಕಲ್ಪಿಸಿಕೊಟ್ಟಿಸಿದ್ದಳು. ನನಗೆ ಯೋಗ್ಯನಾದ ವರನೆಂದರೆ ಅವನೇ ಎಂದು ಅವಳು ನಂಬಿದ್ದಾಳೆ. ಅದಕ್ಕೆ ಕಾರಣ ಇಷ್ಟೆ. ನಮ್ಮಪ್ಪನಿಗೆ ನಾನು ಒಬ್ಬಳೆ ಮಗಳು. ಅವರು ಬಿಟ್ಟುಹೋಗುವ ಆಸ್ತಿ ಇದೆಯಾಗಿ ಅವನು ಒಂದು ಬಿಡಿಕಾಸು ದುಡಿಯದಿದ್ದರೂ ಸುಖವಾಗಿರಬಹುದು."

"ಸೋದರಳಿಯನ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಅತ್ತೆಯ ಧರ್ಮ. ಇದರಲ್ಲಿ ದೋಷವೇನೂ ಇಲ್ಲ. ಹುಡುಗ ಹೇಗಿದ್ದಾನೆ?"

"ಚೆನ್ನಾಗಿದ್ದಾನೆ."

"ನನ್ನಂತೆ?"

ವಂದನ ನಕ್ಕುಬಿಟ್ಟಳು—"ಇದು ನಿಮ್ಮ ಹೆಮ್ಮೆಯ ಮಾತಾಯಿತು. ನಿಮ್ಮಷ್ಟು ಚೆಲುವರು ಪ್ರಪಂಚದಲ್ಲಿ ಇಲ್ಲವೇ ಇಲ್ಲವೆಂದು ನೀವು ತಿಳಿದಿರಬೇಕು, ಆದರೆ ಅದು ನಿಶ್ಚಯವಾದರೆ ಪ್ರಪಂಚದಲ್ಲಿರುವ ಹುಡುಗಿಯರೆಲ್ಲ ಮದುವೆ ಮಾಡಿಕೊಳ್ಳದೆ ಇರಬೇಕಾಗುತ್ತದೆ. ನಿಮ್ಮ ಮುಖವನ್ನೇ

ನೋಡಿ ನೋಡಿ ಅವರು ದಿನ ತಳ್ಳಬೇಕಾಗುತ್ತದೆ. ಅಶೋಕ ನೋಡು ವುದಕ್ಕೆ ಚೆನ್ನಾಗಿಯೇ ಇದ್ದಾನೆ.''

" ಹಾಗಾದರೆ ಒಪ್ಪಿರುವೆನೆಂದು ಹೇಳು "

" ಒಂದು ವೇಳೆ ಒಪ್ಪಿದರೂ ಯಾರೂ ಏನೂ ಜರಿಯುವಂತಿಲ್ಲ. ಅಷ್ಟು ನಾನೂ ಹೇಳಬಲ್ಲೆ."—ಎಂದು ಹೇಳಿ ನಂದನ ಎದ್ದು ನಿಂತಳು ಅನಂತರ " ನೋಡಿ ಐದು ಗಂಟೆ ಹೊಡೆಯಿತು. ನೀವು ಬಾರ್ಲಿ ಗಂಜಿ ತೆಗೆದುಕೊಳ್ಳುವ ಹೊತ್ತು. ಹೋಗಿ ತರಲೆ? ಅಷ್ಟರಲ್ಲಿ ನೀವು ಅಶೋಕನ ವಿಚಾರವಾಗಿ ಯೋಚನೆ ಮಾಡಿ." ಎಂದು ಹೇಳಿ ಹೊರಟು ಹೋದಳು. ಐದಾರು ನಿಮಿಷಗಳಲ್ಲಿ ಹಿಂತಿರುಗಿದಳು. ಕೈಯಲ್ಲಿ ಬೆಳ್ಳಿಯ ಬಟ್ಟಲಿತ್ತು —ತಣ್ಣೀರಿನಲ್ಲಿಟ್ಟು ಆರಿಸಿದ ಗಂಜಿ. ಅದರಲ್ಲಿ ನಿಂಬೇಹಣ್ಣು ಹಿಂಡುತ್ತಾ ' ಪೂರ್ತಿ ಕುಡಿಯಬೇಕು, ತಿಳಿಯಿತೇ ?'' ಎಂದಳು.

" ಅಂತೂ ಬಲಾತ್ಕಾರ ಮಾಡುವುದರಲ್ಲಿ ನಿನ್ನ ಬಿಟ್ಟರೆ ಇಲ್ಲ. ಈ ವಿದ್ಯೆಯಲ್ಲಿ ನೀನು ಎತ್ತಿದ ಕೈ.''

" ಯಾರಾದರೂ ಕೇಳಿದರೆ ಮುಖರ್ಜಿಗಳ ಮೇಲೆ ಕೈ ಮಾಡಿ ಈ ವಿದ್ಯೆಯಲ್ಲಿ ಚತುರಳಾಗಿರುವೆನೆಂದು ಹೇಳುತ್ತೇನೆ ''—ನಂದನ ನಗುತ್ತಾ ಉತ್ತರಕೊಟ್ಟಳು.

* * * *

ವಿಪ್ರದಾಸ್ ಗಂಜಿ ಕುಡಿದನಂತರ ಎಂಜಲು ಬಟ್ಟಲನ್ನು ತೆಗೆದುಕೊಂಡು ಹೋಗುತ್ತ ತಿರುಗಿನೋಡಿ " ನಾನು ಒಂದು ಮಾತು ಕೇಳಲೆ '' ಎಂದು ನಂದನ ಹೇಳಿದಳು.

" ಏನು ? ''

" ನಿಮ್ಮನ್ನು ಈ ಪ್ರಪಂಚದಲ್ಲಿ ಯಾರು ಹೆಚ್ಚು ಪ್ರೀತಿಸುತ್ತಾರೆಂದು ಹೇಳುವಿರಾ ? ''

" ಹೇಳುತ್ತೇನೆ.''

" ಹೇಳಿ ಹಾಗಾದರೆ."

ಆ ವ್ಯಕ್ತಿಯ ಹೆಸರು ವಂದನಾದೇವಿ ಅಂತ" ಕೇಳಿದ್ದೆ ತಡ ಎವೆ ಇಕ್ಕುವುದರೊಳಗೆ ನಂದನ ಅಲ್ಲಿಂದ ಓಡಿಹೋದಳು, ಹದಿನೈದು ನಿಮಿಷ

ಗಳಾದನಂತರ ಮತ್ತೆ ಹಿಂತಿರುಗಿ ಹಾಸಿಗೆಯ ಹತ್ತಿರ ಒಂದು ಕುರ್ಚಿಯನ್ನೆಳೆದುಕೊಂಡು ಕುಳಿತುಕೊಂಡಳು. ವಿಪ್ರದಾಸನು ನಕ್ಕು "ಆಗ ಏಕೆ ಓಡಿ ಹೋದೆ ? ಎಂದು ಕೇಳಿದನು.

ವಂದನ ಮೊದಲು ಏನು ಉತ್ತರ ಕೊಡಲೂ ತೋಚದೆ ಸುಮ್ಮನಿದ್ದಳು. ಅನಂತರ ನಿಧಾನವಾಗಿ ಹೇಳಿದಳು—"ನಿಮ್ಮ ಮಾತು ಕೇಳಿ ನನಗೆ ನಾಚಿಕೆಯಾಯಿತು. ನನ್ನ ಒಂದು ಗುಪ್ತ ಕಳ್ಳತನವನ್ನು ಕಂಡು ಹಿಡಿದಂತೆ ತೋರಿತು."

"ಆದುದರಿಂದ ಇದುವರೆಗೂ ನನ್ನ ಮುಖದ ಕಡೆ ನೋಡಲಾಗುತ್ತಿರಲಿಲ್ಲ. ಅಲ್ಲವೇ?"

"ಏಕೆ ಸಾಧ್ಯವಿಲ್ಲ ? " ಎಂದು ವಂದನ ಪ್ರಯತ್ನ ಪೂರ್ವಕವಾಗಿ ಮುಖವನ್ನೆತ್ತಿ ಅವನಕಡೆ ನೋಡಿದಳು. ಅವಳ ಮುಖ ಅಷ್ಟಾದರೂ ನಾಚಿಕೆಯಿಂದ ಕೆಂಪೇರಿದ್ದಿತು. ಸ್ವಲ್ಪ ಹೊತ್ತಿನಲ್ಲಿ ಹೇಗೋ ಸುಧಾರಿಸಿಕೊಂಡು "ನಿಮಗೆ ಈ ವಿಚಾರ ಹೇಗೆ ಗೊತ್ತಾಯಿತು ಹೇಳಿ ?" ಎಂದು ಕೇಳಿದಳು.

ವಿಪ್ರದಾಸ—"ವಂದನ ಆ ಮಾತು ವ್ಯರ್ಥ. ನನ್ನನ್ನು ಕೇವಲ ಕಲ್ಲು ಎಂದು ತಿಳಿದಿರುವೆಯಾ ? ಇಷ್ಟು ಅಲ್ಪವಿಚಾರವೂ ನನಗೆ ತಿಳಿಯುವುದಿಲ್ಲವೆ ? ಈ ವಿಷಯದಲ್ಲಿ ಅಲ್ಪಸ್ವಲ್ಪ ಸಂಶಯವೇನಾದರೂ ಉಳಿದಿದ್ದರೆ ಈಗ ನಿನ್ನನ್ನು ನೋಡಿ ಅದೂ ಬಯಲಾಯಿತು."

ವಂದನ ಪುನಃ ತಲೆಬಾಗಿದಳು. ವಿಪ್ರದಾಸನು ಮಾತನ್ನು ಮುಂದುವರಿಸಿದನು—"ಆದರೆ ಮುಖವನ್ನೆತ್ತಿ ನೋಡು. ನಾಚುವಂತಹ ಕೆಲಸವನ್ನೇನೂ ನೀನು ಮಾಡಿಲ್ಲ. ಆದರಲ್ಲೂ ನನ್ನ ಮುಂದೆ ನಾಚಬೇಕಾದ್ದಿಲ್ಲ. ಎಲ್ಲಿ ನನ್ನ ಕಡೆ ನೋಡು, ಮುಖ ಎತ್ತು. ನನ್ನ ಮಾತು ಕೇಳು."

ಅದೇ ಅಧಿಕಾರವಾಣಿ. ವಂದನ ಮುಖವನ್ನೆತ್ತಿ ನೋಡಿದಳು. ಸ್ವಲ್ಪಕಾಲ ಸುಮ್ಮನಿದ್ದಳು—"ನನ್ನ ಮೇಲೆ ನಿಮಗೆ ತುಂಬ ಕೋಪ ಇರಬೇಕಲ್ಲವೆ ?" ಎಂದು ಕೇಳಿದಳು.

ವಿಪ್ರದಾಸ ತುಸು ನಕ್ಕು ಹೇಳಿದ—"ಸ್ವಲ್ಪವೂ ಇಲ್ಲ. ಇದಕ್ಕೇಕೆ ಕೋಪ ? ಈ ತಪ್ಪು ಒಂದಲ್ಲ ಒಂದು ದಿನ ನಿನಗೆ ಗೊತ್ತಾಗುವುದೆಂದು

ನನ್ನ ನಂಬಿಕೆ. ಆ ದಿನ ಇದಕ್ಕೆ ತಕ್ಕ ಪ್ರತೀಕಾರವನ್ನು ಮಾಡುವೆ."

"ಇದು ಗೊತ್ತೇ ಆಗದಿದ್ದರೆ. ಅದು ತಪ್ಪೆಂಬುದರ ಅರಿವೂ ಆಗದೇ ಇದ್ದರೆ?"

"ಆಗಿಯೇ ಆಗುತ್ತೆ, ಇದರಿಂದ ಎಷ್ಟೆಷ್ಟು ಅನರ್ಥಗಳಾಗುತ್ತವೆ-ಇದು ನಿನಗೆ ಗೊತ್ತಾಗದೆ ಇದ್ದರೆ ನೀನು ನನ್ನನ್ನು ಪ್ರೀತಿಸಲಿಲ್ಲವೆಂದು ತಿಳಿಯುತ್ತೇನೆ. ಅಥವ ಸುಧೀರನನ್ನು ಪ್ರೀತಿಸುತ್ತಿದ್ದಂತೆ ಇದೂ ಒಂದು ಕೃತ್ರಿಮ ಪ್ರೇಮ—ಮನಸ್ಸಿನಲ್ಲಿ ಒಂದಲ್ಲ ಒಂದು ವ್ಯಕ್ತಿಯನ್ನು ತಂದು ಕೊಂಡು ಕೇವಲ ಕಾಮತೃಪ್ತಿಗೆ ಯತ್ನಿಸಿದಂತೆ. ಅದಕ್ಕಿಂತ ಹೆಚ್ಚೆಂದು ತಿಳಿಯಬೇಡ."

ವಂದನಳ ಮುಖ ಮಲಿನವಾಯಿತು. ಅವಳು ಬಹಳ ವ್ಯಥೆಯಿಂದ "ಸುಧೀರನೊಂದಿಗೆ ಹೋಲಿಸಬೇಡಿ. ಇದನ್ನು ಸಹಿಸಲಾರೆ! ಪ್ರಪಂಚ ದಲ್ಲಿ ಅನರ್ಥಗಳು ಸಂಭವಿಸುವುವೆಂಬುದನ್ನು ನಂಬುತ್ತೇನೆ. ಇದು ಅಮಂಗಲಕಾರಿ ಎಂದೂ ಬಲ್ಲೆ. ಆದರೆ ಇಷ್ಟಕ್ಕೋಸ್ಕರವೇ ಅದು ಸುಳ್ಳೆಂದು ನಂಬಲಾರೆ. ಸುಳ್ಳೇ ಆಗಿದ್ದರೆ ನಿಮ್ಮ ಸ್ನೇಹ ಲವಲೇಶವಾದರೂ ನನಗೆ ಲಭಿಸುತ್ತಿತ್ತೆ? ಈಗ ನನಗೆ ಲಭಿಸಿಲ್ಲವೆ?''

ವಿಪ್ರದಾಸ ಉಸಿರಾಡದೆ ಅವಳ ಮಾತನ್ನು ಕೇಳುತ್ತಿದ್ದ. ಮಾತನ್ನು ಮುಗಿಸಿ ವಂದನ ಅವನ ಮುಖದ ಕಡೆ ನೋಡಿದಳು. ವಿಪ್ರದಾಸ ಬೆಚ್ಚಿ ಬಿದ್ದ—"ಸ್ವಲ್ಪ ಏಕೆ ವಂದನ ಬೇಕಾದಷ್ಟು ದೊರೆತಿದೆ. ಇಲ್ಲದಿದ್ದರೆ ನಿನ್ನ ಕೈಯಲ್ಲಿ ಊಟಮಾಡುತ್ತಿದ್ದೆನೆ? ಹಗಲಿರುಳೆನ್ನದೆ ನೀನು ಮಾಡಿದ ಸೇವೆ ಯನ್ನು ಯಾವ ಬಲದಮೇಲೆ ಸ್ವೀಕರಿಸಬೇಕಾಗಿತ್ತು. ಆದರೆ ಇದರಿಂದ ನಾನು ಹೇಯವಾದ ಕೆಲಸವನ್ನು ಮಾಡಲೆ? ಅಧರ್ಮವನ್ನಾಚರಿಸಲೆ? ಅಥವ ನಿನ್ನ ಪತನಕ್ಕೆ ಕಾರಣನಾಗಬಲ್ಲೆನೆ? ನನ್ನಲ್ಲಿರುವ ವಿಶ್ವಾಸದ ಬಲದ ಮೇಲೆ ತಲೆಯನ್ನೆತ್ತಿ ತಿರುಗಾಡುತ್ತಿರುವ ಜನರು ತಲೆಬಾಗುವಂತೆ ಮಾಡಲೆ? ಅವರ ವಿಶ್ವಾಸವನ್ನು ಧ್ವಂಸಮಾಡಲೆ? ಇದನ್ನು ನೀನು ಬಯಸುವೆಯಾ?"

"ಅಂದರೆ ಈಗ ನೀವು ಯಾವುದನ್ನು ಬಿಡಲಾರಿರೋ ಅದು ನಿಮ್ಮ ಜಂಭವೆಂದು ಒಪ್ಪಿಕೊಳ್ಳಿ?"

ನಿಜ ಹೇಳಿ. ಜನಗಳ ದೃಷ್ಟಿಯಲ್ಲಿ ದೊಡ್ಡವನಾಗಿರಬೇಕೆಂಬ ಮೋಹವನ್ನೇ ನೀವು ಹೆಚ್ಚು ಶ್ರೇಷ್ಠವೆಂದು ನಂಬಿದ್ದೀರಿ ಅಲ್ಲವೆ ? ಇಲ್ಲದಿದ್ದರೆ ಇದು ಹೇಗೆ ಹೇಯ–ಇದು ಹೇಗೆ ಅಧರ್ಮ ? ಮನುಷ್ಯನು ತನ್ನ ಮನಸ್ಸಿಗೆ ತೋಚಿದಂತೆ ಮಾಡಿರುವ ವ್ಯವಸ್ಥೆಯನ್ನು ಧರ್ಮವೆನ್ನೋಣವೇ ? ಅದನ್ನು ಎಷ್ಟೋಸಲ ಅವನೆ ಉಲ್ಲಂಘಿಸಿದ್ದಾನೆ. ಎಷ್ಟೋ ಸಲ ಅವನು ಅದನ್ನು ಪಾಲಿಸಿದ್ದಾನೆ. ಆದರೆ ಅದನ್ನೇ ಧರ್ಮವೆಂದು ನೀವು ಬೇಕಾದರೆ ನಂಬಿ ನಾನು ಮಾತ್ರ ನಂಬಲಾರೆ."

ವಿಪ್ರದಾಸನು ಗಂಭೀರವಾಣಿಯಿಂದ ಉತ್ತರಕೊಟ್ಟನು—" ನೀನು ಅದನ್ನು ನಂಬದಿದ್ದರೂ ನಾನು ನಂಬಿದ್ದೇನೆ. ಆದರಿಂದ ನನ್ನ ಕೆಲಸ ವೆಲ್ಲವೂ ಸುಗಮವಾಗಿ ಸಾಗುತ್ತಿವೆ. ವಂದನ ನೀನು ಬೇಕಾದಷ್ಟು ಇಂಗ್ಲೀಷು ಪುಸ್ತಕವನ್ನೋದಿದ್ದೀಯೆ. ಚಿಕ್ಕಮ್ಮನ ಮನೆಯಲ್ಲಿ ವಿವಿಧ ಟೀಕೆ ಟಿಪ್ಪಣಿಗಳನ್ನು ಕೇಳಿದ್ದೀಯೆ ಅವುಗಳನ್ನು ಮರೆಯಲು ಬಹಳ ಕಾಲ ಹಿಡಿಯುವುದೆಂದು ತೋರುತ್ತದೆ."

" ನೀವು ಹಾಸ್ಯಮಾಡಿ ನನ್ನನ್ನು ಗೇಲಿ ಎಬ್ಬಿಸುತ್ತಿದ್ದೀರಿ."

ನಾನು ಹಾಸ್ಯಮಾಡುತ್ತಿಲ್ಲ. ನಾನು ಯಾವುದನ್ನು ಸತ್ಯವೆಂದು ತಿಳಿ ದಿರುವೆನೊ ಅದನ್ನೆ ಹೇಳಿದ್ದೇನೆ."

" ಸರಿ ಅದು ಗೊತ್ತಾಯಿತು. ಆದರೆ ಈ ಹುಚ್ಚು ನಿನಗೆ ಯಾರಿಂದ ಹಿಡಿಯಿತು.''

" ನಿಮ್ಮಿಂದ "

" ಏನು ಹೇಳುತ್ತೀ ? ಈ ಅಧರ್ಮ ಬುದ್ಧಿ—ಈ ಹುಚ್ಚಿಗೆ ಸ್ವತಃ ನಾನು ಕಾರಣನೆ ?

" ನಿಜ ನೀವೇ ಕಾರಣರು. ನಿಮಗೆ ಗೊತ್ತಿಲ್ಲದೇ ಇರಬಹುದು ಆದರೂ ನಿಮ್ಮ ವಿನಃ ಬೇರೆ ಯಾರೂ ಕಾರಣರಲ್ಲ.''

ಈ ಸಲ ವಿಪ್ರದಾಸ ಆಶ್ಚರ್ಯ ಚಕಿತನಾಗಿ ಸುಮ್ಮನೆ ಅವಳ ಕಡೆ ನೋಡುತ್ತ ಕುಳಿತಿದ್ದ. ವಂದನ ಹೇಳತೊಡಗಿದಳು—" ಯಾವುದನ್ನು ನೀವು ಅಧರ್ಮವೆಂದು ದೂಷಿಸಿರುವಿರೊ ಅದನ್ನು ನಾನು ಒಪ್ಪುವುದಿಲ್ಲ. ನೀವು ಯಾವುದನ್ನು ಧರ್ಮವೆಂದು ಏಕಾಗ್ರತೆಯಿಂದ ನಂಬಿರುವಿರೊ

ಅದು ಧರ್ಮವಲ್ಲ, ಅದು ಕೇವಲ ನಿಮ್ಮ ಸಂಸ್ಕಾರ. ಅದು ಅತ್ಯಂತ ದೃಢವಾದುದು. ಅದಕ್ಕೆ ಮಿಗಿಲಾದುದು ಬೇರೊಂದಿಲ್ಲ."

ವಿಪ್ರದಾಸನು ತಲೆಹಾಕಿ ಒಪ್ಪಿಕೊಳ್ಳುತ್ತ ಇರಬಹುದು ನಿನ್ನ ಮಾತು ನಿಜವಾಗಿರಬಹುದು. ನನ್ನ ಸಂಸ್ಕಾರ—ದೃಢ ಸಂಸ್ಕಾರವೇ ಆಗಿರಬಹುದು. ಯಾವಾಗ ಮನುಷ್ಯನ ಧರ್ಮವು ಈ ಸಂಸ್ಕಾರದ ರೂಪನ್ನು ಧರಿಸುವುದೋ ಆಗ ಅದು ಸಾರ್ಥಕವಾಗುವುದು. ಅದು ಆಗ ಸಹಜವೂ ಸ್ವಾಭಾವಿಕವೂ ಆಗಿ ತೋರುವುದು. ಆಗ ಮನುಷ್ಯನ ಜೀವನದಲ್ಲಿ ಘರ್ಷಣೆಗಳಾಗಲೀ, ದ್ವಂದ್ವಗಳಾಗಲೀ ಇರುವುದಿಲ್ಲ. ಅದನ್ನು ನಂಬುವುದಕ್ಕೆ ಅಂತರ್ದ್ವಂದ್ವದ ಅವಶ್ಯಕತೆಯೂ ಇರುವುದಿಲ್ಲ. ಅಂದರೆ ಬುದ್ಧಿಯು ಶಾಂತಿಯನ್ನು ಹೊಂದಿ ಅಬಾಧ ಜಲ ಸ್ರೋತದಂತೆ ತನ್ನ ಸಹಜ ಮತ್ತು ಸ್ವಾಭಾವಿಕ ರೀತಿಯಿಂದ ವಿಕಾಸೋನ್ಮುಖವಾಗುವುದು. ಆ ದಿನ ನಾನು ಬಹುಶಃ ಇದರ ವಿಚಾರವನ್ನೆ ಹೇಳಿರಬೇಕು—ಇದೆ ವಿಪ್ರದಾಸನ ಅತ್ಯಾಜ್ಯ ಧರ್ಮ. ಇದರಲ್ಲಿ ಪರಿವರ್ತನೆ ಅಸಂಭವ.

"ಏನು ? ಎಂದಿಗೂ ಇದರಲ್ಲೂ ಪರಿವರ್ತನೆ ಆಗಲಾರದೆ ?"

"ಇದುವರೆಗೂ ಹಾಗೆಂದು ನಂಬಿದ್ದೇನೆ. ಈ ಜೀವನದಲ್ಲಿ ಏನಾದರೂ ಪರಿವರ್ತನೆ ಆಗಬಹುದೆಂದು. ಈ ದಿವಸ ಕೂಡ ಯೋಚಿಸಲಾರೆ."

ಇಷ್ಟು ಹೊತ್ತಿನಮೇಲೆ ವಂದನಳ ಕಣ್ಣಿನಲ್ಲಿ ಪ್ರವಾಹವು ಉಕ್ಕಿ ಬಂದಿತು. ವಿಪ್ರದಾಸನು ಅವಳ ಕೈಯನ್ನು ತನ್ನ ಕಡೆ ಎಳೆದುಕೊಳ್ಳುತ್ತಾ—'ವಂದನ, ಪರಿವರ್ತನೆಯು ಆವಶ್ಯಕತೆಯಾದರೂ ಏನಿದೆ ? ನಾನು ನಿನ್ನನ್ನು ಪ್ರೀತಿಸಿದ್ದೇನೆ. ನಿನ್ನ ಪ್ರೇಮವು ನನ್ನ ಮನಸ್ಸಿನಲ್ಲಿದ್ದು—ದುಃಖದಲ್ಲಿ ಧೈರ್ಯವನ್ನು, ಎದೆಗುಂದಿದಾಗ ಸಹಿಸುವ ಸಾಮರ್ಥ್ಯವನ್ನು, ಕೊಡುತ್ತಿರುತ್ತದೆ ನಾನೊಬ್ಬನೆ ಹೊರೆಯನ್ನು ಹೊರಲಾರದೆ ಹೋದಾಗ ನಿನ್ನನ್ನು ಕರೆಯುತ್ತೇನೆ. ಆ ಉಚ್ಚಸ್ಥಾನವು ಇಂದಿನಿಂದ ಮೀಸಲಾಗಿದೆ. ಆಗ ಬರುವೆಯಷ್ಟೆ ?' ಎಂದು ಕೇಳಿದನು.

ವಂದನ ಕಣ್ಣೊರೆಸಿಕೊಂಡು ಬರುತ್ತೇನೆ. ಬರುವಷ್ಟು ಚೈತನ್ಯವಿದ್ದರೆ.—ಮಾರ್ಗವೂ ತೆರೆದಿದ್ದರೆ. ಇಲ್ಲವಾದರೆ ಬರಲಾರೆ' ಎಂದು

ಉತ್ತರ ಕೊಟ್ಟಳು.

ಜವಾಬು ಕೇಳಿ ವಿಪ್ರದಾಸ ಬೆಚ್ಚಿದ. " ಸರಿ! ನೀನು ಹೇಳಿದುದು ನಿಜ!! ಬರುವ ಮಾರ್ಗ ತೆರೆದಿದ್ದರೆ—ಎಂದೆಂದಿಗೂ ತೆರೆಯದಂತೆ ಮುಚ್ಚಿದ್ದರೆ ಸಾಧ್ಯವಿಲ್ಲ. ಆದರೆ ಆಗ ಬರಬೇಕು. ಅಭಿಮಾನದಿಂದ ವಿಮುಖಳಾಗಬೇಡ."

ವಂದನ ಪುನಃ ತನ್ನ ಕಣ್ಣುಗಳನ್ನು ಒರೆಸಿಕೊಳ್ಳುತ್ತ ' ನಿಮ್ಮನ್ನು ಒಂದು ಮಾತು ಬೇಡಿಕೊಳ್ಳುತ್ತೇನೆ. ನನ್ನ ಮಾತನ್ನು ಯಾರಿಗೂ ಹೇಳಬೇಡಿ '' ಎಂದು ಕೇಳಿಕೊಂಡಳು.

'' ಇಲ್ಲ. ಎಂದಿಗೂ ಹೇಳುವುದಿಲ್ಲ. ನನ್ನ ಮನಸ್ಸನ್ನು ಬಿಚ್ಚಿ ಯಾರ ಮುಂದೆ ಹೇಳಿಕೊಳ್ಳಲಿ? ನನಗೆ ಅಂತಹ ಆಪ್ತರಿಲ್ಲವೆಂದು ನೀನು ಮೊದಲೇ ಅರಿತಿದ್ದೀಯೆ."

" ನಿಜ ಅದು ನನಗೆ ಗೊತ್ತು."

ಇಬ್ಬರೂ ಕ್ಷಣಕಾಲ ಸುಮ್ಮನಿದ್ದರು. " ಇಷ್ಟು ವಿಶಾಲವಾದ ಪ್ರಪಂಚದಲ್ಲಿ ನಾನು ಒಬ್ಬಂಟಿಗನಾಗಿರುವನೆಂದು ನಿನಗೆ ಹೇಗೆ ಗೊತ್ತಾಯಿತು ವಂದನ?"—ವಿಪ್ರದಾಸನು ಕೇಳಿದನು.

ವಂದನ:—ಹೇಗೆ ಗೊತ್ತಾಯಿತೋ ಏನೋ! ನಾನು ಸಿಟ್ಟುಗೊಂಡು ನಿಮ್ಮ ಮನೆ ಬಿಟ್ಟು ಹೊರಟಾಗ ನೀವೂ ಜೊತೆಯಲ್ಲಿದ್ದಿರಿ. ರೈಲಿನಲ್ಲಿ ಆ ಮದೋನ್ಮತ್ತರಾದ ಪರಂಗಿಯವರ ನೆನಪಿದೆಯೆ? ಅಂದಿನ ಘಟನೆ ಅಷ್ಟೇನೂ ದೊಡ್ಡ ವಿಷಯವಲ್ಲ.—ಆದರೂ ನಮ್ಮ ಸುತ್ತಮುತ್ತ ಕಂಡು ಬರುವ ಸರ್ವಸಾಮಾನ್ಯ ವ್ಯಕ್ತಿ ನೀವಲ್ಲವೆಂದು ಗೊತ್ತಾಯಿತು. ನೀವು ಯಾವ ಹೊರೆಯನ್ನು ಬೇಕಾದರೂ ಹಿಂದುಮುಂದು ನೋಡದೆ ಹೊರಲು ಸಿದ್ಧರಾಗಿರುವಿರೆಂದು ತಿಳಿಯಿತು. ದ್ವಿಜಬಾಬು ಅದನ್ನೇ ಆ ದಿನ ಹೇಳಿದ್ದರು. ನಾನು ಅದನ್ನು ಒರೆಹಚ್ಚಿ ನೋಡುತ್ತಿದ್ದೆ. ನಿಮಗೆ ಇನ್ನೊಬ್ಬರಿಂದ ಏನೂ ಆಗಬೇಕಾದ್ದಿಲ್ಲ. ಆದಿನ ರಾತ್ರಿ ಹಾಸಿಗೆಯ ಮೇಲೆ ಮಲಗಿದಾಗ ಸಹ ನಿಮ್ಮ ಯೋಚನೆ ಬರುತ್ತಿತ್ತು. ಏನು ಮಾಡಿದರೂ ನಿದ್ರೆ ಬರಲಿಲ್ಲ. ಕಡೆಗೆ ರಾತ್ರಿಯಲ್ಲಿ ಎದ್ದು ನೋಡಿದೆ. ಕೆಳಗೆ ದೇವರ ಮನೆಯಲ್ಲಿ ದೀಪ ಉರಿಯುತ್ತಿದ್ದಿತು. ತಾವು ಧ್ಯಾನ

ಮಗ್ನರಾಗಿ ಕುಳಿತಿದ್ದಿರಿ. ಎವೆ ಇಕ್ಕದೆ ನಿಮ್ಮನ್ನು ನೋಡುತ್ತಿರುವಂತೆಯೇ ಬೆಳಗಾಯಿತು. ನೌಕರರು ಎಲ್ಲಿಯಾದರೂ ನೋಡಿಯಾರೆಂದು ಹೆದರಿ ಕೋಣೆಗೆ ಓಡಿ ಬಂದೆ. ಮುಖರ್ಜಿಗಳೆ, ಆದಿನದ ನಿಮ್ಮ ಮೂರ್ತಿ ಕಣ್ಣಿಗೆ ಕಟ್ಟಿದಂತಿದೆ. ಅದನ್ನು ಮರೆಯಲಾರೆ. ಕಣ್ಣು ಮುಚ್ಚಿದೊಡನೆ ಎದುರಿಗೆ ಬಂದು ನಿಂತಂತೆ ತೋರುತ್ತದೆ."

"ಏನು ನಾನು ಪೂಜೆಮಾಡುತ್ತಿರುವಾಗ ನೋಡಿದೆಯ ?" ಎಂದು ವಿಪ್ರದಾಸನು ನಕ್ಕು ಕೇಳಿದನು.

"ಪೂಜೆಮಾಡುತ್ತಿರುವಾಗ ನಿಮ್ಮ ತಾಯಿಯನ್ನೂ ನೋಡಿದ್ದೇನೆ ಆದರೆ ಅದೇ ಬೇರೆ. ಇದೇ ಬೇರೆ. ನೀವು ಯಾರನ್ನು ಧ್ಯಾನಿಸುತ್ತೀರಿ ?"

ಪುನಃ ನಗುತ್ತ ವಿಪ್ರದಾಸನು ಉತ್ತರ ಕೊಟ್ಟನು—"ಅದನ್ನು ತಿಳಿದು ನೀನು ಮಾಡುವುದಾದರೂ ಏನು ? ನೀನಂತೂ ಧ್ಯಾನ ಮಾಡುವುದಿಲ್ಲ."

"ಇಲ್ಲ. ಮಾಡುವುದಿಲ್ಲ. ಆದರೂ ತಿಳಿದುಕೊಳ್ಳಬೇಕೆಂಬ ಇಚ್ಛೆ ಇದೆ."

ವಿಪ್ರದಾಸ ಸುಮ್ಮನಿದ್ದ. ವಂದನ ಹೇಳತೊಡಗಿದಳು—"ಆ ದಿನ ನೀವು ಎಲ್ಲರ ಮಧ್ಯೆ ಇದ್ದರೂ, ಒಂಟಿಯಾಗಿರುವಿರೆಂದು ತಿಳಿಯಬಂದಿತು. ಯಾವ ಮಟ್ಟವನ್ನು ಮುಟ್ಟುವುದರಿಂದ ನಿಮ್ಮ ಜೊತೆಯಲ್ಲಿರಬಹುದೊ ಆ ಮಟ್ಟವನ್ನು ಬೇರೆ ಯಾರೂ ಹತ್ತಲಾರರು....ಇನ್ನೊಂದು ಮಾತಿಗೆ ಉತ್ತರ ಕೊಡುವಿರಾ ?"

'ಯಾವ ಮಾತಿಗೆ'

'ಈಗ ನಿಮಗೆ ನಾರಿಯ ಪ್ರೇಮದ ಆವಶ್ಯಕತೆ ಇಲ್ಲ. ಅಲ್ಲವೆ ?'

"ಅಂದರೆ ಏನರ್ಥ ?"

"ಅರ್ಥ ಗಿರ್ಥ ಗೊತ್ತಿಲ್ಲ. ಸುಮ್ಮನೆ ಕೇಳಿದೆ. ಅದರ ಇಚ್ಛೆ ನಿಮಗೀಗ ಇಲ್ಲವೆಂದು ತೋರುತ್ತದೆ. ನಿಮ್ಮ ದೃಷ್ಟಿಯಲ್ಲಿ ಅದು ಅತಿ ತುಚ್ಛವಾಗಿ ಹೋಗಿದೆ.—ಸರಿಯೆ ಹೇಳಿ ?"

ವಿಪ್ರದಾಸನು ಉತ್ತರ ಕೊಡಲಿಲ್ಲ. ಸುಮ್ಮನೆ ನಗುತ್ತ ಅವಳ ಕಡೆ ನೋಡುತ್ತಿದ್ದ.

ಅಷ್ಟರಲ್ಲಿ ಕೆಳಗಡೆ ಪ್ರಾಂಗಣದಲ್ಲಿ ಕಾರಿನ ಶಬ್ದ ಕೇಳಿಸಿತು. ಅನಂತರ ದ್ವಿಜದಾಸನ ದನಿ ಕೇಳಬಂದಿತು. ಮರುಕ್ಷಣದಲ್ಲಿ ಅನ್ನದ ಬಂದು 'ವಿಪ್ರದಾಸಬಾಬು, ದ್ವಿಜಬಾಬು ಬಂದಿದ್ದಾರೆ' ಎಂದು ಬಾಗಿಲಿನ ಹತ್ತಿರ ಬಂದು ಹೇಳಿದಳು.

"ಒಬ್ಬನೆ ಬಂದಿದ್ದಾನೊ? ಅಥವಾ ಜೊತೆಯಲ್ಲಿ ಇನ್ನಾರಾದರೂ ಇದಾರೆಯೊ?"

"ಇಲ್ಲ. ಒಬ್ಬರೇ ಕಾಣಿಸುತ್ತಾರೆ. ಬೇರೆ ಯಾರೂ ಇಲ್ಲ."

ಇದನ್ನು ಕೇಳಿ ವಂದನಳಿಗೆ ತನ್ನ ಇತಿಮಿತಿಯು ಅರಿವಾಯಿತು.... ಹೋಗುತ್ತೇನೆ, ಅವರ ಊಟ ಉಪಚಾರಕ್ಕೆ ಏರ್ಪಾಟು ಮಾಡುತ್ತೇನೆಂದು ಹೇಳಿ ಹೊರಟುಹೋದಳು.

ಬೆಳಿಗ್ಗೆ ದ್ವಿಜದಾಸ ಬಂದು ವಿಪ್ರದಾಸನಿಗೆ ಕಾಲುಮುಟ್ಟಿ ನಮಸ್ಕರಿಸಿದನು. ವಂದನ ಕೋಣೆಯ ಒಂದು ಭಾಗದಲ್ಲಿ ಪೂಜೆಗೆ ಅಣಿಮಾಡುತ್ತಿದ್ದಳು. 'ಇದೇ ಪಂಚಮಿ ದಿನ ಅಮ್ಮ ಸರೋವರವನ್ನು ತೋಡಿಸುವ ಉತ್ಸವವನ್ನು ನೆರವೇರಿಸಬೇಕಂತೆ. ಬಹಳ ದೊಡ್ಡ ಸಮಾರಂಭ ಅಣ್ಣ' ಎಂದು ದ್ವಿಜದಾಸ ಹೇಳಿದ.

"ಅಮ್ಮನ ಕಾರ್ಯಕಲಾಪಗಳೆಲ್ಲವೂ ಬಹಳ ವಿಜೃಂಭಣೆಯಿಂದಲೇ ನಡೆಯುತ್ತವೆ ದ್ವಿಜು. ಇದಕ್ಕೇಕೆ ಚಿಂತೆ?"—ವಿಪ್ರದಾಸ ನಕ್ಕು ಕೇಳಿದ.

ದ್ವಿಜದಾಸ--ಅದು ಸರಿ. ಈ ಸಲ ವಾಸು ಕಾಹಿಲೆಯಿಂದ ಎದ್ದಿದ್ದಾನೆ. ಆಗ ಹೊತ್ತ ಹರಕೆಯಂತೆ ಒಂದು ಸಣ್ಣ ಅಶ್ವಮೇಧಯಾಗ ಅನ್ನಿ. ಅಧ್ಯಾಪಕರು ಪಂಡಿತರು ಇವರುಗಳ ಸನ್ಮಾನಕ್ಕೆ ಪಟ್ಟಿ ಸಿದ್ಧವಾಗಿದೆ. ಇದಲ್ಲದೆ ಅತ್ತಿಗೆ ಬಾಯಿಂದ ಈ ಉತ್ಸವಕ್ಕೆ ಆಹ್ವಾನಿತರಾಗಿರುವ ನೆಂಟರಿಷ್ಟರು, ಅತಿಥಿ ಅಭ್ಯಾಗತರು ಇವರುಗಳ ಪಟ್ಟಿಯನ್ನು ನೋಡಿದರೆ ಈ ಸಲ ನಿಮ್ಮ ಹಣದಲ್ಲಿ ಬಹು ದೊಡ್ಡ ಭಾಗಕ್ಕೆ ಇವರು ಕೈಹಚ್ಚುವಂತೆ ತೋರುತ್ತದೆ. ಇನ್ನೂ ಅವಕಾಶವಿರುವಾಗಲೆ ಸ್ವಲ್ಪ ಹುಷಾರಾಗಿ.

ವಂದನ ಮುಖ ಎತ್ತಿ ನೋಡಲಿಲ್ಲ. ಆದರೆ ಜೋರಾಗಿ ನಕ್ಕುಬಿಟ್ಟಳು. ವಿಪ್ರದಾಸ ಜಮೀನ್ದಾರ. ಜಿಪುಣ, ಲೋಭಿ–ಹೀಗೆ ಅಪಪ್ರಚಾರ ಮಾಡಲು ಅವಕಾಶ ದೊರೆತಲ್ಲಿ ಅವನ ತಾಯಿ ವಿನಾ ಬೇರೆ

ಯಾರೂ ಆ ಸುಸಮಯವನ್ನು ಕಳೆದುಕೊಳ್ಳಲು ಇಷ್ಟಪಡುವುದಿಲ್ಲ. ವಿಪ್ರದಾಸನು ಈ ನಗುವಿನೊಂದಿಗೆ ತಾನೂ ಸಹಕರಿಸಿ ನಕ್ಕು 'ಇದು ನಿನ್ನ ಸರದಿ. ಈ ಸಲದ ಖರ್ಚು ನಿನ್ನದು' ಎಂದನು.

"ನನ್ನದೇನೂ ಅಭ್ಯಂತರವಿಲ್ಲ, ಆದರೆ ನನ್ನ ಹತ್ತಿರ ಏನಾದರೂ ಇದ್ದರೇ? ಅಲ್ಲದೆ ಏರ್ಪಾಟಿನಲ್ಲಿಯೂ ಅನೇಕ ಬದಲಾವಣೆಗಳಾಗಬೇಕಾಗುತ್ತದೆ. 'ಟೋಲಕ'[1] ಅಥವಾ ಪಾಠಶಾಲೆಯ ಪಂಡಿತ ಸಮಾಜಕ್ಕೆ ಆ ದಿನ ಮರ್ಯಾದೆ ಕೊಡಬೇಕಾಗುವುದು; ಆದರೆ ಪಾಠಶಾಲೆಗಳಿಂದ ಯಾರನ್ನು ದೂರವಾಗಿಟ್ಟಿದ್ದೀರೊ ಅವರಿಗೆ?"

ವಿಪ್ರದಾಸನು ಮೊದಲಿನಂತೆ ನಕ್ಕು ಹೇಳಿದ—"ಪಾಠಶಾಲೆಗಳ ಮೇಲೆ ನಿನಗೇಕಿಷ್ಟು ಸಿಟ್ಟು? ಜನಗಳ ಬಾಯಲ್ಲಿ ಸುಮ್ಮನೆ ನಿಂದೆಯನ್ನು ಕೇಳಿದ್ದೀಯೆ ಹೊರತು ನೀನು ಕಣ್ಣಾರೆ ಕಂಡಿಲ್ಲ. ಆ ಸಮಾಜದಲ್ಲಿ ನಾನೂ ಒಬ್ಬನಾಗಿರುವುದರಿಂದ ನಿನ್ನ ರಾಜ್ಯದಲ್ಲಿ ನನಗೆ ಅನ್ನ ಸಿಕ್ಕುವ ಹಾಗಿಲ್ಲ ಅನ್ನು."

ದ್ವಿಜದಾಸನು ಹತ್ತಿರ ಬಂದು ಕಾಲುಮುಟ್ಟಿ ನಮಸ್ಕರಿಸಿ ಉತ್ತರ ಕೊಟ್ಟ—"ಹಾಗೆ ಹೇಳಬೇಡಿ ತಾವು. ಆದರೆ ನನಗೆ ಗೊತ್ತಿರುವುದು ಇಷ್ಟೆ. ನಮ್ಮ ಅಣ್ಣ ಸಾಮಾನ್ಯರಾದ ನಮ್ಮಂತೆ ಅಲ್ಲ. ಅವರು ನಮ್ಮ ವಿಚಾರಕ್ಕೆ ನಿಲುಕದವರು."

ವಿಪ್ರದಾಸನು ಅವನ ಮಾತನ್ನು ಅಲ್ಲಿಯೆ ತಡೆಗಟ್ಟಿ "ನನ್ನ ಕಾಹಿಲೆ ವಿಚಾರ ಅಮ್ಮನಿಗೆ ತಿಳಿಯಲಿಲ್ಲವಷ್ಟೆ" ಎಂದು ಕೇಳಿದನು.

"ಇಲ್ಲ, ಆದರೆ ಗೊತ್ತಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು. ಆಗ ಆ ಕೆರೆ ಕೊಳದ ಮಾತು ಏಳುತ್ತಿರಲಿಲ್ಲ."

"ಬಂಧು ಬಳಗ ಎಲ್ಲರನ್ನೂ ಕರೆಕಳಿಸುವ ಏರ್ಪಾಟು ಆಗಿದೆಯೆ?"

"ಆಗುತ್ತಾ ಇದೆ. ಭೂತ, ಭವಿಷ್ಯತ್, ವರ್ತಮಾನ–ತ್ರಿಕಾಲದ ಬಂಧುಬಾಂಧವರನ್ನೂ ಕರೆಸಬೇಕಂತೆ. ಪುತ್ರಿಯೊಂದಿಗೆ ದಯಮಾಡಿ

1. ಪ್ರಾಚೀನಕಾಲದ ಸಂಸ್ಕೃತ ಪಾಠಶಾಲೆಗೆ ಬಂಗಾಲಿಯಲ್ಲಿ 'ಟೋಲಕ' ವೆಂದು ಕರೆಯುತ್ತಾರೆ. ನಿಮ್ನವರ್ಗದವರಿಗೆ ಅಲ್ಲಿ ಸ್ಥಾನವಿಲ್ಲ.

ಸಲು ಅಕ್ಷಯಬಾಬುಗಳಿಗೆ ಆಮಂತ್ರಣ ಕೊಡಲಾಗಿದೆ. ಈ ದೊಡ್ಡ ಸಮಾರಂಭದಲ್ಲಿ ಮೈತ್ರೇಯಿಯ ಅಗ್ನಿ ಪರೀಕ್ಷೆಯೂ ಆಗಬೇಕೆಂದು ಅಮ್ಮನ ವಿಚಾರ. ಅವರನ್ನು ಇಲ್ಲಿಂದ ಕರೆದುಕೊಂಡು ಹೋಗುವ ಭಾರ ನನ್ನ ಮೇಲೆ ಬಿದ್ದಿದೆ."

"ಮತ್ತೆ ಬೇರೆ ಯಾರನ್ನೂ ಕರೆದುಕೊಂಡು ಬರಲು ಅಮ್ಮ ಹೇಳಲಿಲ್ಲವೆ ?"

"ಹೌದು, ಮತ್ತೆ ಅನ್ನದಳನನ್ನೂ ಕರೆದುಕೊಂಡು ಹೋಗಬೇಕು. ಕಾಲೇಜಿನ ವಿದ್ಯಾರ್ಥಿಗಳಲ್ಲಿ ಯಾರಾದರೂ ಇಷ್ಟಪಟ್ಟಲ್ಲಿ ಅವರೂ ಹೊರಡಬಹುದು."

"ನಿನ್ನ ಅತ್ತಿಗೆ ಏನಾದರೂ ಹೇಳಿಕಳಿಸಿದ್ದಾಳೊ ?"

"ಇಲ್ಲ"

ಕೆಳಗಡೆ ಪುನಃ ಕಾರಿನ ಶಬ್ದ ಕೇಳಿತು. ಹಾರನ್ನಿನ ಪರಿಚಿತಶಬ್ದವು ಕಿವಿಗೆ ಬಿದ್ದ ಕೂಡಲೆ ವಂದನ ಕಿಟಕಿಯಿಂದ ಇಣಿಕಿನೋಡಿ 'ಚಿಕ್ಕಮ್ಮನ ಕಾರು ; ಹೋಗಿ ನೋಡುತ್ತೇನೆ. ನೀವು ಸಂಧ್ಯಾವಂದನೆ, ಪೂಜೆ ಎಲ್ಲ ಮುಗಿಸಿ–ಹೊತ್ತಾಯಿತು' ಎಂದು ಹೇಳಿ ಕೆಳಗಿಳಿದು ಹೋದಳು.

"ನಾನೂ ಹೋಗುತ್ತೇನೆ ಕೈಕಾಲು ತೊಳೆದುಕೊಳ್ಳಬೇಕು. ಒಂದು ಗಂಟೆ ಬಿಟ್ಟು ಬರುತ್ತೇನೆ" ಎಂದು ಹೇಳಿ ದ್ವಿಜದಾಸನು ಹೊರಟುಹೋದ.

ವಿಪ್ರದಾಸನ ಸಂಧ್ಯಾಪೂಜೆ ಮುಗಿಯಿತು. ಅನ್ನದ ಹಣ್ಣು ಹಾಲು ಕೊಟ್ಟು ಹೋದಳು. ಚಿಕ್ಕಮ್ಮನ ಮನೆಯಿಂದ ಬಂದ ಹುಡುಗಿಯ ಜೊತೆಯಲ್ಲಿ ವಂದನ ವ್ಯಸ್ತಳಾಗಿರುವಳೆಂದು ಅನ್ನದ ವಿಪ್ರದಾಸನಿಗೆ ತಿಳಿಸಿದಳು.

ದ್ವಿಜದಾಸ ಹೊತ್ತಿಗೆ ಸರಿಯಾಗಿ ಹಿಂತಿರುಗಿ ಬಂದ. ಅವನ ಕೈಯಲ್ಲಿ ಒಂದು ದೊಡ್ಡ ಪಟ್ಟಿ ಇತ್ತು–ಬಹುಶಃ ಒಟ್ಟು ಕಲ್ಕತ್ತೆಯ ಬಜಾರಿನ ಅರ್ಧ ಸಾಮಾನನ್ನು ಕೊಂಡು ಊರಿಗೆ ಕಳಿಸಬೇಕೆಂದು ತೋರುತ್ತದೆ ಅಣ್ಣ ತಮ್ಮಂದಿರು ಆ ಪಟ್ಟಿಯನ್ನು ತಿರಿವಿಹಾಕುತ್ತಿದ್ದರು. ಅಷ್ಟರಲ್ಲಿ "ಮುಖರ್ಜಿ ಸಾಹೇಬ, ಒಳಗೆ ಬರಬಹುದೊ? ಕಾಲಿನಲ್ಲಿ ಬೂಡ್ಸಿದೆ" ಎಂಬ ಧ್ವನಿ ಕೇಳಬಂದಿತು.

" ಬೂಡ್ಸೆ? ಇರಲಿ ಬಾ."

ವಂದನ ಕೋಣೆಯೊಳಕ್ಕೆ ಬಂದಳು. ಬಲರಾಮಪುರದಲ್ಲಿ ಮೊದಲು ನೋಡಿದಾಗ ಅವಳು ಯಾವ ಪೋಷಾಕನ್ನು ಧರಿಸಿದ್ದಳೊ ಅದೇ ಪೋಷಾಕನ್ನು ಇಂದೂ ಧರಿಸಿದ್ದಳು. " ಎಲ್ಲಿಗೆ ಹೊರಟೆ ? " - ಎಂದು ವಿಪ್ರದಾಸನು ಬಹಳ ಆಶ್ಚರ್ಯದಿಂದ ಕೇಳಿದನು:

' ಚಿಕ್ಕಮ್ಮನ ಮನೆಗೆ '

' ಬರೋದು '

" ಈ ಸಲ ಬರೋ ವಿಚಾರವೇ ಇಲ್ಲ.–ಇಷ್ಟು ಹೇಳಿ ಬಗ್ಗಿ ನಮಸ್ಕರಿಸಿದಳು; ಆದರೆ ಅಂದಿನಂತೆ ಕಾಲುಮುಟ್ಟಿ ನಮಸ್ಕರಿಸಲಿಲ್ಲ. ಮುಖ ಸಹ ಎತ್ತದೆ ತಲೆಯಮೇಲೆ ಕೈಜೋಡಿಸಿ ದ್ವಿಜದಾಸನಿಗೆ ನಮಸ್ಕರಿಸಿ ಅವಳು ಕೋಣೆಯಿಂದ ಹೊರಟುಹೋದಳು.

## ೨೦

"ವಂದನ ಹೀಗೆ ಏಕೆ ಹೊರಟುಹೋದಳು? ನಾನು ಬಂದುದಕ್ಕೊ?" ಎಂದು ದ್ವಿಜದಾಸ ಕೇಳಿದ.

" ಇಲ್ಲ. ಅವಳ ತಂದೆಯಿಂದ ಟೆಲಿಗ್ರಾಂ ಬಂದಿತ್ತು. ಬೊಂಬಾಯಿಗೆ ಹೋಗುವವರೆಗೆ ಅವಳು ಚಿಕ್ಕಮ್ಮನ ಮನೆಯಲ್ಲೇ ಇರಬೇಕಂತೆ "— ವಿಪ್ರದಾಸ ಸಮಾಧಾನ ಹೇಳಿದ.

" ಇದೆಲ್ಲಿಂದ ಬಂದಳು ಈ ಚಿಕ್ಕಮ್ಮ"....ವಂದನ ಆಬಗ್ಗೆ ನನ್ನ ಜೊತೆಯಲ್ಲಿ ಒಂದು ಮಾತು ಸಹ ಆಡಿರಲಿಲ್ಲ. ಊರಿನಿಂದ ಬಂದಾಗಿನಿಂದಲೂ ನೋಡುತ್ತಿದ್ದೇನೆ ಅವಳು ದೂರದೂರ ಇದ್ದು ಕಾಲ ಕಳೆದಳು. ಬೆಳಗಾದ್ದೇ ತಡ ಎದ್ದು ಹೊರಟು ಹೋದಳು. ನಮಸ್ಕಾರಮಾಡಿದಳಲ್ಲ ಆದರೆ ಅದೂ ಮನಃ ಪೂರ್ತಿ ಅಲ್ಲ. ಸುಮ್ಮನೆ ಮುಖ ತಿರುಗಿಸಿ ! ನನ್ನ ಮೇಲೇಕೆ ಇವಳಿಗಿಷ್ಟು ದ್ವೇಷ ? "—

ದ್ವಿಜದಾಸನ ಈ ಆಕ್ಷೇಪಣೆಗೆ ವಿಪ್ರದಾಸ ಉತ್ತರ ಕೊಡದೆ, ಚಿಕ್ಕಮ್ಮನ ಪರಿಚಯವನ್ನು ಬಹಳ ಸಂಕ್ಷೇಪವಾಗಿ ಮಾಡಿಕೊಟ್ಟು "ನನ್ನ ಕಾಹಿಲೆ ನೋಡಿ ಅನ್ನದ ಹೆದರಿ ಚಿಕ್ಕಮ್ಮನಮನೆಯಲ್ಲಿದ್ದ ವಂದನಳನ್ನು

ಕರೆದುಕೊಂಡು ಬಂದಳು. –ನನ್ನ ಔಷದೋಪಚಾರಕ್ಕೆ ಅಂತ. ಅವಳು ಬಹಳ ಚೆನ್ನಾಗಿ ನೋಡಿಕೊಂಡಳು. ನೀವೆಲ್ಲ ಅವಳಿಗೆ ಕೃತಜ್ಞರಾಗಿರ ಬೇಕು.'' ಎಂದು ಹೇಳಿದನು.

ದ್ವಿಜದಾಸ—' ಕೃತಜ್ಞರಾಗಿರಬಾರದೆಂದು ನಾನು ಹೇಳಲಿಲ್ಲ. ಆದರೆ ನಿಮ್ಮ ಸೇವೆ ಮಾಡುವ ಸೌಭಾಗ್ಯ ದೊರೆಯಿತಲ್ಲ. ಅದೇನು ಕಡಿಮೆಯೆ? ಇದರ ಬೆಲೆ ಎಷ್ಟೆಂದು ಅವಳು ಅರಿತಿದ್ದರೆ ನಾವಲ್ಲ ಅವಳೇ ನಮ್ಮ ವಿಷಯದಲ್ಲಿ ಕೃತಜ್ಞಳಾಗಿರಬೇಕು."

ವಿಪ್ರದಾಸನು ನಗುತ್ತ ' ನೀನು ಕೃತಘ್ನ ' ಎಂದು ಹೇಳಿದ.

ದ್ವಿಜದಾಸ:—" ನಾನು ಕೃತಘ್ನನಿರಬಹುದು. ಆದರೆ ಅವಿವೇಕಿಯಲ್ಲ. ನನ್ನ ಮಾತು ಬೇಡ; ಔಷಧೋಪಚಾರಮಾಡುವುದು ನಮ್ಮ ಅಮ್ಮನ ಹಕ್ಕು, ಅನಾಯಾಸವಾಗಿ ಪಂದನ ನಮ್ಮ ಅಮ್ಮನ ಸ್ಥಾನ ದೊರಕಿಸಿಕೊಂಡಳಲ್ಲಾ ! ಇದೇನು ಎಲ್ಲರಿಗೂ ಸುಲಭ ಸಾಧ್ಯವೇ ? ಅದಕ್ಕೇ ನಾನು ಹೇಳಿದ್ದು ಅವಳು ಅಮ್ಮನಿಗೆ ಕೃತಜ್ಞಳಾಗಿರಬೇಕು ಎಂದು. ಈ ನುಡಿ ಕೇಳಿ ವಿಪ್ರದಾಸ ನಕ್ಕು ಬಿಟ್ಟ. " ಇಷ್ಟು ದಿನಗಳ ಮೇಲಾದರೂ ನಮ್ಮ ಅಮ್ಮನ್ನ ಅರಿತೆಯಲ್ಲ ಸಂತೋಷ " ಎಂದನು.

" ಅರಿತಿರುವೆನೆಂದು ನಿಮಗೆ ಗೊತ್ತಾದರೂ ಇದನ್ನು ನೀವು ಯಾರಿಗೂ ಹೇಳಬೇಡಿ.—ನಾನು ನಮ್ಮ ಅಮ್ಮನಿಗೆ ಸರಿಯಾದ ಮಗನಲ್ಲ —ಅವರು ಹಾಗೆ ತಿಳಿದಿರುವುದೇ ಸಾಕು. ಆ ಭಾವನೆಯನ್ನು ತೊಡೆದು ಹಾಕಲು ನೀವು ಯತ್ನಿಸಬೇಡಿ ಅಣ್ಣ'' ಎಂದು ದ್ವಿಜದಾಸನು ಹೇಳಿದ.

" ಏಕೆ? ಅಮ್ಮ ನಿನ್ನ ಮೇಲಿನ ದುರ್ಭಾವನೆಯನ್ನು ತೊರೆದು ನಿನ್ನಲ್ಲಿ ವಿಶ್ವಾಸವನ್ನಿಡುವುದು ನಿನಗೆ ಬೇಡವೆ? ಈ ದುರಭಿಮಾನದಿಂದ ನಿನಗೆ ಬರುವ ಲಾಭವಾದರೂ ಏನು ?"

" ಲಾಭ ಏನೆಂದು ಗೊತ್ತಿಲ್ಲ. ಆದರೆ ಇದರಲ್ಲಿ ವಿಶೇಷ ಲೋಭವೇನೂ ಇಲ್ಲ. ನಿಮ್ಮ ಪ್ರೇಮ ಅತ್ತಿಗೆಯ ಪ್ರೀತಿ—ಇದು ನನಗೆ ಅಷ್ಟೈಶ್ವರ್ಯ. ಏಳೇಳು ಜನ್ಮವನ್ನೆತ್ತಿ ತೀರಿಸಿದರೂ ತೀರದಷ್ಟು ದೊಡ್ಡ ಸಂಪತ್ತು.'' ಹೀಗೆ ಹೇಳುತ್ತಿರುವಾಗ ಅವನ ಮುಖ ನಾಚಿಕೆಯಿಂದ ಕೆಂಪೇರಿತು—ಯಾವಾಗಲೂ ನಿಸ್ಪೃಹನಂತೆ ವರ್ತಿಸುವುದು ಅವನ

ಸ್ವಭಾವವಾಗಿದ್ದಿತು. ಮರುಕ್ಷಣದಲ್ಲಿ ಚೇತರಿಸಿಕೊಂಡು ಪುನಃ ಹೇಳ ತೊಡಗಿದ—" ಈ ಮಾತಿನಿಂದ ಪ್ರಯೋಜನವೇನೂ ಇಲ್ಲ. ನಿಜ ಹೇಳಬೇಕೂ ಅಂದರೆ ವಂದನ ಸಿಟ್ಟಿನಿಂದ ಹೊರಟು ಹೋಗಿದ್ದಾಳೆ. ಅದಕ್ಕೆ ಕಾರಣ ಏನು ಹೇಳಿ.''

" ಕಾರಣ ಇಷ್ಟೇ. ನೀನು ಬಂದಮೇಲೆ ಇಲ್ಲಿ ಅವಳಿಗೇನೂ ವಿಶೇಷ ಕಾರ್ಯವಿಲ್ಲ. ಈಗ ನನ್ನ ಶುಶ್ರೂಷೆಯ ಭಾರ ನಿನ್ನ ಮೇಲಿದೆ.—" ಎಂದು ಹೇಳಿ ವಿಪ್ರದಾಸ ನಗಲಾರಂಭಿಸಿದ.

' ನನ್ನನ್ನು ಹಾಸ್ಯಮಾಡುತ್ತೀರೊ ಹೇಗೆ? ಬೇಡ, ಈ ಇಂಗ್ಲೀಷ್ ಶಿಕ್ಷಣವನ್ನು ಪಡೆದ ಹುಡುಗಿಯರು ಇದೇ ಜಂಬದಲ್ಲಿ ಒಂದಲ್ಲ, ಒಂದು ದಿನ ಸಾಯುತ್ತಾರೆ. ನಿಮ್ಮ ಸೇವೆ ಮಾಡುವಂತಹ ಕಾಲ ಬರುವುದು ಬೇಡ. ಆದರೆ ಅವಕಾಶ ದೊರೆತರೆ ಅಣ್ಣನ ಸೇವೆ ಮಾಡುವುದರಲ್ಲಿ ದ್ವಿಜ ದಾಸನನ್ನು ಮೀರಿಸಲು ಹತ್ತಾರು ವಂದನರಿಂದಲೂ ಸಾಧ್ಯವಿಲ್ಲವೆಂದು ತಿಳಿದೀತು. ಇದನ್ನು ಬೇಕಾದರೆ ಅವಳಿಗೆ ತಿಳಿಸಿ.'

ದ್ವಿಜನ ಸ್ನೇಹಮಿಶ್ರಿತಹಾಸ್ಯದಿಂದ ವಿಪ್ರದಾಸನ ಮುಖ ಕೆಂಪೇರಿತು.

ಅವನು ಹೇಳಿದ—" ಸರಿ ಹೇಳುತ್ತೇನೆ. ಆದರೆ ಅವಳು ಇದನ್ನು ಒಪ್ಪುತ್ತಾಳೊ ಇಲ್ಲವೊ ನಾನರಿಯೆ. ಇದನ್ನು ಪರೀಕ್ಷೆಮಾಡಿ ನೋಡ ಬೇಕಾದ ಅವಶ್ಯಕತೆ ನನಗಿಲ್ಲ. ಅದೇ ನಮ್ಮ ಅಮ್ಮನಿಗೆ ಹಾಗಲ್ಲ ನೀವಿಬ್ಬರೂ ಒಪ್ಪಂದ ಮಾಡಿಕೊಳ್ಳಿ ಗೊತ್ತಾಯಿತೆ?''

" ಇಲ್ಲ ನನಗೆ ಗೊತ್ತಾಗಲಿಲ್ಲ. ಬದುಕಿದ್ದರೆ ಒಂದಲ್ಲ ಒಂದು ದಿನ ಒಪ್ಪಂದ ಆಗೇ ಆಗುತ್ತದೆ. ಅದಕ್ಕೇನು ಅವಸರಾಂತ ತಿಳಿಯಲಿ ''— ಇಷ್ಟು ಹೇಳಿ ಸ್ವಲ್ಪ ಹೊತ್ತು ಸುಮ್ಮನಿದ್ದು, ಪುನಃ ಪ್ರಾರಂಭಿಸಿದ—" ನನ್ನ ಅದೃಷ್ಟದಲ್ಲಿ ಎಲ್ಲವೂ ವಿಪರೀತವೇ. ತಂದೆ ಈ ಜನ್ಮವನ್ನು ಕೊಟ್ಟರೇ ಹೊರತು, ಆಸ್ತಿಯಲ್ಲಿ ಒಂದು ಕುರುಡು ಕಾಸನ್ನೂ ಕೊಡಲಿಲ್ಲ.—ಅದನ್ನು ಕೊಟ್ಟವರು ನೀವು. ಅಮ್ಮ ಗರ್ಭದಲ್ಲಿ ಧರಿಸಿದರು ಮಾತ್ರ ; ಆದರೆ ಸಾಕಿ ಸಲಹಿದವಳು ಅನ್ನದ; ನನ್ನನ್ನು ಮನುಷ್ಯನನ್ನಾಗಿಸಿದವರು ಅತ್ತಿಗೆ. ಅವರಿಬ್ಬರೂ ನಮ್ಮ ಮನೆಗೆ ಹೊಸಬರೇ ! " ಪಿತಾಸ್ವರ್ಗ : ಪಿತಾಧರ್ಮ: ಸ್ವರ್ಗಾದಪಿ ಗರೀಯಸೀ'—ಎಂಬುದನ್ನು ಪಠಿಸಿ ಎಷ್ಟು ಕಾಲ ಮನಸ್ಸಿಗೆ

ಸಮಾಧಾನ ತಂದುಕೊಳ್ಳಬೇಕು ತಾವೇಹೇಳಿ."

" ಅಮ್ಮನ ಪಕ್ಷವಹಿಸಿ ಈಗ ಮಾತನಾಡುವುದಿಲ್ಲ. ಅದು ಇಂದಲ್ಲ ನಾಳೆ ತಾನೇ ತಿಳಿದು ಬರುತ್ತದೆ. ಆದರೆ ತಂದೆಯವಿಚಾರವಾಗಿ ನೀನು ತಪ್ಪು ತಿಳಿದುಕೊಂಡಿದ್ದೀಯೆ. ಅರ್ಧ ಆಸ್ತಿಗೆ ನಿಜವಾದ ಮಾಲಿಕ ನೀನು " ವಿಪ್ರದಾಸ ಉತ್ತರ ಕೊಟ್ಟ.

" ಇರಬಹುದು. ಆದರೆ ತಂದೆ ಸತ್ತಾಗ ಬಾಗಿಲು ಹಾಕಿಕೊಂಡು ಅವರ ವುಯಿಲನ್ನು ತಾವು ಸುಟ್ಟುಹಾಕಲಿಲ್ಲವೆ ?"

" ನಿನಗೆ ಯಾರು ಹೇಳಿದರು ?"

" ಇದುವರೆಗೆ ಎಲ್ಲಾ ವಿಧದಲ್ಲಿಯೂ ನನ್ನನ್ನು ರಕ್ಷಿಸುತ್ತಿರುವ ವ್ಯಕ್ತಿಯೆ ಇದನ್ನು ಹೇಳಿದ್ದು."

" ಇರಬಹುದು. ಆದರೆ ನಿನ್ನ ಅತ್ತಿಗೆ ಆ ವುಯಿಲನ್ನೇನೂ ಓದಿಲ್ಲ. ತಂದೆ ನಿನಗೆ ಪೂರ ಆಸ್ತಿಯನ್ನೂ ಕೊಟ್ಟು ಹೋಗಿರಬಹುದು. ಅದಕ್ಕೆ ಸಿಟ್ಟುಗೊಂಡು ನಾನು ಅದನ್ನು ಸುಟ್ಟಿದ್ದರೂ ಸುಟ್ಟಿರ ಬಾರದೇಕೆ ? ಇದೇನು ಅಸಂಭವವಲ್ಲವಲ್ಲ ?'

ದ್ವಿಜದಾಸ ನಕ್ಕು ಅನಂತರ ಹೇಳಿದ—" ಅಣ್ಣಾ, ದ್ವಾಪರದಲ್ಲಿ ಯುಧಿಷ್ಠಿರ ಒಂದೇ ಒಂದು ಸುಳ್ಳು ಹೇಳಿದನಂತೆ. ಅದನ್ನು ವೇದ ವ್ಯಾಸರು ಬರೆದಿಟ್ಟಿದ್ದಾರೆ. ಈ ಕಲಿಯುಗದಲ್ಲಿ ತಮ್ಮ ಸುಳ್ಳನ್ನು ಈ ದ್ವಿಜ ದಾಸ ಬರೆದಿಡುತ್ತಾನೆ. ಇವೆರಡರಲ್ಲಿ ಕೊಂಚವೂ ವ್ಯತ್ಯಾಸವಿಲ್ಲ. ಆ ಮಾತೇಕೆ ? ಒಟ್ಟನಲ್ಲಿ ಅದೃಷ್ಟ ನೆಟ್ಟಗಿಲ್ಲದಿರುವಾಗ ಆಗ ಬಾರದ್ದೆಲ್ಲ ಆಗು ತ್ತದೆ. ಈ ಪ್ರಸಂಗವನ್ನು ಹೆಚ್ಚಿಗೆ ಬೆಳೆಯಿಸಿ ನಿಮ್ಮನ್ನೇಕೆ ಸುಳ್ಳು ನುಡಿ ಯುವ ಪಾಪಕ್ಕೆ ಗುರಿಮಾಡಲಿ. ಈಗ ನಾನೇನು ಮಾಡಬೇಕು. ಅಪ್ಪಣೆ ಕೊಡಿಸಿ."

"ನಮ್ಮ ಜಮಾನು, ಮನೆ, ಲೇವಾದೇವಿ ಎಲ್ಲ ಕಾರ್ಯವನ್ನೂ ನೀನೆ ನೋಡಿಕೊಳ್ಳಬೇಕು."

" ಇಷ್ಟೊಂದು ಜವಾಬ್ದಾರಿಯನ್ನು ನನ್ನ ಮೇಲೆ ಹೊರಿಸಲು ಕಾರಣ ವೇನು ? ನೀವೊಬ್ಬರೇ ಇದನ್ನು ನಿರ್ವಹಿಸಲಾರಿರೊ ?—ಅದು ಅಸಂಭವ. ನಾನು ಕೆಲಸಕ್ಕೆ ಬಾರದವನೂ ಅಪ್ರಯೋಜಕನೂ ಆಗುತ್ತಿರುವೆನೆಂದೇ ?

ಇಲ್ಲ ಹಾಗೆಂದಿಗೂ ಇಲ್ಲ., ಆದರೂ ಅಮ್ಮ ಕೇಳಿಗೀಳಿದರೆ ಅವರಿಗೆ ತಿಳಿಸಿ, ನಾನು ಯೋಗ್ಯನಾಗಿ ಮಾಡುವುದಾದರೂ ಏನು ? ಅಪ್ರಯೋಜಕನಾಗಿದ್ದೇ ನಾನು ದಿನವನ್ನು ತಳ್ಳುತ್ತೇನೆ; ನನ್ನ ವಿಚಾರವಾಗಿ ಯೋಚಿಸುವುದು ಬೇಡ ಅಂತ. ತಾವಿರಬೇಕಾದರೆ ನಾನು ಹಣಕಾಸಿನ ಜವಾಬ್ದಾರಿಯನ್ನು ಖಂಡಿತ ಹೊತ್ತುಕೊಳ್ಳುವುದಿಲ್ಲ. ನಾನೂ ತಮ್ಮಂತೆ ಅತುಲೈಶ್ವರ್ಯ ಸಂಪನ್ನನಾಗಿ ನೂರು ಜಮೀನ್ದಾರರ ಪೈಕಿ ಒಬ್ಬನಾಗಿ ಬಾಳಲೆ ? ನನ್ನ ನಾಡಿಗಳಲ್ಲಿ ರಕ್ತವಲ್ಲ, ರೂಪಾಯಿನ ಪ್ರವಾಹ ಹರಿಯುತ್ತಿರುವುದೆಂದು ಜನಗಳು ಆಡಿಕೊಳ್ಳುವಂತೆ ಮಾಡಲೇ?—ಹೀಗೆ ದ್ವಿಜದಾಸ ಹೇಳುತ್ತಿದ್ದ. ವಿಪ್ರದಾಸನು ಮಾತ್ರ ಆ ಕಡೆ ಲಕ್ಷ್ಯವಿಲ್ಲದೆ ಅನ್ಯಮನಸ್ಕನಾಗಿ ಏನನ್ನೋ ಯೋಚಿಸುತ್ತಿದ್ದ. ಇದು ಅವನ ಪ್ರಕೃತಿಗೆ ವಿರುದ್ಧವಾದುದು. ಆದುದರಿಂದ ದ್ವಿಜದಾಸನಿಗೆ ಬಹಳ ಆಶ್ಚರ್ಯವಾಗಿ ಕೇಳಿದ.—' ಅಣ್ಣಾ ಖಂಡಿತ ವಾಗಿಯೂ ಆ ಜವಾಬ್ದಾರಿಯನ್ನು ನನ್ನ ಮೇಲೆ ಹೊರಿಸಲು ನಿಶ್ಚಯಿಸು ವಿರಾ ? ನನ್ನ ದೇಶ ಸೇವೆಗೆ ತಿಲಾಂಜಲಿಯನ್ನು ಕೊಡಬೇಕೆ ?" ಎಂದು.

ವಿಪ್ರದಾಸನು ಅವನ ಮುಖವನ್ನೇ ದೃಷ್ಟಿಸಿ ನೋಡುತ್ತ "ನಿನ್ನ ಆದರ್ಶವನ್ನು ಬಿಟ್ಟುಬಿಡೆಂದು ನಾನು ಹೇಳಲಿಲ್ಲ. ಆದರೆ ನೀನು ಆದರ ಜೊತೆಗೆ ಜಮೀನು ಮನೆ ಇವುಗಳನ್ನು ಸರಿಯಾಗಿ ನೋಡಿಕೋ ಎಂದು ಹೇಳಿದೆ" ಎಂದ.

"ಅದಕ್ಕೆ ಸರಿಯಾದ ಕಾರಣವೇನೆಂಬುದು ತಿಳಿಯುವವರೆಗೂ ನಾನು ಆ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ.'

ವಿಪ್ರದಾಸ ಕ್ಷಣಕಾಲ ಮೌನದಿಂದಿದ್ದು ಹೇಳಿದ:—" ಕಾರಣ ಕಾಣುತ್ತಿದೆ. ಯಾರದ್ದೇನು ಸ್ಥಿರ ? ಇಂದು ನಾನಿದ್ದೇನೆ. ನಾಳೆ ನಾನು ಇಲ್ಲದೆ ಇರಬಹುದು" ಎಂದು ಹೇಳುತ್ತಿರುವಾಗ ದ್ವಿಜದಾಸನು ಆ ಮಾತು ಗಳನ್ನು ತುಂಡರಿಸುತ್ತಾ, "ಇಲ್ಲ. ಇಲ್ಲ. ತಾವು ಇರುವುದಿಲ್ಲವೆಂದು ಹೇಳಕೂಡದು. ಹಾಗೆ ನಾನು ಎಂದಿಗೂ ಯೋಚಿಸಲಾರೆ' ಎಂದು ಹೇಳಿದನು.

ಅವನ ದೃಢವಿಶ್ವಾಸವನ್ನು ಕಂಡು ವಿಪ್ರದಾಸನಿಗೆ ತಾನು ಆಡಿದುದು ಸರಿಯಲ್ಲವೆಂದು ತೋರಿತು. ಆದರೂ ನಕ್ಕು ಅದನ್ನು ಸಮರ್ಥಿಸುತ್ತ

ಹೇಳಿದ—"ಪ್ರಪಂಚದಲ್ಲಿ ಯಾವುದೂ ಅಸಾಧ್ಯವಲ್ಲ. ನಶ್ವರವಾದ ಪ್ರಪಂಚದಲ್ಲಿ ಯಾವುದು ತಾನೆ ಶಾಶ್ವತ ಇದನ್ನು ಯೋಚಿಸಲು ಹೆದರುವವರು ಹೇಡಿಗಳು; ತಮ್ಮನ್ನೇ ತಾವು ವಂಚಿಸಿಕೊಳ್ಳುವವರು. ಅದಿರಲಿ, ನನಗೆ ತುಂಬಾ ಬೇಸರವಾಗಿದೆಯೆಂತ ಇಟ್ಟುಕೋ ; ಆಗಲೂ ನೀನು ನನಗೆ ರಜ ಕೊಡುವುದಿಲ್ಲವೆ ?''

"ಇಲ್ಲ ಅಣ್ಣಾ, ರಜ ಕೊಡಲು ಸಾಧ್ಯವಿಲ್ಲ, ತಮ್ಮ ಆಜ್ಞೆಯಂತೆ ವರ್ತಿಸುವುದು ಮಾತ್ರ ನನಗೆ ಸಾಧ್ಯ. ನಾನು ಯಾವಾಗ ಏನುಮಾಡಬೇಕೆಂಬುದು ಹೇಳಿ ಮಾಡುತ್ತೇನೆ."

"ಇಂದಿನಿಂದ ಈ ಮನೆ ಮಠ, ಜಮೀನು ಮುಂತಾದುವುಗಳ ಯಜಮಾನಿಕೆಯನ್ನು ವಹಿಸಿಕೊಳ್ಳಬೇಕು."

"ಇಂದಿನಿಂದ ? ಇಷ್ಟು ಅವಸರವೇಕೆ ? ಆಗಲಿ. ತಮ್ಮ ಮಾತಿಗೆ ನಾನು ಎದುರಾಡುವುದಿಲ್ಲ." ಇಷ್ಟು ಹೇಳಿ ಹೊರಟುಹೋದ. ಹೋಗುವಾಗ 'ನೀನೇನೂ ಬಾಯಿಬಿಟ್ಟು ಹೇಳಬೇಕಾಗಿಲ್ಲ. ನನ್ನ ಮಾತನ್ನು ನೀನು ಮೀರುವುದಿಲ್ಲವೆಂದು ಗೊತ್ತು" ಎಂದು ಹೇಳಿದ. ವಿಪ್ರದಾಸನ ಮಾತುಗಳು ಅವನ ಕಿವಿಯ ಮೇಲೆ ಬಿದ್ದವು.

* * * * *

ದ್ವಿಜದಾಸ ಕೆಲವನ್ನು ಪ್ರಾರಂಭಿಸಿದ. ಸೋಮಾರಿ ಕೆಲಸಕ್ಕೆ ಬಾರದವ, ಎಂದು ಎಲ್ಲರೂ ದೂಷಿಸುತ್ತಿದ್ದರಷ್ಟೆ. ಅಣ್ಣನ ಮಾತಿನಂತೆ ತನ್ನ ತಾಯಿಯ ವ್ರತಕ್ಕೆ ಸಿದ್ಧತೆಗಳನ್ನೂ ಮಾಡುವ ಭಾರವನ್ನು ವಹಿಸಿಕೊಂಡ ಮೇಲೆ ಆ ಮಿಥ್ಯಾ ಕಲಂಕವು ನಿರ್ಮೂಲವಾದ.ದೆಂದು ಸಾಧಿಸಲು ದ್ವಿಜದಾಸನಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಅಭ್ಯಾಸವಿಲ್ಲದಿದ್ದರೂ ಇಂಥ ದೊಡ್ಡ ಕಾರ್ಯವನ್ನು ಇಷ್ಟು ಸುಲಭವಾಗಿ ಮಾಡಬಲ್ಲನೆಂದು ಸ್ವತಃ ವಿಪ್ರದಾಸನು ನಂಬಿರಲಿಲ್ಲ. ಅವನ ಅಚ್ಚುಕಟ್ಟಾದ ಚುರುಕು ಕೆಲಸವನ್ನು ಕಂಡು ವಿಪ್ರದಾಸನೂ ಆಶ್ಚರ್ಯಚಕಿತನಾದನು. ಕೊಂಡು ಕಳಿಸಬೇಕಾದ ಪದಾರ್ಥಗಳನ್ನು ದ್ವಿಜದಾಸನು ಗಾಡಿಯಲ್ಲಿ ತುಂಬಿ ಊರಿಗೆ ಕಳುಹಿಸಿದ್ದನು. ಜೊತೆಯಲ್ಲಿ ತೆಗೆದುಕೊಂಡು ಹೋಗಬೇಕಾದುದನ್ನು ಅಣಿಮಾಡಿಕೊಂಡಿದ್ದನು. ಇಂದು ಊರಿಗೆ ಹೊರಡಬೇಕು. ಬಂಧುಬಾಂಧ

ವರನ್ನೆಲ್ಲಾ ಕಳೆಹಾಕಿ ಸನ್ಮಾನಪೂರ್ವಕವಾಗಿ ಅವರನ್ನು ಊರಿಗೆ ಕಳು ಹಿಸಿದ್ದಾಗಿತ್ತು. ಒಟ್ಟಿನಲ್ಲಿ ಅಲ್ಲಿ ಅವನು ಮಾಡಬೇಕಾದ ಕೆಲಸವನ್ನು ಮಾಡಿ ಮುಗಿಸಿದ್ದ. ಇನ್ನು ಅಣ್ಣನ ಅಪ್ಪಣೆಯನ್ನು ಪಡೆಯುವುದೊಂದೇ ಬಾಕಿ ಇದ್ದಿತು. ಅದಕ್ಕಾಗಿ ಅವನ ಕೋಣೆಗೆ ಹೋದಾಗ ಅಲ್ಲಿ ವಂದನ ಳನ್ನು ಕಂಡು ಬೆರಗಾಗಿ ನಿಂತ. ಆದಿನ ಹೊರಟು ಹೋದವಳು ಇಂದಿನ ವರೆಗೆ ಬಂದೇ ಇರಲಿಲ್ಲ. ಕಾರ್ಯಭಾರದಲ್ಲಿ ದ್ವಿಜದಾಸನೂ ಅವಳನ್ನು ಮರೆತುಬಿಟ್ಟಿದ್ದ. ಇಂದು ಅವಳನ್ನು ಕಂಡಕೂಡಲೆಂ ಅವನಿಗೆ ಆಶ್ಚರ್ಯ ವಾಯಿತು. ಆದರೂ ಆ ಭಾವವನ್ನು ಮರೆಮಾಚಿ, ಸಹಜ ರೀತಿಯಿಂದ ನಮಸ್ಕರಿಸಿ ಅನಂತರ ಅಣ್ಣನನ್ನು ಕುರಿತು ಹೇಳಿದನು—"ಅಣ್ಣಾ, ಈ ದಿನ ರಾತ್ರಿ ರೈಲಿನಲ್ಲಿ ನಾನು ಊರಿಗೆ ಹೊರಡುತ್ತೇನೆ. ಅಕ್ಷಯ ಬಾಬು, ಅವನ ಹೆಂಡತಿ, ಅವರ ಮಗಳು–ಮೈತ್ರೇಯೀ ನನ್ನ ಜೊತೆಯಲ್ಲಿ ಹೊರಡುತ್ತಾರೆ. ಕಾಲೇಜಿನ ವಿದ್ಯಾರ್ಥಿಗಳಲ್ಲಿ ಯಾರು ಬರಬೇಕೆಂದಿರುವರೋ ಅವರಿಗೆ ಛಾರ್ಜು ಕೊಟ್ಟಿದ್ದೇನೆ. ತಾವು ಬರುವಾಗ ಅನ್ನದಳನ್ನೂ ಕರೆದುಕೊಂಡು ಬರುವಿರಾ ? ಆದರೆ ಮೂರು ನಾಲ್ಕು ದಿನದಲ್ಲಿ ಬಂದು ಬಿಡಿ. ಹೆಚ್ಚು ದಿನ ಮಾಡಬೇಡಿ.

" ನಾನು ಬರಲೇಬೇಕೇನು ? "

"ನೀವು ಬರಲೇಬಾರದೆಂದು ನಿಶ್ಚಯಿಸಿದ್ದರೆ ಒಂದು ಜೊತೆ ಪಾದುಕೆ ಯನ್ನಾದರೂ ಕೊಂಡುಕೊಡಿ. ಭರತ ಮಾಡಿದಂತೆ ಅದನ್ನು ತೆಗೆದು ಕೊಂಡು ಹೋಗಿ ಸಿಂಹಾಸನದಮೇಲೆ ಇಡುತ್ತೇನೆ"

ವಿಪ್ರದಾಸನು ನಗುತ್ತ ಹೇಳಿದ—" ಲೋ, ನೀನು ಮಾತನಾಡು ವುದರಲ್ಲಿ ಬಲು ಗಟ್ಟಿಗ. ಇರಲಿ. ಅಕ್ಷಯಬಾಬು ಬರುವರೆಂತ ಕೇಳಿ ಆಶ್ಚರ್ಯವಾಗುತ್ತದೆ ಅವರಿಗೆ ರಜಾ ಸಿಕ್ಕಿಲ್ಲ ಅವರು ಹೇಗೆ ಹೊರಡು ತ್ತಾರೆ. ಕಾಲೇಜಿಗೆ ಚಕ್ಕರ್ ಹೊಡೆಯುತ್ತಾರೇನು ?"

" ಹಾಗೇ ಕಾಣುತ್ತದೆ. ಹೇಗೊ ದೊಡ್ಡವರಮನೆಗೆ ಹುಡುಗಿ ಹೋಗಿ ಸೇರುತ್ತಾಳೆ. ಐಶ್ವರ್ಯವಂತ ಅಳಿಯ ಒಂದು ದೊಡ್ಡ ಆಶ್ರಯವಿದ್ದಂತೆ ಅಲ್ಲವೆ ? ಕಾಲೇಜಿನಲ್ಲಿ ಬರೊ ನಾಲ್ಕು ಕಾಸು ಏನು ಮಹಾ ದೊಡ್ಡದು.''

"ಎಷ್ಟು ಒರಟನೊ ನೀನು. ನಿನ್ನ ಮಾತು ಎಷ್ಟು ಒರಟೊ ಅಷ್ಟೇ ಕರ್ಕಶವಾಗಿದೆ. ಇನ್ನೊಬ್ಬರಿಗೆ ಮರ್ಯಾದೆ ಕೊಟ್ಟು ಮಾತನಾಡುವುದು ನಿನಗೆ ಗೊತ್ತೇ ಇಲ್ಲ ಅಂತ ಕಾಣಿಸುತ್ತೆ" ವಿಪ್ರದಾಸ ಸಿಟ್ಟಿನಿಂದ ಹೇಳಿದ.

"ಗೊತ್ತಿದೆ. ಬೇಕಾದರೆ ಅತ್ತಿಗೆಯನ್ನು ಕೇಳಿನೋಡಿ. ನನ್ನಲ್ಲಿರುವ ಸೌಜನ್ಯವನ್ನು ದುರುಪಯೋಗಪಡಿಸುವುದಿಲ್ಲ. ಅದೇ ನನ್ನಲ್ಲಿರುವ ದೊಡ್ಡ ತಪ್ಪು."—ದ್ವಿಜದಾಸನ ಈ ಮಾತ ಕೇಳಿ ವಿಪ್ರದಾಸನಿಗೂ ನಗು ಬಂದಿತು. "ಸರಿ ಮಾತೆತ್ತಿದರೆ ನಿನಗೆ ಗೊತ್ತಿರುವುದು ಒಂದೇ ಸಾಕ್ಷಿ—ಆ ನಿನ್ನ ಅತ್ತಿಗೆ. ಕುಡಕನಿಗೊಬ್ಬ ಕಲವಾರ* ಸಾಕ್ಷಿ ಅಂದ ಹಾಗಾಯಿತು" ಎಂದ.

ದ್ವಿಜದಾಸ:—ನೋಡಿ, ಮಾತು ಮಧುಮಿಶ್ರಿತವಾದುದೂ ಅಲ್ಲ. ನಾನು ಕುಡುಕನೂ ಅಲ್ಲ; ನನ್ನ ಅತ್ತಿಗೆ ಹೆಂಡಮಾರುವವಳೂ ಅಲ್ಲ; ಅವಳು ನೀಡುವವಳು. ಬಡವರಿಗೆ ಅನ್ನದಾತಳು. ಯಾವ ದೊಡ್ಡ ಮನುಷ್ಯನೂ ಇದಕ್ಕೂ ಪುಣ್ಯದ ಕೆಲಸ ಮಾಡಲಾರ.

ವಿಪ್ರದಾಸ:—ಮುದ್ದುಮಾಡಿ ಮೈದುನನನ್ನು ಶುದ್ಧ ಪಶುವನ್ನಾಗಿ ಮಾಡುವುದಕ್ಕಿಂತಲೂ ಹೆಚ್ಚು ಉಪಯೋಗಕರವಾದ ಕೆಲಸ ಬೇರೆಯವರಿಗಿದೆ.

ವಂದನ ಮುಖವನ್ನು ತಗ್ಗಿಸಿಕೊಂಡೇ ನಗಲಾರಂಭಿಸಿದಳು; ದ್ವಿಜದಾಸನಿಗೆ ಅದು ಗೊತ್ತಾಯಿತು. ಹೇಳಿದ— "ಅಣ್ಣಾ. ಈ ವಿಚಾರವಾಗಿ ಹೆಚ್ಚು ಚರ್ಚಿಸುವುದಿಲ್ಲ. ನಿಮಗೆ ಅತ್ತಿಗೆ ಇಲ್ಲ.— ಭಾರತೀಯ ಪರಿವಾರದಲ್ಲಿ ಅವಳ ಸ್ನೇಹ ಎಷ್ಟು ಮುಖ್ಯವಾದುದೆಂಬುದನ್ನು ನೀವು ಎಂದಿಗೂ ತಿಳಿದುಕೊಳ್ಳಲಾರಿರಿ. ಕುರುಡನೆದುರಿಗೆ ದೀಪ ಹಿಡಿದುದರಿಂದ ಅವನಿಗಾದುದೇನು?"—ಸ್ವಲ್ಪ ನಕ್ಕು ಪುನಃ ಮುಂದುವರಿಸಿದ— "ವಂದನ ತಲೆಬಾಗಿ ನಗುತ್ತಿದ್ದಾಳೆ. ನಗಲಿ. ಅವಳು ಅವಳ ಚಿಕ್ಕಮ್ಮನ ಮನೆಯಲ್ಲಿಲ್ಲದೆ ಕೆಲವುದಿನ ನಮ್ಮ ಮನೆಯಲ್ಲಿದ್ದು ಬೆಳೆದಿದ್ದರೆ ನನ್ನ ಮಾತು ಅರ್ಥವಾಗುತ್ತಿತ್ತು. ಬಿಡಿ, ಆ ಮಾತುಗಳಿಂದ ಏನಾಗಬೇಕಾಗಿದೆ. ತಾವು ಎಂದು ಊರಿಗೆ ಬರುತ್ತೀರಿ ಹೇಳಿ."

---

ಹೆಂಡಮಾರುವವನು.

“ ನನಗೆ ಬಹಳ ಆಯಾಸವಾಗಿದೆ. ಅಮ್ಮನಿಗೆ ಏನಾದರೂ ಸಬೂಬು ಹೇಳಲು ಸಾಧ್ಯವಿಲ್ಲವೆ ? ”

ಇಷ್ಟು ಮೆತ್ತನೆಯ ಮಾತನ್ನು ವಿಪ್ರದಾಸನ ಬಾಯಲ್ಲಿ ಕೇಳಿಯೇ ಇರಲಿಲ್ಲ. ಆದುದರಿಂದ ದ್ವಿಜದಾಸ ಒಮ್ಮೆ ಬೆಚ್ಚಿ ಅವನ ಮುಖವನ್ನು ನೋಡಿದ. ಮುಖದಮೇಲೆ ಕಿರುನಗೆ ಕಾಣುತ್ತದೆ. ಆದರೆ ಅದು ಸಹಜ ವಾದ ನಗುವಲ್ಲ. ಆಶ್ಚರ್ಯ ಮಿಶ್ರಿತ ಭಯದಿಂದ ಅಭಿಭೂತನಾಗಿ “ ಅಣ್ಣ---ತಮಗೆ ಮೈಯಲ್ಲಿ ಚೆನ್ನಾಗಿಲ್ಲವೆ ? ” ಎಂದು ಕೇಳಿದ.

“ ಏಕೆ ಚೆನ್ನಾಗಿದೆ.”

“ ಹಾಗಾದರೆ ನಾನು ಏನು ಸಬೂಬು ಹೇಳಲಿ ? ಹೆದರಿ ಅವರು ಇಲ್ಲಿಗೆ ಹೊರಟುಬಂದರೆ ಮಾಡಿಟ್ಟ ಏರ್ಪಾಡುಗಳೆಲ್ಲ ಹಾಳಾಗುತ್ತವೆ.”

ವಿಪ್ರದಾಸ ಯೋಚಿಸಿ “ ಹಾಗಾದರೆ ಎಂದು ಬರಬೇಕು ಎನ್ನು ತ್ತೀಯೆ ” ಎಂದು ಪ್ರಶ್ನಿಸಿದ.

“ ಇವತ್ತು ಬೇಕಾದರೂ ಹೊರಡಿ. ಇಲ್ಲವೆ ನಾಳೆ ನಾಳಿದ್ದು ಎಂದು ಬೇಕಾದರೂ, ಅಪ್ಪಣೆಯಾದರೆ ನಾನೇ ಬಂದು ಕರೆದುಕೊಂಡ ಹೋಗು ತ್ತೇನೆ.”

ವಿಪ್ರದಾಸನು ಸ್ವಲ್ಪ ನಕ್ಕು “ ಆಗಲಿ ನಿನ್ನಿಚ್ಛೆಯಂತೆಯೇ ಆಗಲಿ. ನಾನೇ ಬರುತ್ತೇನೆ. ನೀನು ಬರಬೇಕಾದುದಿಲ್ಲ ” ಎಂತ ಹೇಳಿದ.

ದ್ವಿಜದಾಸನು ಹೊರಟುಹೋದಮೇಲೆ ವಂದನ ಕೇಳಿದಳು. “ ಮುಖರ್ಜಿ ಸಾಹೆಬ್, ವ ನೆಗೆ ಹೋಗಲು ಇಷ್ಟು ಉದಾಸೀನತೆಯನ್ನೇಕೆ ತೋರಿದಿರಿ ? ”

“ ಕಾರಣವನ್ನು ಈಗ ತಾನೆ ಹೇಳಿದೆನಲ್ಲ ಕೇಳಲಿಲ್ಲವೆ ?”

“ ಕೇಳಿದೆ. ಆದರೆ ಆ ಉತ್ತರ ಬೇರೆಯವರಿಗೆ ತೋರಬಹುದು ಅಷ್ಟೇ. ಮನೆಗೆ ಹೋಗಲು ಏಕೆ ಇಷ್ಟವಿಲ್ಲ ಹೇಳೀ ಮತ್ತೆ?”

“ ನನಗೆ ಬಹಳ ಆಯಾಸವಾಗಿದೆ.”

“ ಇಲ್ಲ.”

“ ಅಂದರೆ? ಎಲ್ಲರಿಗೂ ಆಯಾಸವಾಗುತ್ತದೆ ನನಗೆ ಮಾತ್ರ ಆಗುವುದಿಲ್ಲವೊ ? ”

" ನಿಮಗೂ ಆಗಬಹುದು. ಅದೇ ಕಾರಣವಾಗಿದ್ದರೆ ಎಲ್ಲರಿಗಿಂತಲೂ ಮೊದಲು ನೀನು ಅದನ್ನು ಅರಿತುಕೊಳ್ಳುತ್ತಿದ್ದೆ. ತಾವು ಯಾರ ಕಣ್ಣಿಗೆ ಬೇಕಾದರೂ ಮಣ್ಣೆರಚಬಹುದು ; ನನ್ನ ಕಣ್ಣಿಗೆ ಮಾತ್ರ ಸಾಧ್ಯವಿಲ್ಲ ; ನಿಮ್ಮ ಕಾಹಿಲೆಯನ್ನು ಸರಿಯಾಗಿ ತಿಳಿದುಕೊಳ್ಳಬೇಕಾದ ಪ್ರಮೇಯ ಬಂದರೆ ನನ್ನನ್ನು ಕರೆಸಿಕೊಳ್ಳುವಂತೆ ಅಕ್ಕನಿಗೆ ಕಾಗದ ಬರೆಯುತ್ತೇನೆ."

" ನಿನ್ನ ಅಕ್ಕನಿಗೆ ಗೊತ್ತಾದ ಕಾಹಿಲೆ ನಿನಗೆ ಗೊತ್ತಾಗುತ್ತದೆ. ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕು. ಇದನ್ನು ಕೇಳಿ ಅವಳಿಗೆ ಸಂತೋಷ ವಾಗುವುದಿಲ್ಲ." " ಸಂತೋಷವಾಗದೇ ಇರಬಹುದು. ಆದರೆ ಅವಳು ಕೃತಜ್ಞಳಾಗಿರುತ್ತಾಳೆ. ನನ್ನ ಅಕ್ಕ ಹಳೇ ಕಾಲದವಳು. ಅವಳಿಗೆ ಗಂಡ ನನ್ನು ಹುಡುಕಿ ಆರಿಸಿಕೊಳ್ಳುವ ಪ್ರಸಂಗ ಬರಲಿಲ್ಲ. ದೈವೇಚ್ಛೆಯಂತೆ ಅವಳ ಮದುವೆ ಆಯಿತು. ಗಂಡ ಗಟ್ಟಿಮುಟ್ಟಾಗಿ, ಸ್ಥಿತಿವಂತನೂ ಆಗಿದ್ದಾನೆ. ಆ ಮನುಷ್ಯನ ಪ್ರೇಮವು ಒಂದಲ್ಲ ಒಂದು ದಿನ ಶಿಥಿಲವಾಗುವುದೆಂದು ಅವಳಿಗೇನು ಗೊತ್ತು, ಅದನ್ನು ತಿಳಿದುಕೊಳ್ಳುವುದಾದರೂ ಹೇಗೆ ? "

ವಿಪ್ರದಾಸನು ಏನೊಂದು ಉತ್ತರವನ್ನೂ ಕೊಡನೆ ಸುಮ್ಮನೆ ನಕ್ಕ.

ವಂದನ—" ಏಕೆ ನಕ್ಕದ್ದು ?"

ವಿಪ್ರದಾಸ—" ನಗು ಬಂತು ನಕ್ಕೆ. ಅಲ್ಲಿ ಗಂಡನನ್ನು ಹುಡುಕುವ ಹುರುಪಿನಲ್ಲಿ ನೀನು ಇದುವರೆಗೂ ಸಂಧಿಸಿರುವ ವ್ಯಕ್ತಿಗಳಲ್ಲದೆ ಬೇರೆ ಅನೇಕರಿರುವರೆಂದು ನಿನಗೆ ಗೊತ್ತೇ ಇಲ್ಲ. ಈ ಪ್ರಪಂಚದ ಸಾಮಾನ್ಯ ನಿಯಮ ಮಾತ್ರ ನಿನಗೆ ಗೊತ್ತು. ಅದರ ವ್ಯತಿಕ್ರಮ ನಿಮಗೆ ಹೊಸತು. ಅದನ್ನು ನೀವು ಒಪ್ಪಲೂ ಸಹ ಇಷ್ಟಪಡುವುದಿಲ್ಲ. ಆದರೆ ಆ ವ್ಯತಿಕ್ರಮದ ಬಲದ ಮೇಲೆ ಧರ್ಮ ನಿಂತಿದೆ; ಪುಣ್ಯ ಅದನ್ನು ಆಶ್ರಯಿಸಿದೆ; ಕಾವ್ಯಕ್ಕೆ ಅದೇ ಮೂಲ. ಸಾಹಿತ್ಯದ ವಿಷಯವೂ ಅದೇ. ವಿಚಲಿತವಾಗದ ಶ್ರದ್ಧೆ ಮತ್ತು ವಿಶ್ವಾಸಕ್ಕೆ ಅದೇ ಅಡಿಗಲ್ಲು. ಅದಿಲ್ಲದ ವಿಶ್ವ ಬೆಂಗಾಡಿನಂತೆ. ಈ ಸತ್ಯದ ಅರಿವು ಇದುವರೆಗೆ ನಿನಗಿರಲಿಲ್ಲ ಅಲ್ಲವೆ, ವಂದನ ? "

ವ್ಯಂಗ್ಯಧ್ವನಿಯಲ್ಲಿ ವಂದನ ಉತ್ತರ ಕೊಟ್ಟಳು :—ಆ ವ್ಯತಿಕ್ರಮ

ಬಹುಶಃ ತಾನೇ ಇರಬೇಕು ಅಲ್ಲವೆ? ಆ ದಿನ ತಾವು ನನ್ನನ್ನೂ ಪ್ರೀತಿಸು ತ್ತಿರುವುದಾಗಿ ಹೇಳಲಿಲ್ಲವೆ?"

"ಅದನ್ನು ಈ ದಿನವೂ ಹೇಳುತ್ತೇನೆ; ಆದರೆ ಪ್ರೀತಿಯ ಒಂದು ದಾರಿ ನಿಮಗೆ ಕಾಣಿಸುತ್ತದೆ, ಬೇರೆ ದಾರಿಯನ್ನು ನೀವು ತಿಳಿದಿಲ್ಲ. ಆದು ದರಿಂದ ಅಂದು ನಾನು ಹೇಳಿದ ಮಾತನ್ನೂ ನೀನು ಸರಿಯಾಗಿ ತಿಳಿದು ಕೊಳ್ಳಲಾರದೇ ಹೋದೆ. ಒಂದುಸಲ ದ್ವಿಜು ಮತ್ತು ಅವನ ಅತ್ತಿಗೆ ಯನ್ನು ನೋಡಿ ಬಾ. ಕುರುಡಿಯಲ್ಲದಿದ್ದರೆ ಪ್ರೇಮ ಹೇಗೆ ಶ್ರದ್ಧೆಯೊಂ ದಿಗೆ ಬೆರತಿದೆ ಎಂಬುದನ್ನು ಕಾಣುತ್ತೀಯೆ. ನಕ್ಕು ನಲಿಯುವುದರಲ್ಲಿ, ಆಮೋದ ಆಹ್ಲಾದಗಳಲ್ಲಿ, ಪ್ರೇಮ ಪ್ರೀತಿಗಳಲ್ಲಿ ಅವರಿಬ್ಬರ ಒಟ್ಟು ಬಾಂಧವ್ಯದಲ್ಲಿ ಅವಳು ಕೇವಲ ಅತ್ತಿಗೆಯಲ್ಲ; ಅವನ ಸಖಿ ಮತ್ತು ಅವನ ತಾಯಿ ಅವಳು. ಅದೇ ಬಾಂಧವ್ಯ ನನಗೂ ನಿನಗೂ ಇದೆ. ಅದನ್ನು ಆರೀತಿ ನೀನೇಕೆ ತಿಳಿದುಕೊಳ್ಳಲಾರದೆ ಹೋದೆ ವಂದನ?"

ಅವನ ದನಿಯಲ್ಲಿ ಪ್ರೇಮ ಉಕ್ಕಿಬರುವಂತಿತ್ತು. ಆದರೆ ಅದರ ಜೊತೆಯಲ್ಲಿ ತಿರಸ್ಕಾರವೂ ಬೆರೆತಿದ್ದಿತು. ಇದರಿಂದ ವಂದನಳು ಹತಾಶ ಳಾದಳು. ಕ್ಷಣಕಾಲ ಅವಳು ತಲೆ ತಗ್ಗಿಸಿಕೊಂಡು ಕುಳಿತಿದ್ದು ಅನಂತರ ಇದ್ದಕ್ಕಿದ್ದಂತೆ ತಲೆಯೆತ್ತಿ ಹೇಳತೊಡಗಿದಳು—"ಮುಖರ್ಜಿ ಸಾಹೆಬ್, ನಾನು ತಮ್ಮ ವಿಷಯದಲ್ಲಿ ತಪ್ಪು ತಿಳಿದುಕೊಂಡಿದ್ದೆ. ನಿಜವಾಗಿಯೂ ತಾವು ನನ್ನ ಅಕ್ಕನನ್ನು ಪ್ರೀತಿಸುತ್ತಿದ್ದರೆ ನನಗೆ ದುಃಖವಾಗುತ್ತಿರಲಿಲ್ಲ; ಆದರೆ ತಾವು ಅವಳನ್ನು ಪ್ರೀತಿಸುವುದಿಲ್ಲ. ನಿಮ್ಮ ಧರ್ಮವನ್ನು ಪಾಲಿಸು ತ್ತಿದ್ದೀರಿ; ಕರ್ತವ್ಯವನ್ನು ಬಿಡದೆ ವರ್ತಿಸುತ್ತಿದ್ದೀರಿ. ನಿಮ್ಮ ಪ್ರಕೃತಿ ಅತಿ ಕಠೋರವಾದುದು. ಅದು ಪ್ರೀತಿಸುವುದನ್ನರಿಯದು. ನೀವು ಬೇಕಾದಷ್ಟು ಮರೆಮಾಚಲು ಯತ್ನಿಸಿ, ಇಂದಲ್ಲ ನಾಳೆಯಾದರೂ ಗುಟ್ಟು ರಟ್ಟಾಗದೇ ಇರದು. ಕ್ಷಣಕಾಲ ಸುಮ್ಮನಿದ್ದು ಪುನಃ ಮಾತನ್ನು ಮುಂದು ವರಿಸಿದಳು—"ಇಂದು ನನ್ನ ತಪ್ಪು ಭಾವನೆಯು ದೂರವಾಯಿತು. ವರಾನ್ವೇಷಣೆಗೆ ಹೊರಟಿದ್ದೇನೆ ನನಗೆ ಆಶೀರ್ವದಿಸಿ."

ವಿಪ್ರದಾಸನು ನಗುತ್ತ ಕೈಯೆತ್ತಿ—"ಇಗೋ ಆಶೀರ್ವಾದ ಮಾಡು ತ್ತೇನೆ. ಇಂದಿನಿಂದ ಗಂಡಂದಿರನ್ನು ಹುಡುಕಿಕೊಂಡು ಹೋಗುವ ಕೆಲಸ

ಕೊನೆಗಾಣಲಿ. ನಿನ್ನ ಚಿರಕಾಲದ ಸ್ವಾಮಿ ನಿನಗೆ ತಾನಾಗಿಯೆ ದೊರೆಯಲಿ.'' ಎಂದನು.

ವಿಪ್ರದಾಸನ ಮಾತನ್ನು ಕೇಳಿ ವಂದನ ಸಿಟ್ಟುಗೊಂಡಳು. ಅವಳನ್ನು ಅಪಹಾಸ್ಯ ಮಾಡಬೇಕೆಂದೇ ಹೀಗೆ ಆಡಿದನೆಂದು ಅವಳು ಭಾವಿಸಿದಳು. ಅದಕ್ಕೆ ಅವಳು ಉತ್ತರವನ್ನು ಕೊಡುತ್ತ '' ಮುಖರ್ಜಿಗಳೆ ತಾವು ತಪ್ಪು ತಿಳಿದುಕೊಂಡಿದ್ದೀರಿ. ಗಂಡಂದಿರನ್ನು ಹುಡುಕಿಕೊಂಡು ಹೊರಡುವುದು ನನ್ನ ಕಸಬಲ್ಲ ಆ ಜಾತಿಯ ಹೆಂಗಸರೇ ಬೇರೆ. ಈ ದಿನ ಇಲ್ಲಿ ಬಂದ ಕಾರಣವನ್ನು ನಾನು ನಿಮಗೆ ತಿಳಿಸಲೇ ಇಲ್ಲ. ಒಂದು ಕಡೆ ಇದುವರೆಗೂ ನನ್ನಲ್ಲಿ ಮನೆಮಾಡಿದ್ದ ಒಂದು ತಪ್ಪುಭಾವನೆ ದೂರವಾಯಿತು. ನಿಮ್ಮ ಪರಿವಾರದಲ್ಲಿ ಕಾಲಿಟ್ಟು ಮಡಿ ಮೈಲಿಗೆ ಅರಿತು ವರ್ತಿಸುವುದು, ಹೂ ಬಿಡಿಸಿ ಪೂಜೆಗೆ ಅಣಿಮಾಡುವುದು, ತಿಲಕವನ್ನು ಹಚ್ಚುವುದು ಮುಂತಾದುವು ಮನುಷ್ಯನನ್ನು ಪವಿತ್ರ ಮಾಡುವುವೆಂದು ನಂಬಿದ್ದೆ. ಈಸಲ ಚಿಕ್ಕಮ್ಮನ ಮನೆಗೆ ಹೋದಾಗ ಮೌಢ್ಯ ಮಾಯವಾಯಿತು. ಎಂಥ ಹುಚ್ಚು ಕೆಲಸವನ್ನು ಮಾಡುತ್ತಿದ್ದೆ ಮುಖರ್ಜಿಸಾಹೆಬ್! ಅವುಗಳಲ್ಲಿ ಅಖಂಡ ವಿಶ್ವಾಸ. ನಮ್ಮ ಶಿಕ್ಷಣ, ಸಂಸ್ಕಾರ ಇವುಗಳಲ್ಲಿ ಮಡಿ ಮೈಲಿಗೆಯನ್ನು ಳಿದು ಬೇರೆ ಭಾವನೆಯೇ ಇಲ್ಲವೆನ್ನುವಂಥಹ ನಂಬಿಕೆ. ಹುಚ್ಚುತನ ಬಂದು ಹೋಯಿತು ' ಎಂದು ಹೇಳಿ ಪ್ರಯತ್ನಪೂರ್ವಕವಾಗಿ ನಕ್ಕಳು.

ಈ ಮಾತುಗಳನ್ನು ಕೇಳಿ ವಿಪ್ರದಾಸನು ಆಹತನಾಗುವನೆಂದು ಅವಳು ತಿಳಿದಿದ್ದಳು. ಆದರೆ ಹಾಗೇನೂ ಆಗಲಿಲ್ಲ. ವಿಪ್ರದಾಸನು ಅವಳ ಕುಹಕ ನಗುವಿನೊಂದಿಗೆ ತಾನೂ ಸಹಕರಿಸಿ ನಗುತ್ತ ಉತ್ತರ ಕೊಟ್ಟನು —'' ಅದು ನನಗೆ ಮೊದಲೇ ಗೊತ್ತಿತ್ತು. ವಂದನ ನಿನಗೆ ನೆನಪಿಲ್ಲವೆ! ಒಂದು ದಿನ ನಾನೆ ಹೇಳಿದ್ದೆ ಇವು ನಿನಗೆ ರುಚಿಸದು. ನೀನು ಮಾಡಬೇಡ ಅಂತ. ಅಂತೂ ಆ ಮೌಢ್ಯ ದೂರವಾಯಿತೆಂದು ಕೇಳಿ ನನಗೆ ಸಂತೋಷವಾಯಿತು. ನಿನ್ನ ಈ ಮಾತುಗಳಿಂದ ನನಗೆ ಬಹಳ ದುಃಖವಾಗಬಹುದೆಂದು ನೀನು ಯೋಚಿಸುತ್ತಿರಬಹುದು ; ಆದರೆ ನನಗೆ ದುಃಖ ಕೊಂಚವೂ ಇಲ್ಲ. ನಿನಗೆ ಸ್ವಾಭಾವಿಕವಲ್ಲದ್ದನ್ನು ನೀನು ಮಾಡದಿದ್ದರೆ ನನಗೆ ದುಃಖವೇ? ಆ ದಿನ ನಾನು ಯಾರನ್ನು ಧ್ಯಾನಿಸುತ್ತಿರುವೆನೆಂದು

ನೀನು ಕೇಳಿದಾಗ ಉತ್ತರ ಕೊಡದೆ ಸುಮ್ಮನಿದ್ದೆ. ಬಹುಶಃ ನೀನು ಅದನ್ನು ಮರೆತಿಲ್ಲವೆಂತ ಕಾಣುತ್ತೆ. ಹೇಳಬಹುದಾಗಿತ್ತು. ಆದರೆ ಹೇಳುವುದ ರಿಂದ ಏನೂ ಪ್ರಯೋಜನವಿರಲಿಲ್ಲ. ಹೋಗಲಿ ಈಗ ಮಾತಿನಿಂದೇನಾಗ ಬೇಕು. ನೀನು ಬೊಂಬಾಯಿಗೆ ಯಾವಾಗ ಹೊರಡುವುದು? ಏನಾ ದರೂ ನಿಶ್ಚಯ ಮಾಡಿದ್ದೀಯ ?"

ಅವಳ ಮುಖ ಕೆಂಪೇರಿತು ವಿಪ್ರದಾಸನ ಪ್ರಶ್ನೆಗೆ ಕೇವಲ 'ಇಲ್ಲ' ವೆಂದು ಉತ್ತರ ಕೊಟ್ಟಳು.

"ಆ ದಿನ ನೀನು ನಿಮ್ಮ ಚಿಕ್ಕಮ್ಮನ ಸೋದರಳಿಯ ಅಶೋಕನ ವಿಚಾರ ಹೇಳುತ್ತಿದ್ದೆ. ಹುಡುಗ ನಿನಗೂ ಒಪ್ಪಿಗೆಯೆಂದೇ ಹೇಳಿದ್ದೆ. ಇತ್ತೀಚೆಗೆ ಅವನ ವಿಷಯದಲ್ಲಿ ಇನ್ನೇನಾದರೂ ಗೊತ್ತಾಯಿತೆ ?"

"ಇಲ್ಲ."

"ನಿಮ್ಮಿಬ್ಬರಲ್ಲಿ ಮದುವೆಯಾದರೆ ಇಗೋ ನಾನು ಹೃತ್ಪೂರ್ವಕವಾಗಿ ಆಶೀರ್ವದಿಸುತ್ತೇನೆ. ಚಿಕ್ಕಮ್ಮನ ಅವಸರಕ್ಕೆ ಏನಾದರೂ ವಿಪರೀತ ಮಾಡಿಕೊಂಡು ಬಿಟ್ಟೀಯೆ. ಅವರ ಮಾತಿಗೆ ಮರುಳಾಗ ಬೇಡ ಅಷ್ಟೆ."

ವಂದನಳ ಕಣ್ಣಿನಲ್ಲಿ ಕಂಬನಿ ಹರಿದು ಬಂದಿತು. ಮುಖವನ್ನು ತಗ್ಗಿಸಿ ಬಂದ ಅಳುವನ್ನು ನುಂಗಿಕೊಂಡು ಅವಳು 'ಆಗಲಿ' ಎಂದು ಉತ್ತರ ಕೊಟ್ಟಳು.

ವಿಪ್ರದಾಸ :—"ನಾನು ನಾಳಿದ್ದು ಊರಿಗೆ ಹೋಗುತ್ತೇನೆ. ಎರಡು ಮೂರು ದಿನಗಳಿಗಿಂತ ಜಾಸ್ತಿ ಅಲ್ಲಿರುವುದಿಲ್ಲ. ನಾನು ಹಿಂತಿರುಗಿ ಬಂದ ಮೇಲೆ ನೀನು ಕಲ್ಕತ್ತೆಯಲ್ಲೇ ಇದ್ದರೆ ಒಂದುಸಲ ಪುನಃ ಬರುತ್ತಿಯಾ ?"

ವಂದನ ತಲೆತಗ್ಗಿಸಿಕೊಂಡೇ ಕುಳಿತಿದ್ದಳು. ತಲೆಯಲ್ಲಾಡಿಸಿ ಏನೋ ಉತ್ತರ ಕೊಟ್ಟಳು. ಆದರೆ ಅದು ಏನೆಂದು ಅರ್ಥವಾಗಲಿಲ್ಲ.

ವಿಪ್ರದಾಸ :—"ಈಗತಾನೆ ಕೇಳಿದೆಯಲ್ಲ. ನನಗೆ ಇನ್ನು ಮೇಲೆ ರಜ ಸಿಕ್ಕಿದೆ . . . ಇಂದಿನಿಂದ ಆಡಳಿತದ ಎಲ್ಲ ಜವಾಬ್ದಾರಿಯನ್ನು ದ್ವಿಜು ನೋಡಿಕೊಳ್ಳುತ್ತಾನೆ. ಚಿಕ್ಕಂದಿನಿಂದ ನಮ್ಮ ತಂದೆ, ಮನೆ ಮಠ ಎಂತ ನನ್ನನ್ನು ಕಟ್ಟಿದ್ದರು. ಒಂದು ಅರೆಕ್ಷಣ ಪುರಸತ್ತು ಸಿಗುತ್ತಿರಲಿಲ್ಲ. ಇವತ್ತು ಕೊಂಚ ಬಿಡುವಿನಿಂದ ಉಸಿರಾಡುತ್ತಿದ್ದೇನೆ. ಸಾಕು ಬದುಕಿದೆ."

ವಂದನ ಆಗ ಮುಖ ಎತ್ತಿದಳು. "ಏನು ನೀವು ನಿಜವಾಗಿಯೂ ಈಗ ಬದುಕಿದಿರಾ? ನಿಮಗೆ ಅಷ್ಟು ಆಯಾಸವಾಗಿತ್ತೆ?" ಎಂದು ಕೇಳಿದಳು.

ಈ ಪ್ರಶ್ನೆಗೆ ಉತ್ತರವನ್ನು ಕೊಡದೆ ವಿಪ್ರದಾಸನು "ನೋಡು ವಂದನ, ಒಂದು ಮಾತು ನಿನಗೆ ಹೇಳಲೇ ಇಲ್ಲ" ವೆಂತ ಪ್ರಾರಂಭಿಸಿದ. —"ನನ್ನ ಕಾಹಿಲೆಯಲ್ಲಿ ನೀನು ಮಾಡಿದ ಶುಶ್ರೂಷೆಯನ್ನು ದ್ವಿಜದಾಸನಿಗೆ ವರ್ಣಿಸುತ್ತ 'ನೋಡು ದ್ವಿಜು ನಿಮ್ಮಲ್ಲಿ ಯಾರೂ ಅವಳ ಅರ್ಧದಷ್ಟು ಮುತುವರ್ಜಿ ವಹಿಸಿ ಕೆಲಸಮಾಡಲಾರಿರಿ; ನೀವು ಅವಳಿಗೆ ಕೃತಜ್ಞರಾಗಿರಬೇಕು" ಎಂತ ಹೇಳಿದೆ. ದ್ವಿಜು ಕೃತಜ್ಞತೆಯನ್ನು ಒಪ್ಪಿಕೊಂಡರೂ ಪುನಃ ಅಂತಹ ಸನ್ನಿವೇಶ ಒದಗಿದರೆ ಅಣ್ಣನ ಶುಶ್ರೂಷೆ ಮಾಡುವುದರಲ್ಲಿ ಹತ್ತಾರು ವಂದನರೂ ಅವನಿಗೆ ಸರಿತೂಗುವುದಿಲ್ಲವೆಂದ.

ವಂದನ:—"ನನಗೂ ಈ ಷರತ್ತುಗಳು ಒಪ್ಪಿಗೆ. ಅಂತಹ ಪ್ರಸಂಗ ಬಂದಾಗ ಒಮ್ಮೆ ಖಂಡಿತ ದರ್ಶನವನ್ನು ಕೊಡಬೇಕೆಂದು ತಿಳಿಸಿ."

ಕೇಳಿ ವಿಪ್ರದಾಸನು ನಸುನಗುತ್ತ "ಕೊಟ್ಟೇ ಕೊಡುತ್ತಾನೆ. ಅವನು ಸೋತು ಬೆನ್ನು ತೋರುವ ಹೇಡಿಯಲ್ಲ. ಬಹುಶಃ ನೀನು ಅವನನ್ನು ಸರಿಯಾಗಿ ಅರಿತಿಲ್ಲವೆಂತ ಕಾಣುತ್ತೆ." ಎಂದು ಹೇಳಿದನು.

"ಅರಿತಿದ್ದೇನೆ ಮುಖರ್ಜಿ ಸಾಹೆಬ್. ಆದರೆ ನಿಮ್ಮ ವಿಚಾರದಲ್ಲಿ ನಿಮ್ಮ ತಮ್ಮನೊಂದಿಗೆ ಸ್ಪರ್ಧಿಸುವ ಯೋಗ್ಯತೆ ವಂದನಳಿಗೆಲ್ಲಿಂದ ಬರಬೇಕು ಅಲ್ಲವೆ?"

ತಮ್ಮನಮೇಲಿನ ಹೆಮ್ಮೆಯಿಂದ ಅವನ ಮುಖದ ಕಾಂತಿ ಹೊರಹೊಮ್ಮುವಂತಿತ್ತು. ಹೇಳಿದ "ವಂದನಾ, ದ್ವಿಜ ಎಂಥ ಯೋಗ್ಯ ಗೊತ್ತೆ?"

"ಹೌದು ನನಗಿಂತ ಹೆಚ್ಚು ಯೋಗ"—ಇಷ್ಟು ಹೇಳಿ ಅತ್ತ ಇತ್ತ ನೋಡುತ್ತ ಕೆಲವು ನಿಮಿಷಕಾಲ ಕಳೆದು ಅನಂತರ "ನೋಡು ವಂದನ, ನೀನು ಅವನ ಮೇಲೆ ಸಿಟ್ಟುಗೊಂಡಿರುವುದಾಗಿ ಹೇಳುತ್ತಿದ್ದ. ಅವನ ಜೊತೆಯಲ್ಲೇಕೆ ಮಾತನಾಡಲಿಲ್ಲ?" ಎಂದು ಕೇಳಿದನು.

"ಮಾತನಾಡುವ ಪ್ರಮೇಯ ಒದಗಿ ಬರಲಿಲ್ಲ"

ವಿಪ್ರದಾಸನಕ್ಕ ಹೇಳಿದ—"ಹಾಗಾದರೆ ನೀನು ನಿಜವಾಗಿಯೂ ಸಿಟ್ಟುಗೊಂಡಿರುವೆ ಎಂದು ಗೊತ್ತಾಯಿತು. ವಂದನ ನೋಡು ಒಂದು ಮಾತು ಹೇಳಿರುತ್ತೇನೆ. ದ್ವಿಜೂನ ವ್ಯವಹಾರ ಒರಟಾಗಿರುತ್ತೆ. ಮಾತು ಅಷ್ಟು ನಯವಾಗಿರುವುದಿಲ್ಲ. ಆದರೆ ಅವನ ಈ ಕರ್ಕಶ ಆವರಣವನ್ನು ಕಿತ್ತೆಸೆದು ಅವನನ್ನು ಅರಿತುಕೊಂಡರೆ ಅವನಷ್ಟು ಉತ್ತಮನಾದವನು ಈ ಪ್ರಪಂಚದಲ್ಲಿ ಬೇರೊಬ್ಬನಿಲ್ಲವೆಂದು ಗೊತ್ತಾಗುತ್ತದೆ. ನನ್ನ ಮಾತು ನಂಬು. ಇಷ್ಟು ಯೋಗ್ಯನಾದ, ನಂಬಿಕೆಗೆ ಅರ್ಹನಾದ ಮನುಷ್ಯ ಹುಡುಕಿದರೂ ಸಿಕ್ಕಲಾರ."

ವಂದನ ಎಲ್ಲೋ ನೋಡುತ್ತಿದ್ದಳು. ಇದಕ್ಕೆ ಏನೂ ಉತ್ತರ ಕೊಡಲಿಲ್ಲ. ಇದ್ದಕ್ಕಿದ್ದಂತೆ ಎದ್ದು ನಿಂತು ಹೇಳಿದಳು—"ಕಾರು ಕಾದು ನಿಂತಿದೆ. ಬಹಳ ಹೊತ್ತಾಯಿತು. ನಾನು ಹೋಗುತ್ತೇನೆ. ಇಲ್ಲೇ ಇದ್ದರೆ ನೀವು ಹಿಂತಿರುಗಿದ ಮೇಲೆ ಬಂದು ಕಾಣುತ್ತೇನೆ. ಇರದಿದ್ದರೆ ಇಗೋ, ಇದೇ ಕಡೆಯ ನಮಸ್ಕಾರ"—ಇಷ್ಟು ಹೇಳಿ ವಿಪ್ರದಾಸನ ಪಾದಗಳನ್ನು ಮುಟ್ಟಿ ನಮಸ್ಕರಿಸಿ ವೇಗವಾಗಿ ಅಲ್ಲಿಂದ ಹೊರಟುಬಿಟ್ಟಳು. ವಿಪ್ರದಾಸನಿಗೆ ಒಂದು ಮಾತು ಸಹ ಆಡಲು ಅವಕಾಶ ಕೊಡಲಿಲ್ಲ.

* * * *

ಕೋಣೆಯಿಂದ ಹೊರಕ್ಕೆ ಮೆಟ್ಟಲಿನ ಹತ್ತಿರ ಬಂದಾಗ ಕೈಮುಗಿದು ನಿಂತಿರುವ ದ್ವಿಜದಾಸನನ್ನು ಕಂಡು ಚಕಿತಳಾದಳು.

ವಂದನಳಿಗೆ ನಗು ಬಂತು. "ಏನು ಸಮಾಚಾರ?" ಎಂತ ಕೇಳಿದಳು.

"ನಮ್ಮ ಅಣ್ಣನೊಂದಿಗೆ ತಾವು ಒಮ್ಮೆ ನಮ್ಮ ಊರಿಗೆ ದಯ ಮಾಡಿಸಬೇಕು"

"ಅವರನ್ನು ನಾನು ಕರೆದುಕೊಂಡು ಬರಬೇಕೆ? ಕಾರಣ?"

"ಅದನ್ನು ಹೇಳಬೇಕೆಂದೇ ನಿಂತಿದ್ದೇನೆ. ಒಮ್ಮೆ ಕರೆಸಿಕೊಳ್ಳದೆ ತಾವು ನಮ್ಮ ಮನೆಯಲ್ಲಿ ಕಾಲಿಟ್ಟಿದ್ದಿರಿ, ಈಗ ಮತ್ತೊಮ್ಮೆ ಕೃಪೆ ಮಾಡಬೇಕು."

ವಂದನ ಅತ್ತ ಇತ್ತ ನೋಡುತ್ತಿದ್ದು—"ನನ್ನನ್ನು ಕರೆಯುತ್ತಿರುವ

ವರು ಯಾರು? ಅಮ್ಮನೆ? ನಿಮ್ಮ ಅಣ್ಣನೆ? ಅಥವಾ ನೀವೇ ಕರೆಯುತ್ತಿರುವಿರೊ ?" ಎಂದು ಕೇಳಿದಳು.

"ನಾನು ಸ್ವತಃ ಕರೆಯುತ್ತಿದ್ದೇನೆ."

"ಆದರೆ ಆ ಮನೆಯಲ್ಲಿ ನೀವೊಬ್ಬ "ಅನ್ಯಪುರುಷ". ನಿಮಗೆ ಆ ಅಧಿಕಾರ ಎಲ್ಲಿಂದ ಬಂತು ?"

ಅಧಿಕಾರ ಇರಲಿ ಅಥವ ಇಲ್ಲದಿರಲಿ. ಬದುಕುವ ಅಧಿಕಾರವಂತೂ ಇದೆಯಲ್ಲ. ಆ ಅಧಿಕಾರದ ಬಲದ ಮೇಲೆ ಈ ಅರಿಕೆಯನ್ನು ಮಾಡಿಕೊಂಡಿದ್ದೇನೆ. ನಿಮಗೆ ಒಪ್ಪಿಗೆಯೆ ಹೇಳಿ? ಅತ್ಯಂತ ಆವಶ್ಯಕವಲ್ಲದಿದ್ದ ಪಕ್ಷಕ್ಕೆ ನಾನು ಯಾರನ್ನೂ ಪ್ರಾರ್ಥಿಸಿಕೊಳ್ಳುವುದಿಲ್ಲ."

ಬಹಳ ಹೊತ್ತಿನವರೆಗೆ ವಂದನ ಎಲ್ಲೊ ನೋಡುತ್ತಿದ್ದು ಅನಂತರ ಹೇಳಿದಳು—"ಆಗಲಿ ಹಾಗೇ ಆಗಲಿ. ಬರುತ್ತೇನೆ. ಆದರೆ ನನ್ನ ಮಾನಾಪಮಾನಕ್ಕೆ ನೀವು ಹೊಣೆಯಾಗಿರಬೇಕು."

ಕೃತಜ್ಞತೆಯನ್ನು ತೋರುತ್ತ ದ್ವಿಜದಾಸ "ಆಗಲಿ ನಾನು ಅಲ್ಪ. ಆದರೂ ಸಾಧ್ಯವಾದಷ್ಟು ಆ ಹೊಣೆಗಾರಿಕೆಯನ್ನು ಹೊರುತ್ತೇನೆ'' ಎಂದು ಹೇಳಿದನು.

"ಇದನ್ನು ಮರೆಯಬೇಡಿ.'' ವಂದನ ಹೇಳಿದಳು.

"ಇಲ್ಲ. ಇಲ್ಲ. ಎಂದಿಗೂ ಮರೆಯುವುದಿಲ್ಲ."

* * * *

## ೨೧

ಅನೇಕ ದಿನಗಳ ತರುವಾಯ ವಿಪ್ರದಾಸನು ಆಫೀಸು ರೂಮಿನಲ್ಲಿ ಬಂದು ಕುಳಿತಿದ್ದಾನೆ. ಮೇಜಿನ ಮೇಲೆ ಕಾಗದ ಪತ್ರಗಳ ಹೊರೆ ಬಿದ್ದಿದೆ. ಎಷ್ಟು ದಿನದ ಕೆಲಸ ಬಾಕಿ ನಿಂತುಹೋಗಿದೆಯೊ ದೇವರೇ ಬಲ್ಲ. ವಿಪ್ರದಾಸ ಬಹಳ ಸೋತಿದ್ದಾನೆ. ಆದರೂ ದ್ವಿಜದಾಸನನ್ನು ನಂಬಿ ಸುಮ್ಮನೆ ಕುಳಿತುಕೊಳ್ಳುವುದು ಸರಿಯಲ್ಲವೆಂದು ನೀಲಿ ರಂಗಿನ ಒಂದು ದೊಡ್ಡ ರಿಜಿಸ್ಟರನ್ನು ತಿರುವಿಹಾಕುತ್ತಿದ್ದ. ಅಷ್ಟರಲ್ಲಿ ಹೊರಗಡೆ ಮೋಟಾರಿನ ಹಾರ್ನ್ ಕೇಳಬಂದಿತು ; ಸ್ವಲ್ಪ ಹೊತ್ತಿನಲ್ಲಿ ಪೂರ್ವದಿಕ್ಕಿನ ತೆರದ ಬಾಗಿಲಿನಿಂದ ವಂದನ ಒಳಕ್ಕೆ ಪ್ರವೇಶಿಸಿದಳು. ಅವಳೊಬ್ಬಳೇ ಬಂದಿರಲಿಲ್ಲ, ಜೊತೆ

ಯಲ್ಲಿ ಒಬ್ಬ ಅಪರಿಚಿತ ಯುವಕನೂ ಇದ್ದನು. ಪಂಚೆ ಜುಬ್ಬ ಅದರ ಮೇಲೆ ಚದ್ದರ್ ಇವು ಆ ಯುವಕನ ಉಡುಪು. ಕಾಲಿನಲ್ಲಿ ಹೂವುಗಳನ್ನು ಚಿತ್ರಿಸಿರುವ ಕಟಕ್ ಜೋಡು ಮೆಟ್ಟಿದ್ದ. ವಯಸ್ಸು ಸುಮಾರು ಮೂವತ್ತು. ಮೈ ಕಟ್ಟಿಗೆ ತಕ್ಕಷ್ಟು ಉದ್ದವಾಗಿದ್ದರೆ ಅವನನ್ನು ಒಬ್ಬ ಸುಂದರ ಪುರುಷ ನೆಂದು ಹೇಳಬಹುದಾಗಿದ್ದಿತು. ಅಭ್ಯಾಗತರನ್ನು ಸ್ವಾಗತಿಸುವುದಕ್ಕಾಗಿ ವಿಪ್ರದಾಸನು ಕುರ್ಚಿ ಬಿಟ್ಟು ಎದ್ದು ನಿಂತನು.

ವಂದನ:—"ಮುಖರ್ಜಿ ಸಾಹೇಬ್ ಇವರೆ ಮಿಸ್ಟರ್ ಚೌಧರಿ, ಬಾರ್-ಅಟ್-ಲಾ. ಅಶೋಕ ಬಾಬೂ ಎಂದು ಇವರನ್ನು ಸಂಬೋಧಿಸ ಬಹುದು. ಅಡ್ಡಿ ಇಲ್ಲ. ಈ ಶರತ್ತಿಗೆ ಅವರಿಂದ ಒಪ್ಪಿಗೆಯನ್ನು ಪಡೆದೇ ಇಲ್ಲಿಗೆ ಕರೆದುಕೊಂಡು ಬಂದಿದ್ದೇನೆ. ಸರಿ, ಮಾತು ಕತೆ ಸಾಗುತ್ತಿರಲಿ, ಮೊದಲು ನಾನು ನನ್ನ ಕರ್ತವ್ಯವನ್ನು ಮಾಡಿ ಮುಗಿಸುತ್ತೇನೆ." ಎಂದು ಹೇಳುತ್ತ ಹತ್ತಿರ ಬಂದು ವಿಪ್ರದಾಸನಿಗೆ ತಲೆಬಾಗಿ ನಮಸ್ಕರಿಸಿದಳು. ಅನಂತರ ಮೆಲುದನಿಯಲ್ಲಿ 'ನೋಡಿ, ಪಾದ ಧೂಳಿಯನ್ನು ಅವಧರಿಸಲಿಲ್ಲ. ಇವರ ಎದುರಿನಲ್ಲಿ ಅದು ಸಾಧ್ಯವಿಲ್ಲ. ಎಲ್ಲೋ ತಮ್ಮ ಸಮಾಜ ಬಾಹಿರ ಪ್ರಾಣಿ ಇದು ಎಂದು ಅವರು ತಿಳಿದುಕೊಂಡರೆ ಕ್ಷಮಿಸುವಿರಲ್ಲವೇ? ನಿಮ್ಮ ಪ್ರಸನ್ನತೆಯ ಆಳ ಎಷ್ಟೆಂದು ನನಗೆ ಗೊತ್ತಿಲ್ಲವೇ?" ಎಂದಳು.

ವಿಪ್ರದಾಸ:—"ಚಿಕ್ಕಮ್ಮನ ಎದುರಿನಲ್ಲಿ ಇದೇ ರೀತಿ ನನ್ನ ಗುಣ ಗಾನ ಮಾಡುತ್ತೀಯೇನು? ಅಶೋಕನ ಕಡೆ ತಿರುಗಿ ಹೇಳಿದ:—ನಿಮ್ಮ ವಿಷಯವಾಗಿ ವಂದನ ಬೇಕಾದಷ್ಟು ಹೇಳಿದ್ದಾಳೆ. ಕಾಹಿಲೆ ಇಲ್ಲದಿದ್ದರೆ ನಾನೇ ತಮ್ಮನ್ನು ನೋಡಲು ಬಂದುಬಿಡುತ್ತಿದ್ದೆ. ನಿಮ್ಮನ್ನು ನೋಡಿದ ಕೂಡಲೆ ಚಿರಪರಿಚಿತ ಮುಖದಂತೆ ಕಂಡುಬಂದಿತು. ವಿಳಂಬ ಮಾಡದೆ ನಿಮ್ಮನ್ನು ವಂದನ ಕರೆದುಕೊಂಡು ಬಂದುದು ಒಳ್ಳೆಯದೇ ಆಯಿತು.

ಇದಕ್ಕೆ ಉತ್ತರವಾಗಿ ಅಶೋಕ ಏನೋ ಹೇಳಬೇಕೆಂದಿದ್ದ. ಅಷ್ಟ ರಲ್ಲಿ ವಂದನ ಆಜ್ಞಾಪಿಸುವವಳಂತೆ ತರ್ಜನಿಯನ್ನು ಮೇಲೆಕ್ಕೆತ್ತಿ ಹೇಳಿ ದಳು:—ಮುಖರ್ಜಿಗಳೆ ಇದೇನು ಅತ್ಯುಕ್ತಿ, ಅತಿಶಯೋಕ್ತಿ ಇವುಗಳ ಕ್ಷೇತ್ರ ವನ್ನು ದಾಟಿ ಅಸತ್ಯದ ಕ್ಷೇತ್ರಕ್ಕೆ ಬಂದುಬಿಟ್ಟಿರಲ್ಲಾ! ಇನ್ನು ಮುಂದು ವರಿಸಬೇಡಿ, ನಿಲ್ಲಿ; ಇಲ್ಲದಿದ್ದರೆ ಗಲಾಟೆ ಮಾಡಿಬಿಡುತ್ತೇನೆ."

"ಅಂದರೆ ?"

"ಅಂದರೆ ನಮ್ಮಂಥ ಸಾಧಾರಣ ಜನರಂತೆ ತಾವೂ ಕೂಡ ಮನಸ್ಸಿಗೆ ಬಂದಂತೆ ಸುಳ್ಳು-ಸಟೆ ಹೇಳಬಲ್ಲಿರಿ. ಆದ್ದರಿಂದ—ನಮ್ಮಂತೆ ನೀವೂ ಸಾಧಾರಣರೇ ಎಂದು ನನ್ನ ತೀರ್ಮಾನ."

ವಿಪ್ರದಾಸ—ಎಂದಿಗೂ ಅಲ್ಲ. ಯಾರನ್ನು ಬೇಕಾದರೂ ಕೇಳಿ ನೋಡು. ನಿನ್ನ ಮಾತನ್ನು ನಂಬುವುದಕ್ಕಾಗುವುದಿಲ್ಲವೆಂದೂ ಅಗ್ರಾಹ್ಯ ವೆಂದೂ ಹೇಳುವರು.

ವಂದನ—"ಈ ಸಲ ನಿಮ್ಮ ಈ ಹುಲಿಚರ್ಮವನ್ನು ಕಿತ್ತೆಸೆಯು ತ್ತೇನೆ. ಆಗ ಒಳಗುಟ್ಟು ತಾನಾಗಿ ಗೊತ್ತಾಗುತ್ತದೆ—ಹೆದರಿಕೆ ಬಯ ಲಾಗುತ್ತದೆ. ಅನಂತರ ಎಲ್ಲರೂ ನನ್ನನ್ನು ಆಶೀರ್ವದಿಸುತ್ತಾರೆ—ಎಲ್ಲಿ ಯಾದರೂ ರಾಣಿಯಾಗಿರಮ್ಮ ಎಂದು'

ವಿಪ್ರದಾಸನು ನಗುತ್ತ ಉತ್ತರ ಕೊಟ್ಟ:—"ಆಶೀರ್ವಾದ ಮಾಡಲಿ ಅದಕ್ಕೆ ನನ್ನದೇನೂ ಅಡ್ಡಿಯಿಲ್ಲ. ಬೇಕಾದರೆ ನಾನೂ ಆಶೀರ್ವಾದ ಮಾಡುತ್ತೇನೆ. ಆದರೆ ನಿಮಗೆ ಆಶೀರ್ವಾದ ಬೇಕಿಲ್ಲ. ಅದು ಬಾಯಿ ಮಾತು, ಕುಸಂಸ್ಕಾರ, ಕುರುಡು ನಂಬಿಕೆ ಅನ್ನುತ್ತೀ.'

ಪುನಃ ವಂದನ ಹೇಳಿದಳು:—ಮತ್ತೆ ಹಂಗಿಸುವ ಯತ್ನ. ಹಿರಿ ಯರ ಆಶೀರ್ವಾದ ಬೇಡವೆಂದು ಯಾರು ಹೇಳಿದವರು ? ಇದು ಕು ಸಂಸ್ಕಾರವೆಂದಾದರೂ ಯಾರು ಹೇಳಿದರು ? ಈಗ ನಿಜವಾಗಿ ನನಗೆ ಸಿಟ್ಟು ಬರುತ್ತದೆ."

"ವಿಪ್ರದಾಸನು ಗಂಭೀರ ಮುದ್ರೆಯಿಂದ ಹೇಳಿದನು;—'ಏನು ? ನಿಜವಾಗಿಯೂ ಸಿಟ್ಟು ಬರುತ್ತದೆಯೆ ? ಹೋಗಲಿ ಈ ಮಾತುಗಳನ್ನು ಬಿಟ್ಟು ಬಿಡು. ಬೆಳಗಾಗುವುದರೊಳಗೆ ಈ ರೀತಿ ನನ್ನ ಮುಂದೆ ಆವಿರ್ಭ ವಿಸಲು ಕಾರಣವಾದರೂ ಏನು ? ಅದನ್ನು ಹೇಳು. ನನ್ನಿಂದೇನಾದರೂ ಕೆಲಸವಿದೆಯೇ ?

"ಬೇಕಾದಷ್ಟು. ಮೊದಲನೆಯದಾಗಿ ನನ್ನ ಅಪ್ಪಣೆ ಇಲ್ಲದೆ ಕೆಳಗೆ ಬಂದು ಕೆಲಸ ಏಕೆ ಪ್ರಾರಂಭಿಸಿದಿರಿ ?'

"ಪ್ರಾರಂಭಿಸಿಲ್ಲ, ಪ್ರಾರಂಭಿಸಬೇಕೆಂದಿದ್ದೇನೆ. ಇಗೋ ಇದೇ

ಕೆಲಸ ''-- ಎಂದು ಹೇಳುತ್ತ ವಿಪ್ರದಾಸನು ರಿಜಿಸ್ಟರನ್ನು ಪಕ್ಕಕ್ಕೆ ಸರಿಸಿದನು.

ವಂದನ ಸಂತುಷ್ಟಳಾಗಿ ಹೇಳಿದಳು:—ಸರಿ ಇದು Satisfactory. ಆಜ್ಞೆಯನ್ನು ಉಲ್ಲಂಘಿಸಿದ ತಪ್ಪನ್ನು ಕ್ಷಮಿಸಿದ್ದೇನೆ. ಭವಿಷ್ಯದಲ್ಲಿ ಇದೇ ರೀತಿ ಅನುಗಾಮಿಯಾಗಿದ್ದಲ್ಲಿ ನನ್ನ ಎಷ್ಟೋ ಕೆಲಸಗಳು ಸುಗಮವಾಗಿ ಸಾಗುತ್ತವೆ. ಈ ಕಡೆ ನೋಡಿ, ಇವರೊಡನೆ ಸಂಭಾಷಣೆ ನಡೆಯುತ್ತಿರಲಿ—ಮುಖರ್ಜಿ ಪರಿವಾರದ ಅತುಲೈಶ್ವರ್ಯ—ಪ್ರಜಾಶಾಸನದ ಅನೇಕ ರೋಮಾಂಚಕ ಕತೆಗಳು—ಯಾವದು ಮನಸ್ಸಿಗೆ ಸೊಗಸುತ್ತ ತ್ತದೆಯೊ ಅದನ್ನು ಕುರಿತು. ನಾನು ಮೇಲೆ ಹೋಗಿಬರುತ್ತೇನೆ. ಅನ್ನದಳ ಜೊತೆಯಲ್ಲಿ ಎಲ್ಲ ಏರ್ಪಾಟುಗಳನ್ನೂ ಮಾಡಬೇಕಾಗಿದೆ. ನಾಳೆ ಬೆಳಿಗಿನ ರೈಲಿನಲ್ಲಿ ಬಲರಾಮಪುರಕ್ಕೆ ಹೊರಡಬೇಕು. ಹೊತ್ತಿರುವಾಗಲೇ ಹೋಗಿ ಸೇರುತ್ತೇವೆ. ಶೀತಗೀತ ಏನೂ ಆಗುವುದಿಲ್ಲ. ಮಿಸ್ಟರ್ ಚೌಧುರಿ ಸಾಹೇಬರು ನಮ್ಮ ಜೊತೆಯಲ್ಲಿ ಹೊರಡಬೇಕೆಂದಿದ್ದಾರೆ—ದೊಡ್ಡವರ ಮನೆಯ ದೊಡ್ಡ ದೊಡ್ಡ ಯಾಗ ಯಜ್ಞ, ಕ್ರಿಯಾಕಲಾಪ. ದೀಯತಾಂ—ಭಾಜ್ಯತಾಂ ಮುಂತಾದುವುಗಳನ್ನು ಇದುವರೆಗೂ ಕಣ್ಣಾರೆ ಕಂಡಿಲ್ಲ. ಅಲ್ಲ ಕಾಣುವುದಾದರೂ ಹೇಗೆ ?...."

"ನೀನು ಮಾತ್ರ ಬಹಳ ನೋಡಿರುವೆಯೇನೊ" ವಿಪ್ರದಾಸ ಕೇಳಿದ.

"ಈ ಪ್ರಶ್ನೆ ಕೇವಲ ಅಪ್ರಾಸಂಗಿಕ ಮಾತ್ರ ಅಲ್ಲ, ಸಭ್ಯತೆಯ ಎಲ್ಲೆಯನ್ನೂ ಮೀರಿದೆ, ದ್ವಿಜಬಾಬು ಈಗಾಗಲೇ ಜೊತೆಯಲ್ಲಿ ಹೊರಡಬಹುದೆಂದು ಅನುಮತಿಯನ್ನು ಕೊಟ್ಟಿದ್ದಾರೆ. ಇದರಿಂದ ಇವರಿಗೆ ಸಂತೋಷವಾಗಿದೆ ಅಂದರೆ ಅನಂತರ ನನ್ನನ್ನು ಬೊಂಬಾಯಿಗೆ ಕರೆದುಕೊಂಡು ಹೋಗಿ ಬಿಟ್ಟುಬರುವುದಕ್ಕೆ ಒಪ್ಪಿದ್ದಾರೆ.'

ವಿಪ್ರದಾಸನು ಬಹಳ ಗಂಭೀರ ಮುದ್ರೆಯನ್ನು ಧರಿಸಿ ಹೇಳಿದನು:-ಏನು ಹೇಳುತ್ತಿದ್ದೀಯ ವಂದನ? ಇಷ್ಟು ದೊಡ್ಡ ತ್ಯಾಗಕ್ಕೆ ಒಪ್ಪಿಕೊಳ್ಳುವುದನ್ನು ನಮ್ಮ ಸಮಾಜದಲ್ಲಿ ನೋಡುವಂತಿಲ್ಲ. ಇದು ಕೇವಲ ನಿಮ್ಮಲ್ಲಿ ಮಾತ್ರ ಕಂಡುಬರುತ್ತದೆ. ಕೇಳಿ ನನಗೆ ಪರಮಾಶ್ಚರ್ಯವಾಗುತ್ತಿದೆ."

“ ಆಶ್ಚರ್ಯದ ಮಾತೇ. ನಿಮ್ಮಲ್ಲಿ ಜಪ ತಪವೂ ಇದೆ ಮತ್ತು ದ್ವೇಷಾಸೂಯೆಯೂ ತುಂಬಿದೆ ’ ಎಂದು ಹೇಳಿ ವಿದ್ಯುತ್ ಪ್ರಭೆಯನ್ನು ಬೀರುವಂತೆ ಒಮ್ಮೆ ನೋಡಿ ಮೇಲೆ ಹತ್ತಿ ಹೋಗಬೇಕೆಂದಿದ್ದಳು. ಅಷ್ಟ ರಲ್ಲಿ ಅವಳನ್ನು ತಡೆದು “ ನೋಡು ಇದು ‘ಕಥಾ ಮಾಲೆ’ ಯೊಳಗಿನ ನಾಯಿ ಮತ್ತು ಹುಲ್ಲಿನ ಕತೆ ಆಯಿತು. ಅದು ತಾನೂ ತಿನ್ನದೆ ಗೂಳಿಗೂ ತಿನ್ನಲು ಬಿಡದೆ ಕುಳಿತಿದ್ದಿತಂತೆ. ಹೀಗಾದರೆ ಮನುಷ್ಯ ಬದುಕುವುದು ಹೇಗೆ ? ಹೇಳು.”

ವಂದನ ಬಾಗಿಲಿನ ಬಳಿ ಸೆಟೆದು ನಿಂತಳು. ಪುನಃ ಹುಬ್ಬು ಗಂಟಿಕ್ಕಿ ಕೃತ್ರಿಮ ರೋಷವನ್ನು ತೋರುತ್ತಾ–‘ನೀವು ನಮ್ಮಂತೆ ಸಾಧಾರಣ ಕೋಟಿ ಯವರು. ಎಳ್ಳಷ್ಟು ವ್ಯತ್ಯಾಸವಿಲ್ಲ. ಜನ ವ್ಯರ್ಥವಾಗಿ ಹೆದರಿ ಸಾಯು ತ್ತಾರೆ.” ಎಂದಳು.

“ ಈ ಬಾರಿ ಹೋದಸಳು ನೀನು ಅವರ ಹೆದರಿಕೆಯನ್ನು ದೂರ ಮಾಡು.”

“ ಅದಕ್ಕೇ ನಾನು ಹೋಗುತ್ತಿರುವುದು. ಹುಲ್ಲಿನ ಹೊರೆಗೆ ಯಾರನ್ನೋ ಹೋಲಿಸಿದಿರಲ್ಲ—ಅದಕ್ಕೆ ಪ್ರತೀಕಾರ ಮಾಡಿಯೇ ತೀರು ತ್ತೇನೆ.’–ಇಷ್ಟುಹೇಳಿ ಪುನಃ ನೋಟದಿಂದ ಮಿಂಚು ಹರಿಸುವವಳಂತೆ ನೋಡಿ ಅಲ್ಲಿಂದ ಕಣ್ಮರೆಯಾದಳು.

* * * * *

ವಿಪ್ರದಾಸ—“ ಮಿಸ್ಟರ್—”

ಅಶೋಕ –ಬಹು ವಿನಯದಿಂದ ಅವನನ್ನು ತಡೆಗಟ್ಟುತ್ತ–“ ಬೇಡ ಬೇಡ, ಆ “ ಮಿಸ್ಟರ್ ” ಬೇಕಾಗಿಲ್ಲ. ಅದಕ್ಕೆ ಅಡ್ಡಿಯಾಗದಿರಲೆಂದು ಈ ಪಂಚೆ ಮತ್ತು ಸಾಧಾರಣವಾದ ಮೆಟ್ಟನ್ನು ಧರಿಸಿದ್ದೇನೆ. ವಿಪ್ರದಾಸ ಬಾಬು, ಅದಲ್ಲದೆ ವಂದನಾದೇವಿ ಬೇರೆ ಭರವಸೆ ಕೊಟ್ಟ……..”

“ ಒಳ್ಳೆಯದೇ ಆಯಿತು ಅಶೋಕಬಾಬು ” ಎಂದು ವಿಪ್ರದಾಸನು ಮನಸ್ಸಿನಲ್ಲಿಯೇ ಹರ್ಷಿತನಾಗಿ ಹೇಳಿದನು—“ ಸಂಬೋಧಿಸುವುದಕ್ಕೆ ಅನುಕೂಲವಾಯಿತು. ಗವಯಿ ಗ್ರಾಮದ ಮನುಷ್ಯ. ಒಂದು ಕಡೆ ನೆನಪಿರುವುದು ಕಷ್ಟ. ಇನ್ನೊಂದು ಕಡೆ ಅಭ್ಯಾಸವಿಲ್ಲ. ಇನ್ನು ಬಹಳ

ನಿಸ್ಸಂಕೋಚದಿಂದ ಮಾತನಾಡಬಹುದು. ಈಗತಾನೆ ನೀವು ನಮ್ಮ ಹಳ್ಳಿಯಕಡೆ ಬರುವುದಕ್ಕೆ ಒಪ್ಪಿರುವುದಾಗಿ ಕೇಳಿದೆ. ಖಂಡಿತವಾಗಿಯೂ ನೀವು ಬರುವುದಾದರೆ ನಾನು ಕೃತಾರ್ಥನಾದೆ. ನಮ್ಮ ಮನೆಯ ಸ್ವಾಮಿ ನಮ್ಮ ತಾಯಿ-ಅವರಿಗೆ ಬಹಳ ವಯಸ್ಸಾಗಿದೆ. ಅವರ ಪರವಾಗಿ ನಾನು ಆದರ ಪೂರ್ವಕವಾಗಿ ನಿಮ್ಮನ್ನು ಸ್ವಾಗತಿಸುತ್ತೇನೆ.

ವಿಪ್ರದಾಸನ ವಿನಯುವಚನಗಳನ್ನು ಕೇಳಿ ಅಶೋಕಪುಲಕಿತನಾಗಿ ಹೇಳಿದ —"ಖಂಡಿತ ಬರುತ್ತೇನೆ. ನಿಮ್ಮ ಕರೆಯನ್ನು ಮನ್ನಿಸಿ ಎಷ್ಟು ಜನ ಅನಾಥರೂ ದರಿದ್ರರೂ ಕಂಗಾಲರೂ ಬರುತ್ತಾರೆ—ಎಷ್ಟು ಜನ ಪಂಡಿತರೂ, ಅಧ್ಯಾಪಕರೂ ಬರುತ್ತಾರೆ. ಅಮ್ಮನ ಸಮಾರಂಭ, ಉತ್ಸವ, ಊಟ ಉಪಚಾರ, ಹೋಗಿ ಬರೋಣ-ಅಹಾ ಎಷ್ಟು ವಿಚಿತ್ರ ಏರ್ಪಾಟು"

ವಿಪ್ರದಾಸನು ನಗುತ್ತ, "ಛೆ ಛೆ. ಇವೆಲ್ಲ ಉಪ್ಪುಕಾರ ಹಚ್ಚಿ ಹೇಳಿರುವ ಮಾತು ಅಶೋಕಬಾಬು. ವಂದನ ತಮಾಷೆ ಮಾಡುತ್ತಿದ್ದಳು. ಅಷ್ಟೆ" ಎಂದು ಹೇಳಿದನು.

"ತಮಾಷೆ ಮಾಡಿದ್ದರಿಂದ ಅವಳಿಗೆ ಬರುವ ಲಾಭವೇನು?"

"ಲಾಭ ಇದೆ. ಮೊದಲು ನನ್ನನ್ನು ಲಜ್ಜಿತನಾಗಿ ಮಾಡುವುದು. ಬಲರಾಮಪುರದ ಮುಖರ್ಜಿ ಪರಿವಾರದೊಂದಿಗೆ ಅವಳ ವೈಮನಸ್ಯವೆಂತೆ ತೋರುತ್ತೆ. ಎರಡನೆಯುದಾಗಿ ಏನಾದರೂ ನೆಪಮಾಡಿ ನಿಮ್ಮನ್ನು ಬೊಂಬಾಯಿಗೆ ಎಳೆದುಕೊಂಡು ಹೋಗುವುದು."

ಅಶೋಕ—"ಆವಶ್ಯಕವೆಂದು ಕಂಡುಬಂದಲ್ಲಿ ನಾನು ಬೊಂಬಾಯಿಗೆ ಅವಳನ್ನು ಕರೆದುಕೊಂಡು ಹೋಗಿ ಬಿಟ್ಟುಬರಬೇಕೆಂದು ಮಾತಾಗಿದೆ ನಿಜ. ಆದರೆ ಮುಖರ್ಜಿ ಪರಿವಾರದೊಂದಿಗೆ ಅವಳಿಗೆ ವೈಮನಸ್ಸಿದೆ, ನಿಮಗೆ ಅಪಮಾನ ಮಾಡಬೇಕೆಂದಿದ್ದಾಳೆ – ಈ ಮಾತು ಮಾತ್ರ ಶುದ್ಧ ಸುಳ್ಳು. ನಿನ್ನೆಯವರೆಗೆ ಬಲರಾಮಪುರಕ್ಕೆ ಹೊರಡುವ ಮಾತೇ ಇರಲಿಲ್ಲ. ಆದರೆ ನಿಮ್ಮ ವಿಷಯವನ್ನು ಕುರಿತು ವಂದನಳಿಗೂ ಅವಳ ಚಿಕ್ಕಮ್ಮನಿಗೂ ದೊಡ್ಡ ಜಗಳವಾಯಿತು. ಚಿಕ್ಕಮ್ಮ ಹೇಳಿದಳು. "ಜನಸಾಮಾನ್ಯದ ಉಪಯೋಗಕ್ಕೆಂದು ವಿಪ್ರದಾಸಬಾಬುಗಳ ತಾಯಿ ಕೊಳ ತೋಡಿಸಿದರೆ ನಿಜವಾಗಿಯೂ ನಾನು ಅವಳನ್ನು ಶ್ಲಾಘಿಸುತ್ತೇನೆ. ಆದರೆ ಇಷ್ಟು

ದೊಡ್ಡ ಉತ್ಸವವನ್ನು ಮಾಡಿ ಪ್ರತಿಷ್ಠಾಪನೆ ಮಾಡಿಸುವುದರಲ್ಲಿ ಅರ್ಥವಿಲ್ಲ. ಇದಕ್ಕೇ ಕುಸಂಸ್ಕಾರ ಎನ್ನುವುದು. ಕುಸಂಸ್ಕಾರದಲ್ಲಿ ಭಾಗವಹಿಸುವುದೆಂದರೆ ಅನ್ಯಾಯ" ಅಂತ. ಅದಕ್ಕೆ ವಂದನ ಹೇಳಿದಳು—ಅವರು ದೊಡ್ಡ ಮನುಷ್ಯರು. ದೊಡ್ಡವರ ಕೆಲಸಕಾರ್ಯಗಳು ವಿಜೃಂಭಣೆಯಿಂದ ನಡೆಯುತ್ತವೆ. ಇದರಲ್ಲೇನಾಶ್ಚರ್ಯ ಎಂತ. ನಮ್ಮ ಸೋದರತ್ತೆ ಅದಕ್ಕೆ ಉತ್ತರವನ್ನು ಕೊಡುತ್ತ ದೊಡ್ಡವರು ಮಾಡುವ ಅಪವ್ಯಯದಲ್ಲಿ ಆಶ್ಚರ್ಯವೇನೂ ಇಲ್ಲ. ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಇದು ಕೇವಲ ಅಪವ್ಯಯವಲ್ಲ, ಇದು ಕುಸಂಸ್ಕಾರ. ಆದುದರಿಂದ ನೀನು ಹೋಗುವುದು ನನಗೆ ಇಷ್ಟವಿಲ್ಲ ಎಂದು ಹೇಳಿದಳು. ಅದಕ್ಕೆ ವಂದನ ಹೇಳಿದಳು. "ಇವನ್ನು ನಾನು ಕುಸಂಸ್ಕಾರವೆನ್ನುವುದಿಲ್ಲ. ಯಾವುದು ಗೊತ್ತಿಲ್ಲವೊ ಯಾವುದನ್ನು ತಿಳಿದುಕೊಳ್ಳಲು ನೀವು ಯತ್ನಿಸಿಲ್ಲವೋ ಅದರ ವಿಚಾರವಾಗಿ ಹೀಗೆ ಟೀಕಿಸುವುದನ್ನು ನಾನು ಕುಸಂಸ್ಕಾವೆನ್ನುತ್ತೇನೆ. ಈ ಉತ್ತರ ಕೇಳಿ ಅತ್ತೆಗೆ ಸಿಟ್ಟು ಬಂದಿತು. ಅವಳು ರೇಗಿ "ಹೋಗುವುದಕ್ಕೆ ನಿನ್ನ ತಂದೆಯ ಅನುಮತಿಯನ್ನು ಪಡೆದಿದ್ದೀಯಾ''? ಎಂದು ಪ್ರಶ್ನಿಸಿದಳು.

"ಅಪ್ಪ ಎಂದಿಗೂ ಬೇಡವೆನ್ನುವುದಿಲ್ಲ. ಅದು ನನಗೆ ಗೊತ್ತು. ಭಾವನಿಗೆ ಕಾಹಿಲೆ. ಅವರನ್ನು ಕರೆದುಕೊಂಡು ಹೋಗುವ ಭಾವ ನನ್ನ ಮೇಲಿದೆ." ಎಂದು ವಂದನ ಉತ್ತರಕೊಟ್ಟಳು.

ಆ ಭಾರ ಹೊರಿಸಿದವನು ಯಾರು? ಹೇಳು ನೋಡೋಣ. ಬಹುಶಃ ಅವನೇ ಹೇಳಿರಬೇಕು. ಅಲ್ಲವೆ?" ಎಂದು ಕೇಳಿದನು.

ಅವಳ ಪ್ರಶ್ನೆ ಕೇಳಿ ವಂದನ ದಂಗು ಬಡಿದು ಅವಳನ್ನೆ ಎವೆ ಇಕ್ಕದೆ ನೋಡುತ್ತಾ ಕುಳಿತುಕೊಂಡಳು. ಎಲ್ಲೋ ರಕ್ತಪ್ರವಾಹವು ವೇಗವಾಗಿ ಅವಳ ತಲೆಯ ಕಡೆ ಸಾಗುತ್ತಿರುವಂತೆ ನನಗೆ ತೋರಿತು. ಇನ್ನೇನಾದರೂ ಹೇಳಿಬಿಡುತ್ತಾಳೆಂದು ಮಾಡಿದ್ದೆ. ಆದರೆ ಹಾಗೇನೂ ಆಡದೆ ನಿಧಾನವಾಗಿ ಹೇಳಿದಳು. "ಯಾರ ಯಾರ ಮನಸ್ಸಿಗೆ ಏನು ತೋಚಿದರೆ ಅದನ್ನು ಕೇಳುತ್ತಿರಲಿಲ್ಲ. ನಾನು ಎಲ್ಲಕ್ಕೂ ಉತ್ತರವನ್ನು ಕೊಡುತ್ತಿರಬೇಕು—ಇಂತಹ ಶಿಕ್ಷಣ ನನಗೆ ಚಿಕ್ಕಂದಿನಿಂದಲೂ ಕೊಟ್ಟಿಲ್ಲ.

ಚಿಕ್ಕಮ್ಮ, ನಾಳಿದ್ದು ಬೆಳಿಗ್ಗೆ ಮುಖರ್ಜಿಯವರನ್ನು ಕರೆದುಕೊಂಡು ನಾನು ಬಲರಾಮಪುರಕ್ಕೆ ಹೋಗುತ್ತೇನೆ—ಇದಕ್ಕಿಂತ ಒಂದು ಮಾತು ಹೆಚ್ಚು ಹೇಳಲು ಸಾಧ್ಯವಿಲ್ಲ" ಎಂದಳು.

ಅತ್ತೆ ಸಿಟ್ಟಿನಿಂದ ಎದ್ದು ಹೊರಟುಹೋದಳು. ಆಗ ನಾನು ಕೇಳಿದೆ: ವಂದನ ನನ್ನನ್ನೂ ಕರೆದುಕೊಂಡು ಹೋಗುತ್ತೀಯಾ, ಆ ಆಚಾರ ಅನುಷ್ಠಾನವನ್ನು ಕಣ್ಣಾರೆ ನೋಡಬೇಕೆಂಬ ಇಚ್ಛೆ ಇದೆ ಎಂದು. ಅದಕ್ಕೆ ವಂದನ ಹೇಳಿದಳು "ಅಶೋಕಬಾಬು, ಇವೆಲ್ಲ ಕುಸಂಸ್ಕಾರ. ಕಣ್ಣಿನಿಂದ ನೋಡಿದ ಮಾತ್ರಕ್ಕೆ ನಿಮ್ಮ ಜಾತಿ ಹೊರಟು ಹೋಗುತ್ತೆ" ಎಂದು. ಅದಕ್ಕೆ ಹೇಳಿದೆ–ನಿನ್ನ ಜಾತಿ ಹೊರಟು ಹೋಗದಿದ್ದರೆ ನನ್ನದೂ ಹೊರಟು ಹೋಗುವುದಿಲ್ಲ. ಹೊರಟೇ ಹೋಗುವುದಾದರೆ ಇಬ್ಬರದೂ ಹೋಗಲಿ. ಅದರಲ್ಲಿ ನನ್ನದೇನೂ ಅಡ್ಡಿಯಿಲ್ಲ, ಅಂತ.

ವಂದನ ಹೇಳಿದಳು—"ನಿಮಗೆ ಅದರಲ್ಲಿ ವಿಶ್ವಾಸವಿಲ್ಲ. ನೋಡಿ ಮನಸ್ಸಿನಲ್ಲಿ ನಗುವಿರಿ"

ನಾನು ಕೇಳಿದೆ 'ಏನು ನೀವು ಅದರಲ್ಲಿ ವಿಶ್ವಾಸವನ್ನಿಟ್ಟಿದ್ದೀರ?' ಅಂತ. ಅದಕ್ಕೆ "ಇಲ್ಲ, ವಿಶ್ವಾಸವಿಲ್ಲ ಆದರೆ ಮುಖರ್ಜಿಯವರು ಅದರಲ್ಲಿ ವಿಶ್ವಾಸವನ್ನಿಟ್ಟಿದ್ದಾರೆ. ಒಂದಲ್ಲ ಒಂದು ದಿನ ನಾನೂ ಅದರಲ್ಲಿ ವಿಶ್ವಾಸ ವನ್ನಿಡಬಹುದೆಂದು ಆಸೆ ಇದೆ' ಎಂದು ಉತ್ತರ ಕೊಟ್ಟಳು. ವಿಪ್ರದಾಸ ಬಾಬು, ವಂದನ ತಮ್ಮನ್ನು ಮನಸ್ಸಿನಲ್ಲಿ ಪೂಜಿಸುತ್ತಾಳೆ. ಇಷ್ಟು ಭಕ್ತಿ ಈ ಪ್ರಪಂಚದಲ್ಲಿ ಇನ್ನಾರ ವಿಷಯದಲ್ಲೂ ಅವಳಿಗಿರಲಾರದು."

ವಿಪ್ರದಾಸನಿಗೆ ಇದು ಗೊತ್ತಿಲ್ಲದ ಹೊಸ ವಿಷಯವಲ್ಲ. ಆದರೆ ಬೇರೆಯವರ ಬಾಯಿಂದ ಅದನ್ನು ಕೇಳಿ ಅವನ ಮುಖ ವಿವರ್ಣ ವಾಯಿತು, ಕ್ಷಣಕಾಲ ಸುಮ್ಮನಿದ್ದು ಅನಂತರ ಕೇಳಿದ—"ನಿಮ್ಮ ವಿವಾಹದ ಮಾತುಕತೆ ನಡೆಯುತ್ತಿತ್ತು ಅಲ್ಲವೆ? ಅದೇನು ನಿಶ್ಚಯ ವಾಯಿತೆ? ವಂದನ ಒಪ್ಪಿಗೆ ಕೊಟ್ಟಳೆ?"

"ಇಲ್ಲ, ಆದರೆ ಒಲ್ಲೆನೆಂದೂ ಹೇಳಿಲ್ಲ"

"ಹಾಗಾದರೆ ಇನ್ನೂ ಆಶೆ ಇದೆ ಅಶೋಕಬಾಬು. ಮೌನ ಅನೇಕ ಕಡೆ ಅರ್ಧ ಸಮ್ಮತಿಯನ್ನು ಸೂಚಿಸುತ್ತದೆ."

ಅಶೋಕನು ಕ್ಷಣಕಾಲ ಕೃತಜ್ಞ ದೃಷ್ಟಿಯಿಂದ ಅವನ ಕಡೆ ನೋಡುತ್ತಿದ್ದು ಅನಂತರ ಹೇಳಿದ—"ಅದು ಅಸಮ್ಮತಿಯನ್ನೂ ಸೂಚಿಸ ಬಹುದು. ಕಡೆಯಪಕ್ಷ ಸ್ವತಃ ನಾನು ಅದೇ ನಿಜವೆಂದು ಯೋಚಿಸುತ್ತಿದ್ದೇನೆ" ಕೆಲವು ನಿಮಿಷ ಸುಮ್ಮನಿದ್ದು ಮಾತು ಮುಂದುವರಿಸಿದ—ಒಂದು ಅಡ್ಡಿ ಏನೂ ಅನ್ನುತ್ತೀರೊ ನಾನು ಬಡವ. ವಂದನ ಐಶ್ವರ್ಯವಂತರ ಮಗಳು. ಐಶ್ವರ್ಯದ ಮೇಲೆ ನನಗೆ ಆಸೆ ಇಲ್ಲಾಂತ ಹೇಳಲಾರೆ. ಆದರೆ ನಮ್ಮ ಅತ್ತೆಯಂತೆ ನನಗೆ ಅದೊಂದೇ ಮುಖ್ಯವಲ್ಲ. ಆದರೆ ನಾನು ಅತ್ತೆಯ ಜೊತೆ ಸೇರಿ ಈ ಮದುವೆಗಾಗಿ ಷಡ್ಯಂತ್ರವನ್ನು ರಚಿಸಿಲ್ಲವೆಂದು ಅವಳಿಗೆ ತಿಳಿಸುವ ಬಗೆ ಹೇಗೆ?"

ಈ ಯುವಕನ ವಿಚಾರವಾಗಿ ವಿಪ್ರದಾಸನು ಸದಯಕಂಠದಿಂದ ಹೇಳಿದ—"ನಿಜವಾಗಿಯೂ ಸೋದರತ್ತೆಯು ಷಡ್ಯಂತ್ರದಲ್ಲಿ ಸೇರಿಲ್ಲದ ಪಕ್ಷಕ್ಕೆ ಒಂದಲ್ಲ ಒಂದು ದಿನ ವಂದನ ಅದನ್ನು ತಾನಾಗಿಯೇ ತಿಳಿದುಕೊಳ್ಳುತ್ತಾಳೆ ಆಗ ಅವಳು ಪ್ರಸನ್ನಳಾಗುವುದರಲ್ಲಿ ಸಂಶಯವಿಲ್ಲ; ಮತ್ತು ಐಶ್ವರ್ಯದಿಂದೇನೂ ಅಡ್ಡಿಯಾಗುವುದಿಲ್ಲ."

"ನೀವು ಹೇಳಿದುದು ನಿಜವಾಗಿಯೂ ಸಂಭವವೆ?" ಅಶೋಕನ ಕಂಠಸ್ವರದಲ್ಲಿ ಆಶೆ ತುಂಬಿತ್ತು.

ಈ ಪ್ರಶ್ನೆಗೆ ಉತ್ತರವನ್ನು ಕೊಡಲು ವಿಪ್ರದಾಸ ಹಿಂದುಮುಂದು ನೋಡಲು ಪ್ರಾರಂಭಿಸಿದ ಸ್ವಲ್ಪ ಹೊತ್ತು ಯೋಚಿಸಿ ಅನಂತರ "ನೋಡಿ, ಅವಳ ವಿಚಾರವಾಗಿ ನನಗೆ ತಿಳಿದಿರುವ ಮಟ್ಟಿಗೆ ಅದು ಸಂಭವವೆಂದು ತೋರುತ್ತವೆ" ಎಂದು ಉತ್ತರ ಕೊಟ್ಟ. ಅಶೋಕ—"ನನಗೇನನ್ನಿಸುತ್ತೆ ಗೊತ್ತಿದೆಯೇ? ಅವಳ ಪ್ರಸನ್ನತೆಗಿಂತ ನನಗೆ ತಮ್ಮ ಪ್ರಸನ್ನತೆ ಹೆಚ್ಚು ಆವಶ್ಯಕ. ಅದೊಂದು ದೊರೆತರೆ ಸಾಕು, ಅಂದಿನಿಂದ ಈ ಪ್ರಪಂಚದಲ್ಲಿ ನನಗೆ ದೊರೆಯದ ವಸ್ತುವೇ ಇರುವುದಿಲ್ಲವೆಂದು ನನ್ನ ನಂಬಿಕೆ."

ವಿಪ್ರದಾಸ ನಗುತ್ತ ಹೇಳಿದ—"ನಾನು ಪ್ರಸನ್ನನಾಗಿರುವೆನೆಂದು ತಿಳಿದು ಅವಳು ತನ್ನ ಗಂಡನನ್ನು ಆರಿಸಿಕೊಳ್ಳುವಳೇ? ಚೆನ್ನಾಗಿದೆ. ನಿಮಗೆ ಇದನ್ನು ಹೇಳಿದವರಾರು? ವಂದನ ಸ್ವತಃ ಹೇಳಿದಳೊ? ಅವಳೇ

ಹೇಳಿದ್ದರೆ ಖಂಡಿತ ನಿಮ್ಮನ್ನು ಹಾಸ್ಯಮಾಡಬೇಕೆಂದೇ ಹೇಳಿರಬೇಕು. ಈ ವಿಷಯವಾಗಿ ಇದು ಹೊರತು ನನಗೆ ಬೇರೆ ಏನೂ ತೋರುವುದಿಲ್ಲ."

"ಇಲ್ಲ ಇದು ಹಾಸ್ಯ ಅಥವ ಕುಚೋದ್ಯವಲ್ಲ. ನಿಜವಾಗಿಯೂ ಹೌದು"

"ನಿಮಗೆ ಯಾರೂ ಹೇಳಿದರು ?"

ಅಶೋಕ ಕ್ಷಣಕಾಲ ಸುಮ್ಮನಿದ್ದು ಹೇಳಿದ—"ವಿಪ್ರದಾಸಬಾಬು, ಇವೆಲ್ಲ ಬಾಯಿಬಿಟ್ಟು ಹೇಳುವ ಮಾತಲ್ಲ. ಆ ದಿನ ಚಿಕ್ಕಮ್ಮನ ಜೊತೆಯಲ್ಲಿ ಜಗಳವಾಡಿ ನನ್ನ ಕೋಣೆಗೆ ಬಂದಳು—ಎಂದೆಂದೂ ಅವಳು ಹಾಗೆ ಮಾಡಿದವಳು. ಒಂದು ಕುರ್ಚಿಯನ್ನೆಳೆದುಕೊಂಡು ನನ್ನ ಹತ್ತಿರ ಕುಳಿತುಕೊಂಡಳು. 'ನನ್ನನ್ನು ಬೊಂಬಾಯಿಗೆ ಬಿಟ್ಟು ಬರಬೇಕು' ಎಂದು ಹೇಳಿದಳು. ಆಗಲಿ, ಅಪ್ಪಣೆ ಕೊಟ್ಟ ಕೂಡಲೆ ಹೊರಡಲು ಸಿದ್ಧನಾಗಿದ್ದೇನೆ ಅಂದೆ. ಆಗ ಅವಳು ಹೇಳಿದಳು 'ಈಗ ಸದ್ಯಕ್ಕೆ ಬಲರಾಮಪುರಕ್ಕೆ ಹೋಗುತ್ತಿದ್ದೇನೆ. ಸಮಯಬಂದಾಗ ಹೇಳುತ್ತೇನೆ' ಅಂತ. 'ಹೇಳು. ಆದರೆ ವ್ಯರ್ಥವಾಗಿ ಚಿಕ್ಕಮ್ಮನ ಜೊತೆಯಲ್ಲೇಕೆ ಜಗಳವಾಡಿ ರೇಗಿಸಿದೆ ಹೇಳು. ಪೂಜೆಪಾಠ, ಹೋಮಯಜ್ಞ ದೇವರುದಿಂಡರು ಇವುಗಳ ವಿಷಯದಲ್ಲಿ ವಾಸ್ತವವಾಗಿ ನಿನಗೆ ನಂಬಿಕೆ ಇಲ್ಲ. ಅಂದಮೇಲೆ ರೇಗಿಸಿದ್ದೇಕೆ? ಎಂತ ಕೇಳಿದೆ. ಅದಕ್ಕೆ ಅವಳು ಹೇಳಿದಳು—ನಂಬಿಕೆ ಇಟ್ಟರೆ ಬದುಕಿದೆ ಅಂತ. 'ಹಾಗೇಕೆ ಹೇಳುತ್ತೀ ವಂದನ, ಅಂದೆ' ಅವಳು ಹೇಳಿದಳು 'ಸುಳ್ಳು ಹೇಳಲಿಲ್ಲ ಅಶೋಕಬಾಬು. ಅವರಂತೆ ಆ ವಿಚಾರಗಳನ್ನು ಪೂರ್ಣವಿಶ್ವಾಸದಿಂದ ಗ್ರಹಿಸಿದರೆ ನಾನೂ ಧನ್ಯಳಾಗುತ್ತೇನೆ. ಮುಖರ್ಜಿಯವರು ಹಾಸಿಗೆ ಹಿಡಿದು ಮಲಗಿದಾಗ ನಾನು ಅವರ ಶುಶ್ರೂಷೆ ಮಾಡಿದ್ದೇನೆ. ಅದಕ್ಕೆ ಪ್ರತಿಫಲವಾಗಿ ಎಂದಾದರೂ ಅವರಿಂದ ವಿಶ್ವಾಸದ ವರವನ್ನು ಕೇಳುತ್ತೇನೆ." ಅಂತ. ಸರಿ ಆಮೇಲೆ ನಿಮ್ಮ ಮಾತು ಪ್ರಾರಂಭವಾಯಿತು. ಯಾರಮೇಲಾದರೂ ಅಷ್ಟು ಶ್ರದ್ಧೆ ಇಡುವುದೂ ಸಾಧ್ಯ, ಒಬ್ಬರ ಶುಭಾಕಾಂಕ್ಷೆಯಲ್ಲಿ ಸದಾ ಯಾರಾದರೂ ಮಗ್ನರಾಗಿರಬಹುದು ಎಂದು ಇದಕ್ಕೆ ಮೊದಲು ನಾನು ಯೋಚಿಸಿ ಸಹ ಇರಲಿಲ್ಲ. ಮಾತು ಮಾತಿನಲ್ಲಿ ಅವಳು ಒಂದು ದಿನ ಇಲ್ಲಿ ನಡೆದ

ಒಂದು ಸಣ್ಣ ಘಟನೆಯನ್ನು ವರ್ಣಿಸಿದಳು. ನಿಮಗೆ ಆಗ ಮೈಯಲ್ಲಿ ಚೆನ್ನಾಗಿರಲಿಲ್ಲವಂತೆ. ಅವಳೇ ನಿಮ್ಮ ಸಂಧ್ಯಾವಂದನೆ ಪೂಜೆ ಇವುಗಳಿಗೆ ಅಣಿಮಾಡುತ್ತಿದ್ದಳಂತೆ. ಆಗ ಒಂದು ದಿನ ಬಹಳ ಹೊತ್ತಾದುದರಿಂದ ಗಡಿಬಿಡಿಯಲ್ಲಿ ಕಾಲಿಗೆ ಏನೊ ತಗುಲಿದಂತಾಯಿತಂತೆ. ಇದೇನು ಮಹ. ಇದರಿಂದ ಅವರ ಪೂಜೆ ಕೆಟ್ಟುಹೋಗುವುದಿಲ್ಲ ಎಂದು ಎಷ್ಟೆಷ್ಟು ಸಮಾಧಾನಮಾಡಿಕೊಂಡರೂ ಮನಸ್ಸು ಮಾತ್ರ ಅದಕ್ಕೆ ಒಪ್ಪಲಿಲ್ಲ. ಎಲ್ಲಿಯೂದರೂ ನಿಮ್ಮ ಕಾರ್ಯಕ್ಕೆ ವಿಘ್ನವಾದರೆ? ಅದಕ್ಕೆ ಎರಡನೇಸಲ ಸ್ನಾನಮಾಡಿ ನಿಮ್ಮ ಪೂಜೆಗೆ ಸಿದ್ಧಪಡಿಸಿವಳಂತೆ. ಆದರೆ ಆ ದಿನ ನೀವು ಬಹಳ ಸಿಟ್ಟುಗೊಂಡು 'ವಂದನ, ನೀನು ಬೆಳಗ್ಗೆ ಏಳಲಾರದೆ ಹೋದರೆ ಅನ್ನದಾಗೆ ಹೇಳು, ಅವಳೇ ಪೂಜೆಗೆ ಸಿದ್ಧಮಾಡಲಿ ಅಂತ ಹೇಳಿದರಂತೆ. ಇದೆಲ್ಲ ನಿಮಗೆ ಜ್ಞಾಪಕವಿದೆಯೆ?''

ವಿಪ್ರದಾಸ—“ ಇದೆ.”

ಅಶೋಕ—“ಹೀಗೆ ಎಂದೆಂದೋ ನಡೆದ ಸಣ್ಣಪುಟ್ಟ ಮಾತುಗಳನ್ನು ಹೇಳುವುದರಲ್ಲಿ ರಾತ್ರಿಯಾಯಿತು. ಕೊನೆಗೆ ಅವಳು ಹೇಳಿದಳು— “ಚಿಕ್ಕಮ್ಮ ಕುಸಂಸ್ಕೃತರು ಅನ್ನುತ್ತ ಅವರನ್ನು ಹಾಸ್ಯ ಮಾಡುತ್ತಾಳಲ್ಲ ಒಂದು ದಿನ ನಾನೂ ಹಾಗೇ ಮಾಡಿದ್ದೆ—ಆದರೆ ಈಗ ನೋಡಿ ನನಗೆ ಯಾವುದು ಸರಿ ಯಾವುದು ತಪ್ಪು ಎಂದು ತಿಳಿದುಕೊಳ್ಳುವುದು ಒಂದು ಸಮಸ್ಯೆಯಾಗಿದೆ. ಊಟತಿಂಡಿ ಇವುಗಳ ಮಾತಲ್ಲ. ಹುಟ್ಟಿದಾಗಿನಿಂದ ಬಂದ ಅಭ್ಯಾಸ, ಅದರಲ್ಲೇನೂ ದೋಷವಿಲ್ಲವೆಂದು ತೋರುತ್ತದೆ. ಆದರೂ ಈಗ ಸ್ವಲ್ಪ ಸಂಕೋಚವಾಗುತ್ತಿದೆ. ನನ್ನ ಬುದ್ಧಿಗೆ ನಾನೇ ನಾಚುತ್ತೇನೆ; ಜನಗಳಿಂದ ಮರೆಮಾಚಲು ಯತ್ನಿಸುತ್ತೇನೆ. ಆದರೆ ಇದು ಅವರಿಗೆ ಸರಿಬೀಳುವುದಿಲ್ಲವೆಂಬ ಯೋಚನೆ ಬಂದರೆ 'ಸಾಕು ಮನಸ್ಸು ಅದು ಅಸಹ್ಯವೆಂದು ಹೇಳುತ್ತದೆ ಆಗ ಆ ಕಡೆ ಮುಖ ಸಹ ತಿರುಗಿಸಲಾರೆ.”

ಕೇಳುತ್ತಿದ್ದಂತೆಯೆ ವಿಪ್ರದಾಸನ ಮೋರೆ ಸಪ್ಪಗಾಯಿತು. ಎಷ್ಟೋ ನಗಬೇಕೆಂದು ಪ್ರಯತ್ನಪಟ್ಟು ನಗುತ್ತ 'ಏನು ವಂದನ ಊಟ ತಿಂಡಿ ಇವುಗಳ ವಿಚಾರದಲ್ಲಿ ಮಡಿ ಮೈಲಿಗೆ ನೋಡುತ್ತಿದ್ದಾಳೆಯೆ? ಮೊನ್ನೆ ಮೊನ್ನೆ ಅವಳು ಇಲ್ಲಿಗೆ ಬಂದಾಗ ಬಹಳ ಜಂಬದಿಂದ ಹೇಳಿದ್ದಳು

ಚಿಕ್ಕಮ್ಮನ ಮನೆಗೆ ಹೋದಾಗಿನಿಂದ ತನ್ನ ಸಮಾಜ ಮತ್ತು ತನ್ನ ಬುದ್ಧಿಗೆ ಸರಿಹೋಗುವಂತೆ ವರ್ತಿಸುವ ಮನಸ್ಸನ್ನು ಪಡೆದೆನೆಂದು. ಮುಖರ್ಜಿ ಪರಿವಾರದ ಸಾವಿರಾರು ಕೃತ್ರಿಮ ವ್ಯವಹಾರದಿಂದ ಬಿಡುಗಡೆ ಹೊಂದಿ ಬದುಕಿದೆ ಎಂದು!"

ಅಶೋಕನು ಆಶ್ಚರ್ಯಚಕಿತನಾಗಿ ಏನನ್ನೋ ಕೇಳಬೇಕೆಂದಿದ್ದ. ಅಷ್ಟರಲ್ಲಿ ವಿಘ್ನವಾಯಿತು. ಪರದೆಯನ್ನು ಸರಿಸುತ್ತ ವಂದನ ಒಳಕ್ಕೆ ಬಂದು ಹೇಳಿದಳು—"ಮುಖರ್ಜಿಸಾಹಬ್, ಎಲ್ಲ ಸಿದ್ಧಮಾಡಿಟ್ಟು ಹೋಗುತ್ತೇನೆ. ನಾಳೆ ಬೆಳಿಗ್ಗೆ ಒಂಬತ್ತು ಗಂಟೆ ರೈಲಿಗೆ ಹೋಗಬೇಕು. ಪೂಜೆ ಗೀಜೆ ಏನೂ ಮಾಡಬೇಕಾಗಿದ್ದರೂ ಅಷ್ಟರಲ್ಲೇ ಮುಗಿಸಿ. ಆ ದೇವರು ಎಷ್ಟು ಡಂಭಾಚರಣೆಯನ್ನು ನಿಮ್ಮ ಹಣೆಯಲ್ಲಿ ಬರೆದಿದ್ದಾನೋ. ಅವನೊಬ್ಬನೇ ಬಲ್ಲ! ವಿಪ್ರದಾಸ ನಕ್ಕ—"ಹಾಗೆ ಇರಬಹುದು ಪಾಪ." "ಪಾಪ ಏನು ಬಂತು ಪುಣ್ಯ. ನಿಮ್ಮ ಈ ಡಂಭಾಚಾರವನ್ನು ಯಾರಾದರೂ ದೂರಮಾಡಬಾರದೇ ಎಂದು ಯೋಚಿಸುತ್ತೇನೆ. ಇಲ್ಲಿ ನೋಡಿ—ನಾಳೆ ಬೆಳಿಗ್ಗೆ ಊಟಕ್ಕೂ ಏರ್ಪಾಡು ಮಾಡಿದ್ದೇನೆ—ನಾನೇ ಬಂದು ಬಡಿಸುತ್ತೇನೆ. ಅನಂತರ ಬಟ್ಟೆಬರೆ ಹಾಕಿಕೊಂಡು, ತಮ್ಮನ್ನು ಜೊತೆಯಲ್ಲೇ ಎಳೆದುಕೊಂಡು ಹೋಗುತ್ತೇನೆ. ಪಾಪ, ಖಾಹಿಲೆ ಮನುಷ್ಯ ನಿತ್ರಾಣ. ಆದ್ದರಿಂದ—ಅಶೋಕಬಾಬು ಇನ್ನು ಹೋಗೋಣ—ಮುಖರ್ಜಿಸಾಹಬ್ ಇನ್ನು ಮೇಲೆ ನಿಮ್ಮ ಪಾದಧೂಳಿಯನ್ನು ತಲೆಗೆ ಹಚ್ಚಿಕೊಳ್ಳುವುದಿಲ್ಲ. ಅದು ಕುಸಂಸ್ಕಾರ. ಸಭ್ಯಸಮಾಜದಲ್ಲಿ ಹಿಡಿಯಲಾರದ ಖೋಟಾನಾಣ್ಯ." ಇಷ್ಟು ಹೇಳಿ ನಗುತ್ತ ಅವಳು ತನ್ನ ಎರಡು ಕೈಗಳನ್ನೂ ಎತ್ತಿ ನಮಸ್ಕರಿಸಿ ಕೋಣೆಯಿಂದ ಹೊರಟು ಹೋದಳು.

೨೨

ಮರುದಿನ ಬೆಳಿಗ್ಗೆ ಎಲ್ಲರೂ ಬಲರಾಮ ಪುರಕ್ಕೆ ಹೊರಟರು. ಮನೆಗೆ ಹೋಗಿ ನೋಡಿದರೆ ದ್ವಿಜದಾಸ ರಾಜಸೂಯ ಯಾಗಕ್ಕೆ ಸಿದ್ಧಮಾಡಿದ್ದಾನೇನೋ ಎಂದು ತೋರುತ್ತಿತ್ತು. ಎದುರಿನ ಬಯಲಿನಲ್ಲಿ ಸಾಲುಸಾಲಾಗಿ ಗುಡಿಸಲು ಕಟ್ಟಿದ್ದಾರೆ. ಮನೆಯಲ್ಲಿ ಜನ ಕಿಕ್ಕಿರಿದಿದೆ. ಇನ್ನೂ ಬರಬೇಕಾಗಿರುವ ಜನ ಇಷ್ಟೆಂದು ಹೇಳುವುದೂ ಕಷ್ಟ.

ವಿಪ್ರದಾಸನನ್ನು ನೋಡಿದ ಕೂಡಲೆ ಅವನ ತಾಯಿ ಬೆಚ್ಚಿಬಿದ್ದು —'ಏನಪ್ಪ ಇದು, ಇಷ್ಟು ಬಡವಾಗಿದ್ದೀಯೆ. ಮೊದಲಿನ ಅರ್ಧಕೂಡ ಇಲ್ಲವಲ್ಲ ಈಗ! ' ಎಂದಳು.

ವಿಪ್ರದಾಸನು ಪಾದವನ್ನು ಮುಟ್ಟಿ ನಮಸ್ಕರಿಸಿ 'ಅಮ್ಮ ಇನ್ನೇನೂ ಹೆದರಿಕೆಯಿಲ್ಲ. ಇನ್ನು ಚೇತರಿಸಿಕೊಳ್ಳಲು ಹೆಚ್ಚುಕಾಲ ಹಿಡಿಯುವುದಿಲ್ಲ' ಎಂದನು.

"ಆದರೆ ಏನುಬೇಕಾದರೂ ಆಗಲಿ. ಇನ್ನು ನಿನಗೆ ಕಲ್ಕತ್ತೆಗೆ ಹೋಗಲು ಬಿಡುವುದಿಲ್ಲ. ಇನ್ನು ಮೇಲೆ ನೀನು ನನ್ನ ಕಣ್ಣಮುಂದೆಯೇ ಇರಬೇಕು."

ವಿಪ್ರದಾಸ್ ಸುಮ್ಮನೆ ನಸುನಗುತ್ತ ನಿಂತಿದ್ದನು.

ವಂದನ ದಯಾಮಯಿಗೆ ನಮಸ್ಕರಿಸಿದಳು. ಆಶೀರ್ವಾದ ಮಾಡುತ್ತ 'ಬಾಮ್ಮ ಬಾ. ಸುಖವಾಗಿ ನೂರುವರ್ಷ ಬಾಳಿ ಬದುಕು" ಎಂದಳು. ದಯಾಮಯಿ.

ಆದರೆ ಅವಳ ಕಂಠಸ್ವರದಲ್ಲಿ ಉತ್ಸಾಹವಿರಲಿಲ್ಲ. ಕೇವಲ ಶಿಷ್ಟಾಚಾರಕ್ಕೆ ಹರಸಿದಳೆಂದು ಎಲ್ಲರಿಗೂ ಗೊತ್ತಾಯಿತು. . . ಅವಳನ್ನು 'ಬಾ' ಎಂದು ಕರೆದಿರಲಿಲ್ಲ. ಅವಳು ತನ್ನ ಸ್ವಇಚ್ಛೆಯಿಂದ ಬಂದಿದ್ದಾಳೆ-ಎಂಬುದು ಮಾತ್ರ ದಯಾಮಯಿಗೆ ಗೊತ್ತು. ಅವಳು ಮೈತ್ರೇಯಿಯ ವಿಚಾರ ಪ್ರಾರಂಭಿಸಿದಳು. ಅವಳ ಗುಣ ಇಷ್ಟೆಂದು ಹೇಳುವುದು ಅಸಾಧ್ಯ. ಅವಳ ಗುಣಗಾನ ಮಾಡಿ ಮುಗಿಸುವುದು ಸಾವಿರ ಬಾಯುಳ್ಳ ಆದಿಶೇಷನಿಗೂ ಸಾಧ್ಯವಿಲ್ಲವೆಂಬುದು ದಯಾಮಯಿಯ ಭಾವನೆ. 'ಮೈತ್ರೇಯಿಗೆ ಎಲ್ಲ ಕೆಲಸ ಕಲಿಸಿದ್ದಾರೆ. ಅವಳಿಗೆ ಬಾರದ ಕೆಲಸವೇ ಇಲ್ಲ. ಸತಿಯ ಮೈಯಲ್ಲೂ ಚೆನ್ನಾಗಿಲ್ಲ. ಆದ್ದರಿಂದ ಕೆಲಸದ ಹೊರೆಯೆಲ್ಲ ಕೇವಲ ಮೈತ್ರೇಯಿಯೊಬ್ಬಳ ಮೇಲೆಯೇ ಬಿದ್ದಿದೆ. ಅದೃಷ್ಟ ಚೆನ್ನಾಗಿತ್ತು ಅವಳನ್ನು ಕರೆಸಿದೆ ಇಲ್ಲದಿದ್ದರೆ ಏನಾಗುತ್ತಿತ್ತೆಂದು ಯೋಚಿಸಲೂ ಭಯವಾಗುತ್ತದೆ" ಎಂದಳು ದಯಾಮಯಿ.

ವಿಪ್ರದಾಸ್ ಆಶ್ಚರ್ಯದ ದನಿಯಲ್ಲಿ 'ಏನಮ್ಮ ಹೀಗೆ ಹೇಳುತ್ತೀ' ಎಂದು ಕೇಳಿದ.

ದಯಾಮಯಿ 'ನಿಜಾಪ್ಪ ನಿಜ. ಅವಳ ಕೆಲಸ ಕಾರ್ಯ ನೋಡಿದರೆ ನನಗನ್ನಿಸುತ್ತೆ ನಿಮ್ಮ ತಂದೆ ನನ್ನ ಮೇಲೆ ಯಾವ ಹೊರೆ ಹೊರಿಸಿದ್ದರೊ ಅದರ ವಿಚಾರವಾಗಿ ಈಗ ಏನೂ ಯೋಚಿಸಬೇಕಾಗಿಲ್ಲ ಅಂತ. ನನ್ನ ಸೊಸೆಗೆ ಇಂಥ ನಾದಿನಿ ಸಿಕ್ಕರೆ ಎಲ್ಲ ಭಾರವನ್ನು ಸುಖವಾಗಿ ಹೊರುತ್ತಾಳೆ. ಅವುಗಳಲ್ಲಿ ಏನೊಂದು ಕುಂದೂ ಬರದಂತೆ ನೋಡಿಕೊಳ್ಳುತ್ತಾಳೆ ಈ ವರ್ಷಕ್ಕಂತೂ ಇನ್ನು ಸಾಧ್ಯವಿಲ್ಲ. ಬದುಕಿದ್ದರೆ ಮುಂದಿನ ವರ್ಷ ನಿಶ್ಚಿಂತೆಯಿಂದ ಕೈಲಾಸೇಶ್ವರನ ದರ್ಶನಕ್ಕೆ ಹೋಗುತ್ತೇನೆ.'

ವಿಪ್ರದಾಸ ಸುಮ್ಮನಿದ್ದ. ದಯಾಮಯಿಯ ಮಾತು ನಿಜವಿರಬಹುದು. ಮೈತ್ರೇಯಿ ಈ ಪ್ರಶಂಸೆಗೆ ಯೋಗ್ಯಳಾಗಿರಬಹುದು. ಆದರೂ ಯಶೋಗಾನಕ್ಕೂ ಒಂದು ಇತಿ ಮಿತಿ ಇದೆ. ಸಮಯಸಂದರ್ಭವನ್ನು ನೋಡಬೇಕಾಗುತ್ತದೆ. ಯಾವುದೋ ತಡೆಯಲಾರದ ಒಂದು ನಿಷ್ಠುರ ದೌರ್ಬಲ್ಯವು ಅವಳ ಗಂಭೀರ ಕೃತಿಯನ್ನು ತುಂಡರಿಸಿ ಬಿಟ್ಟಿದೆ. ಆದುದರಿಂದಲೇ ಅವಳ ವಿಷಯದಲ್ಲಿ ಸರಿಯಾದ ಇಂತಹ ಮಾತುಗಳು ಹೊರಬಿದ್ದವು. ಮಗನ ಮುಖದ ಕಡೆ ನೋಡಿದಾಗ ದಯಾಮಯಿಗೆ ತಾನು ಮಾಡಿದ ತಪ್ಪು ಗೊತ್ತಾಯಿತು. ಆದರೆ ಅದಕ್ಕೆ ಹೇಗೆ ಪ್ರತೀಕಾರ ಮಾಡಬೇಕೆಂದು ಅವಳಿಗೆ ಹೊಳೆಯಲಿಲ್ಲ. ಇತ್ತ ದ್ವಿಜದಾಸ್ ಕಾರ್ಯಭರದಲ್ಲಿ ಎಲ್ಲಿಗೋ ಹೋಗಿದ್ದ. ಅಣ್ಣ ಬಂದಿರುವ ಸಮಾಚಾರ ತಿಳಿದೊಡನೆ ಅವನು ಓಡಿಬಂದ.'

ಅವನನ್ನು ಕುರಿತು ವಿಪ್ರದಾಸ್ ಹೇಳಿದ—"ಒಳ್ಳೆ ದೊಡ್ಡ ಕಾರ್ಯವನ್ನೆ ಪ್ರಾರಂಭಿಸಿದ್ದೀಯೆ. ಹೇಗೆ ನಿಭಾಯಿಸಿಕೊಂಡು ಹೋಗುತ್ತೀ ?"

ದ್ವಿಜದಾಸ—ಈ ಹೊರೆಯನ್ನು ತಾವು ಹೊತ್ತುಕೊಳ್ಳಲಿಲ್ಲ. ನನ್ನ ಮೇಲೆ ಹೊರಿಸಿದ್ದೀರಿ. ಇನ್ನು ತಮಗೇಕೆ ಅದರ ಭಯ ? "

ವಂದನ ಇದಕ್ಕೆ ಉತ್ತರ ಕೊಟ್ಟಳು—"ಇಷ್ಟು ಭಾರಿ ಖರ್ಚಿಗೆ ಹಣ ರೈತರಿಂದ ವಸೂಲಾಗದಿದ್ದರೆ ಮೂಲಧನಕ್ಕೆ ಕೈ ಹಚ್ಚಬೇಕಾಗುವುದಲ್ಲ ಎಂದು ಇವರಿಗೆ ಹೆದರಿಕೆ. ದ್ವಿಜಬಾಬು ಹೆದರುವುದಕ್ಕೆ ಈ ಕಾರಣ ಸಾಲದೆ ?"

ಎಲ್ಲರೂ ಗಟ್ಟಿಯಾಗಿ ನಕ್ಕುಬಿಟ್ಟರು. ಈ ನಗುವಿನ ಮಧ್ಯೆ ದಯಾ

ಮಾಯಿಯಮನಸ್ಸು ಇಳಿದುಹೋಯಿತು. ಅವಳ ಮುಖದಮೇಲೆ ಹರ್ಷದ ಕುರುಹು ಕಂಡು ಬಂದಿತು. ಆದರೂ ಅವಳು ಕೃತ್ರಿಮ ರೋಷವನ್ನು ತೋರುತ್ತ 'ಇವನನ್ನು ಗೋಳು ಹೋಯ್ಯುವುದರಲ್ಲಿ ನೀನು ನಿನ್ನ ಅಕ್ಕನ ಹಾಗೆ ಅಂತ ತೋರುತ್ತೆ. ವಿಪಿನ್ ಪರಮ ಸಾತ್ವಿಕ. ಎಲ್ಲರೂ ಸೇರಿ ಸುಮ್ಮನೆ ಅವನನ್ನು ಹಂಗಿಸುತ್ತೀರಿ. ನಾನು ಇದನ್ನು ಸಹಿಸಲಾರೆ" ಎಂದಳು.

ವಂದನ—"ಸುಳ್ಳೆ ಹಂಗಿಸುತ್ತಿದ್ದರೆ ಅದು ಚುಚ್ಚುವುದಿಲ್ಲ. ಅಮ್ಮ ಅದಕ್ಕೆ ಸಿಟ್ಟು ಮಾಡಬಾರದು."

"ಇವನು ಸಿಟ್ಟು ಮಾಡುವುದೇ ಇಲ್ಲ. ಸುಮ್ಮನೆ ನಕ್ಕುಬಿಡು ತ್ತಾನೆ.' ಎಂದಳು ದಯಾಮಯಿ.

ವಂದನ—'ಅದಕ್ಕೂ ಒಂದು ಕಾರಣ ಇದೆ ಅಮ್ಮ. ಮುಗ್ಗರಿಸಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ ಅನ್ನೋ ಜಾತಿ ಇದು. ಅಲ್ಲವೆ ಮುಖರ್ಜಿ ಸಾಹೇಬ್?'

ವಿಪ್ರದಾಸನು ನಕ್ಕು "ಏಕಲ್ಲ? ಮೂರ್ಖರ ಮಾತಿಗೆ ಕೋಪಿಸಿ ಕೊಳ್ಳಬಾರದೆಂದು ಶಾಸ್ತ್ರದಲ್ಲಿ ಹೇಳಿದೆ"

ವಂದನ—"ಆದರೆ ನನ್ನ ಅಕ್ಕ ನನಗಿಂತಲೂ ದಡ್ಡಿ. ಬಹುಶಃ ನಿಮ್ಮ ಆ ಶಾಸ್ತ್ರದ ಬಲದಿಂದಲೇ ಎಲ್ಲರೂ ನಿಮ್ಮಲ್ಲಿಷ್ಟು ಭಕ್ತಿ ಇಟ್ಟಿದ್ದಾರೆಂತ ಕಾಣುತ್ತೆ"—ಇಷ್ಟು ಹೇಳಿ ನಗುತ್ತ ಮುಖವನ್ನು ಆ ಕಡೆ ತಿರುಗಿಸಿದಳು ದ್ವಿಜದಾಸನೂ ನಗುವನ್ನು ತಡೆಯಲು ಬೇರೆ ಕಡೆ ನೋಡ ಹತ್ತಿದನು. ದಯಾಮಯಿ ತಾನೂ ನಕ್ಕು ಮತ್ತೆ ಹೇಳಿದಳು—'ವಂದನ, ಎಂಥ ಕೆಟ್ಟಹುಡುಗಿಯೇ ನೀನು. ನಿನ್ನನ್ನು ಮಾತಿನಲ್ಲಿ ಯಾರೂ ಗೆಲ್ಲಲಾರರು.' —ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ ಗಂಭೀರ ದನಿಯಲ್ಲಿ ಹೇಳತೊಡಗಿದಳು.—"ಆದರೆ ನೋಡು ಮಗು, ನಮ್ಮ ಹಿಂದಿನವರು ರೈತರಿಗೆ ತೊಂದರೆ ಕೊಡುತ್ತಿರಲಿಲ್ಲವೆಂದು ಹೇಳುವುದಿಲ್ಲ. ಆದರೆ ನಿನಗೆ ಎಂದೋ ಹೇಳಿದ್ದೇನೆ ವಿಪಿನ್ ನನ್ನ ಪರಮಧಾರ್ಮಿಕನಾದ ಮಗ ಎಂತ. ಯಾವುದು ಅನ್ಯಾಯವೋ, ಯಾತರ ಮೇಲೆ ಅವನ ನ್ಯಾಯವಾದ ಹಕ್ಕಿಲ್ಲವೋ ಅವನ್ನು ಅವನು ಎಂದಿಗೂ ಮುಟ್ಟುವುದಿಲ್ಲ. ಆದರೆ ನನಗಿರೋ ಹೆದರಿಕೆಯೆಲ್ಲ ಈ ದ್ವಿಜು ಮೇಲೆ'

ವಿಪ್ರದಾಸನು ಪ್ರತಿಪಾದಿಸುತ್ತ—"ಇದು ನ್ಯಾಯವಾದ ಮಾತಲ್ಲವಮ್ಮ ದ್ವಿಜೂ ರೈತರಿಗೆ ಕಷ್ಟ ಕೊಡುವನೆ ? ರೈತರ ಪಕ್ಷವಹಿಸಿ ಒಮ್ಮೆ ಕಂದಾಯ ಕೊಡಬೇಡಿ ಎಂತ ನಮಗೆ ವಿರುದ್ಧವಾಗಿ ಕೆಲಸಮಾಡಿದನಲ್ಲಾ ಅದನ್ನು ನೀನು ಮರೆತುಬಿಟ್ಟೆಯ ?'

ತಾಯಿ—"ಜ್ಞಾಪಕವಿದೆ. ಮರೆತಿಲ್ಲ. ನ್ಯಾಯವಾಗಿ ಸಲ್ಲಬೇಕಾದುದನ್ನು ಕೊಡಬೇಡಿರೆಂದು ಯಾವನು ಹೇಳುತ್ತಾನೋ ಅವನೇ ಅನ್ಯಾಯವಾಗಿಯೂ ವಸೂಲು ಮಾಡಬಲ್ಲ. ಬೇರೆಯವರಿಂದ ಅದು ಸಾಧ್ಯವಿಲ್ಲ. ಅವನು ಬಹಳ ಕರುಣಾಳು-ಅದು ನನಗೂ ಗೊತ್ತಿದೆ. ಆದರೆ ಒಂದಲ್ಲ ಒಂದು ದಿನ ಅವನ ಕೈಯಲ್ಲಿ ರೈತರು ಬಹಳ ತೊಂದರೆ ಪಡುತ್ತಾರೆಂದು ತಿಳಿ.'

"ಇಲ್ಲವಮ್ಮ ಅವನು ಎಂದೆಂದಿಗೂ ಅವರಿಗೆ ತೊಂದರೆ ಕೊಡುವುದಿಲ್ಲ"

"ಅವನನ್ನು ಸರಿಯಾದ ಮಾರ್ಗದಲ್ಲಿಡಲು ನಿನಗೊಬ್ಬನಿಗೆ ಸಾಧ್ಯ. ಇಲ್ಲದಿದ್ದರೆ ಒಂದಿಲ್ಲೊಂದು ದಿನ ಅವನೂ ಹಾಳಾಗುತ್ತಾನೆ; ಇತರರನ್ನೂ ಹಾಳುಮಾಡುತ್ತಾನೆ."

ದ್ವಿಜದಾಸ ಇಲ್ಲಿವರೆಗೆ ಸುಮ್ಮನಿದ್ದು ಈಗ ಉತ್ತರ ಕೊಟ್ಟ—'ಅಮ್ಮ ಕಡೆಗೆ ಹೇಳಿದ್ದು ಸರಿಯಾಗಲಿಲ್ಲ. ಸತಃ ಹಾಳಾಗುತ್ತೇನೆಂಬ ಮಾತು ನಿಜವಾದರೂ ಆಗಬಹುದು. ಆದರೆ ಇನ್ನೊಬ್ಬರನ್ನು ನಾನು ಹಾಳು ಮಾಡುವುದಿಲ್ಲ. ಅಷ್ಟು ಮಾತ್ರ ಚೆನ್ನಾಗಿ ಗೊತ್ತಿರಲಿ.'

"ದ್ವಿಜು, ನೀನು ಹಾಳಾದರೆ ಮಾತ್ರ ನಮಗೆ ಸಂತೋಷವೇ ? ಒಟ್ಟಿನಲ್ಲಿ ನಿನ್ನನ್ನು ಸನ್ಮಾರ್ಗದಲ್ಲಿ ಕೊಂಡೊಯ್ಯಲು ಒಬ್ಬರು ಬೇಕು.'

"ಆ ಮಾತು ಸ್ಪಷ್ಟವಾಗಿ ಹೇಳಿಬಿಟ್ಟರೆ ಎಲ್ಲರ ಯೋಚನೆಯೂ ದೂರವಾಗುತ್ತದೆ. ನನಗೆ ದಾರಿ ತೋರುವವರು ಒಬ್ಬರು ಬೇಕೇಬೇಕು. ಸರಿ ಅದಕ್ಕೆ ಒಬ್ಬರನ್ನಾಗಲೇ ಗೊತ್ತುಮಾಡಿಟ್ಟಿದ್ದಾಗಿದೆ."

"ಒಂದು ವೇಳೆ ಗೊತ್ತುಮಾಡಿಟ್ಟಿರುವುದು ನಿಜವೇ ಆದರೆ ಅದು ನಿನ್ನ ಭಾಗ್ಯ ಅಂದುಕೋ"

ಈ ತರ್ಕ ವಿತರ್ಕದ ಹಿನ್ನೆಲೆ ಏನೆಂದು ಈಗ ಎಲ್ಲರಿಗೂ ಸ್ಪಷ್ಟವಾಯಿತು.

“ಇಷ್ಟು ದೊಡ್ಡ ಕಾಂಡ ರಚಿಸಿದ್ದೀಯಲ್ಲ, ಇದರಲ್ಲಿ ಯಾವ ಮಾತನ್ನಾದರೂ ಕೇಳಿದೆಯೊ? ಹೇಳಿಬಿಟ್ಟೆ ‘ಅಣ್ಣನವರ ಅಪ್ಪಣೆಯಾಗಿದೆ.” ಅಂತ.

ಏನು ಅಣ್ಣ ಅಶ್ವಮೇಧವನ್ನು ಮಾಡು ಎಂತ ಹೇಳಿದ್ದನೇ? ಈಗ ಇದನ್ನು ನಿಭಾಯಿಸುವವರು ಯಾರು ಹೇಳು? ಅದೃಷ್ಟ ನೆಟ್ಟಗಿತ್ತು, ಮೈತ್ರೇಯಿ ಬಂದಳು. ಈಗ ಅವಳದೊಂದೇ ಭರವಸೆ.”

ದ್ವಿಜದಾಸ:–“ಅಮ್ಮ ಮೊದಲು ಇಲ್ಲಿಯ ಕೆಲಸ ಮುಗಿಯಲಿ. ಆಮೇಲೆ ಯಾರಿಗೆ ಬೇಕಾದರೂ ಯೋಗ್ಯತಾಪತ್ರವನ್ನು ಬರೆದುಕೊಡ ಬಹುದು. ಆದಕ್ಕೆ ನಾನು ಕೊಂಚವೂ ಅಡ್ಡಿ ತಂದೊಡ್ಡುವುದಿಲ್ಲ. ಈಗಿನಿಂದಲೆ ಆದಕ್ಕೇನು ಅವಸರ?’

“ಆ ಯೋಗ್ಯತಾಪತ್ರಕ್ಕೆ ರುಜು ಹಾಕುವವರು ಯಾರು? ತೃತೀಯ ಪುರುಷರಾದ ದ್ವಿಜದಾಸರಂತೂ ಅಲ್ಲತಾನೆ?”—ವಂದನ ಕೇಳಿದಳು.

“ಇಲ್ಲ ಇಲ್ಲ. ತೃತೀಯ ಪುರುಷನಿಗೆ ಆ ಯೋಗ್ಯತೆ ಏಕೆ ಬರ ಬಾರದು”!

ಹೇಳಿದ ಇಬ್ಬರೂ ಗಟ್ಟಿಯಾಗಿ ನಕ್ಕುಬಿಟ್ಟರು.

ವಿಪ್ರದಾಸ್ ಮತ್ತು ಅವನ ತಾಯಿ ಒಬ್ಬರ ಮುಖ ಒಬ್ಬರು ನೋಡು ತ್ತಿದ್ದರು. ಆವರಿಗೇನೂ ಅರ್ಥವಾಗಲಿಲ್ಲ.

ಅಷ್ಟರಲ್ಲಿ ಅನ್ನದ ಬಂದು “ವಂದನಮ್ಮನವರೆ, ಬಾಬು ಔಷಧಿಯ ನ್ನಿಟ್ಟಿದ್ದರಲ್ಲಾ ಆ ಕಾಗದದ ಪೆಟ್ಟಿಗೆ ಸಿಕ್ಕಲಿಲ್ಲ. ಕಳೆದು ಹೋಯಿತೊ ಏನೊ”

ವಂದನ:—“ಇಲ್ಲ ಕಳೆದುಹೋಗಿಲ್ಲ. ಕಲ್ಕತ್ತೆಯಲ್ಲಿ ಉಳಿದು ಹೋಯಿತು.

ದಯಾಮಯಿ ಹೆದರಿದವಳಂತೆ ‘ಈಗ ಏನುಮಾಡುವುದು ವಂದನ? ಇದೊಳ್ಳೆ ದೊಡ್ಡ ತೊಂದರೆ ಬಂತಲ್ಲ.”

ವಂದನ—“ಏನೂ ಆಗಿಲ್ಲಮ್ಮ ಬರುವಾಗ ನಾನೇ ಆದನ್ನು ಬಿಟು ಬಂದಿದ್ದೇನೆ.”

“ನೀನೇ ಬಿಟ್ಟು ಬಂದೆಯ? ಕಾರಣ?”

"ಏನಿಲ್ಲ ಔಷಧಿ ಬೇಕಾದಷ್ಟು ಕುಡಿದಿದ್ದಾರೆ ಇನ್ನು ಸಾಕು ಅಂತ. ಆಗ ಅಮ್ಮ ಹತ್ತಿರ ಇರಲಿಲ್ಲ. ಔಷಧಿ ಬೇಕಾಗಿತ್ತು. ಈಗ ಔಷಧಿ ಪಥ್ಯ ಏನೂ ಇಲ್ಲದೆ ಹುಷಾರಾಗುತ್ತಾರೆ. ಹೆಚ್ಚು ದಿನ ಸಹ ಬೇಡ.'

ಅವಳ ಈ ಮಾತು ದಯಾಮಯಿಗೆ ಬಹಳ ರುಚಿಸಿತು. ಅವಳು ಹೇಳಿದಳು—

ಆದರೂ ನೋಡು, ಇದೋ ಹಳ್ಳಿ. ಡಾಕ್ಟರೊ ಅಥವ ವೈದ್ಯರೊ ಯಾರೂ ಸಿಕ್ಕುವುದಿಲ್ಲ. ಅಕಸ್ಮಾತ್ತಾಗಿ ಬೇಕಾದರೆ....?

ಅನ್ನದ ಮಧ್ಯದಲ್ಲಿ ಬಾಯಿ ಹಾಕಿದಳು–" ಬೇಕಾಗುವುದಿಲ್ಲ ಅಮ್ಮ. ಬೇಕೇ ಆಗಿದ್ದರೆ ಅವರು ಎಂದಿಗೂ ಅದನ್ನು ಮರೆತು ಬರುತ್ತಿರಲಿಲ್ಲ. ಡಾಕ್ಟರ್–ವೈದ್ಯ ಎಲ್ಲರಿಗಿಂತಲೂ ವಂದನಮ್ಮನವರಿಗೆ ಹೆಚ್ಚು ಗೊತ್ತಿದೆ.'

ದಯಾಮಯಿ ಪ್ರಶಂಸಾಪೂರ್ಣದೃಷ್ಟಿಯಿಂದ ವಂದಳನ ಕಡೆ ನೋಡುತ್ತಿದ್ದಳು. ಆಗ ವಂದನ ಹೇಳಿದಳು. ಅಮ್ಮ ಒಂದಕ್ಕೆರಡು ಹೇಳುವ ಸ್ವಭಾವ ಅನ್ನದಳದು. ನೋಡಿ ನನಗೆ ಏನೇನೂ ಗೊತ್ತಿಲ್ಲ. ಏನಾದರೂ ಅಲ್ಪ ಸ್ವಲ್ಪ ಗೊತ್ತಿದ್ದರೆ ಮುಖರ್ಜಿ ಮಹಾಶಯರ ಸೇವೆ ಮಾಡಿದ ಫಲ ಅದು."

ಅನ್ನದ—'ಏನು ಸೇವೆ ಅಂತೀರ ಅಮ್ಮ ಅದು. ನನಗೆ ಮಾತ್ರ ಇದ್ದಕ್ಕಿದ್ದಂತೆ ಒಂದು ದಿನ ಎಂಥ ತೊಂದರೆಯಲ್ಲಿ ಸಿಕ್ಕಿಬಿದ್ದೆ ಅನ್ನುತ್ತೀರಿ. ಮನೆಯಲ್ಲಿ ಯಾರೂ ಇಲ್ಲ—ವಾಸುಗೆ ಖಾಯಿಲೆ ಎಂದು ತಂತಿ ಬಂದಿದ್ದರಿಂದ ದ್ವಿಜದಾಸರು ಹೊರಟುಬಿಟ್ಟರು. ದತ್ತಜೀಯವರು ಢಾಕಾಕ್ಕೆ ಹೊರಟುಹೋಗಿದ್ದರು. ಇತ್ತ ವಿಪಿನ್ ಬಾಬುವಿಗೆ ಜ್ವರ. ಮೊದಲು ಒಂದೆರಡು ದಿನ ಹೇಗೋ ಕಳೆಯಿತು. ಡಾಕ್ಟರನ್ನು ಕರೆಸಿದಾಯಿತು. ಅವರು ಔಷಧಿ ಕೊಡೋದು ಕೊಟ್ಟು ನಾಲ್ಕರಷ್ಟು ಅಧೈರ್ಯದ ಮಾತು ಹೇಳಿ ಹೊರಟುಹೋದರು. ನಾನೋ ಏನೂ ಅರಿಯದ ಮೂರ್ಖ. ಹೆಂಗಸು ಏನುಮಾಡಬೇಕೂ ಅಂತ ತೋಚಲಿಲ್ಲ. ನಿಮಗೇನಾದರೂ ಹೇಳಿ ಕಳಿಸೋಣ ಅಂದರೆ ವಿಪಿನ್ ಬಾಬು ಬೇಡ ಅಂದರು. ಆಗ ಬಹಳ ಗಾಬರಿಯಿಂದ ಓಡಿದೆ––ವಂದನಮ್ಮನವರ ಹತ್ತಿರ ಅವರ ಚಿಕ್ಕಮ್ಮನ

ಮನೆಗೆ. ಅಳುತ್ತ ಹೇಳಿದೆ:–'ಅಮ್ಮ ಈಗ ಸಿಟ್ಟು ಬಿಡಿ, ನನ್ನ ಜೊತೆಯಲ್ಲಿ ಬನ್ನಿ. ನಿಮ್ಮ ಮುಖರ್ಜಿ ಸಾಹೇಬರಿಗೆ ಜ್ವರ ಬಂದಿದೆ" ಅಂತ. ಹೇಗೆ ಕೂತಿದ್ದರೊ ಹಾಗೇ ಎದ್ದು ಹೊರಟರು. ಚಿಕ್ಕಮ್ಮನಿಗೆ ಹೇಳಿ ಕೇಳಿ ಬರುವಷ್ಟು ಪುರುಸತ್ತು ಸಹ ಅವರಿಗೆ ಸಿಗಲಿಲ್ಲ. ಬಂದವರೇ ವಿಪಿನ್‌ಬಾಬುವಿನ ಎಲ್ಲ ಜವಾಬ್ದಾರಿಯನ್ನೂ ವಹಿಸಿಕೊಂಡರು. ರಾತ್ರಿ ಹಗಲು ಒಂದೇ ಸಮ ಸೇವೆ ಮಾಡಿದರು. ಅರೆಗಳಿಗೆ ವಿಶ್ರಾಮ ತೆಗೆದುಕೊಳ್ಳಲಿಲ್ಲ. ಸುಮ್ಮನೆ ಔಷಧಿ ಕುಡಿಸುವುದು ಮಾತ್ರ ಅಲ್ಲ. ಬೆಳಿಗ್ಗೆ ಸಂಧ್ಯಾವಂದನೆ ಪೂಜೆ ಇವಕ್ಕೆ ಸಿದ್ಧಮಾಡುವುದು ಮೊದಲುಗೊಂಡು, ಹಾಸಿಗೆ ಹಾಸಿ, ಸೊಳ್ಳೆ ಪರದೆ ಇಳಿಬಿಟ್ಟು ಮಲಗಿಸುವವರೆಗೆ ಎಷ್ಟು ಕೆಲಸ ಏನು ಕಥೆ! ಈಗ ಔಷಧಿ ಕುಡಿಸುವ ಅಗತ್ಯವಿಲ್ಲವೆಂತ ಇವರು ಹೇಳಿದರೆ ಏನೂ ಯೋಚಿಸಬೇಡಿ. ನೀವು ಸುಮ್ಮನಿದ್ದುಬಿಡಿ. ವಿಪ್ರದಾಸ ಬಾಬು ಹಾಗೇ ಗುಣ ಹೊಂದುತ್ತಾರೆ.'

ಆಗ ವಿಪ್ರದಾಸನೂ ಅದನ್ನು ಸಮರ್ಥಿಸುತ್ತ ಗಂಭೀರ ಧನಿಯಲ್ಲಿ ಹೇಳಿದ "ನಿಜವಾಗಿಯೂ ಗುಣಹೊಂದುತ್ತೇನಮ್ಮ. ಈಗ ವಂದನಳ ಯೋಚನೆಗೆ ನೀವು ಅಡ್ಡಿಬರಬೇಡಿ. ಇವಳಿಗೆ ಒಳ್ಳೆ ಬುದ್ಧಿ ಬರಲಿ. ನನಗೆ ಔಷಧಿ ಕುಡಿಸುವುದು ಸಾಕು. ಕಾಯಾ ವಾಚಾ ಮನಸಾ ಅವಳಿಗೆ ಆಶೀರ್ವಾದ ಮಾಡುತ್ತೇನೆ—ಎಲ್ಲಿದ್ದರೂ ರಾಣಿಯಾಗಿ ಸುಖವಾಗಿ ಬಾಳಲಿ."

ದಯಾಮಯಿ ಸುಮ್ಮನೆ ನೋಡುತ್ತಿದ್ದಳು. ಅವಳ ಕಣ್ಣುಗಳಿಂದ ಸ್ನೇಹ ಮತ್ತು ಆತ್ಮೀಯತೆಯು ಉಕ್ಕಿ ಹರಿಯುವಂತೆ ತೋರುತ್ತಿತ್ತು.

ಅಷ್ಟರಲ್ಲಿ ಒಬ್ಬ ದಾಸಿ ಬಂದು "ಅಮ್ಮ, ಕಲ್ಕತ್ತೆಯಿಂದ ಬಂದು ಪದಾರ್ಥಗಳನ್ನು ಎಲ್ಲಿಡಬೇಕು ಅಂತ ಚಿಕ್ಕಮ್ಮನವರು ಕೇಳುತ್ತಾರೆ" ಎಂದು ಹೇಳಿದಳು.

ದಯಾಮಯಿ ಉತ್ತರವನ್ನು ಕೊಡುವುದಕ್ಕಿಂತ ಮುಂಚೆ ವಂದನ ಹೇಳಿದಳು—"ಅಮ್ಮ ನಾನು ನಿನ್ನ ಮ್ಲೇಚ್ಛ ಹುಡುಗಿ. ಆದರೇನು ಇಂಥ ಸಮಾರಂಭದಲ್ಲಿ ನನಗೇನೂ ಕೆಲಸವಿಲ್ಲವೆ? ನಾನು ಮುಟ್ಟಿದ ಮಾತ್ರಕ್ಕೆ ಅಪವಿತ್ರವಾಗದ ವಸ್ತುಗಳೂ ಬೇಕಾದಷ್ಟಿರಬೇಕಲ್ಲವೆ' ಎಂದು.

ದಯಾಮಯಿ ಅವಳ ಕೈಯನ್ನು ಹಿಡಿದು ತನ್ನ ಎದೆಯ ಹತ್ತಿರಕ್ಕೆ

ಎಳೆದುಕೊಂಡು ತನ್ನ ಸೆರಗಿನಿಂದ ಬೀಗದ ಕೈ ಗೊಂಚಲನ್ನು ಬಿಚ್ಚಿ ಅವ ಳಿಗೆ ಒಪ್ಪಿಸುತ್ತ "ಸುಮ್ಮನೆ ಕುಳಿತುಕೊಳ್ಳಲು ಬಿಡುವುದಿಲ್ಲಮ್ಮ. ಇಗೋ ನನ್ನ ಭಂಡಾರದ ಬೀಗದ ಕೈ, ಸೊಸೆಯ ಹೊರತು ಬೋರೊಬ್ಬರಿಗೆ ಕೊಟ್ಟದ್ದೇ ಇಲ್ಲ. ಇಂದಿನಿಂದ ಈ ಜವಾಬ್ದಾರಿ ನಿನ್ನ ಮೇಲೆ"

"ಭಂಡಾರದಲ್ಲೇನಿದೆಯಮ್ಮ."

ಈ ಬೀಗದ ಕೈ ಗೊಂಚಲಿನ ಪರಿಚಯ ಎಲ್ಲರಿಗೂ ಇದೆ. ದ್ವಿಜ ದಾಸನು ಓರೆ ನೋಟದಿಂದ ಅದನ್ನು ನೋಡುತ್ತ 'ಅಲ್ಲಿರುವುದೆಲ್ಲ ಮಡಿ ಮೈಲಿಗೆಯ ಬಂಧನದಿಂದ ದೂರವಾದುವುಗಳು—ಬೆಳ್ಳಿ ಬಂಗಾರ, ಹಣ ಕಾಸು, ರೇಷ್ಮೆ. ಒಟ್ಟಿನಲ್ಲಿ ದೊಡ್ಡ ದೊಡ್ಡ ಧಾರ್ಮಿಕರೂ ಅವುಗಳನ್ನು ಏನೊಂದು ಅಡ್ಡಿ ಇಲ್ಲದೆ ಸ್ವೀಕರಿಸುತ್ತಾರೆ. ನೀನು ಮುಟ್ಟಿದರೂ ಅಡ್ಡಿಯಿಲ್ಲ.'

"ನಾನೇನು ಮಾಡಬೇಕಮ್ಮ?" ವಂದನ ಕೇಳಿದಳು.

ದಯಾಮಯಿ ಹೇಳಲು ಪ್ರಾರಂಭಿಸಿದಳು—"ಪಂಡಿತರು ಅಧ್ಯಾ ಪಕರುಗಳಿಗೆ ಸನ್ಮಾನ ಮಾಡುವುದು, ಅತಿಥಿ ಅಭ್ಯಾಗತ ಸತ್ಕಾರ, ಆತ್ಮೀ ಯರೂ ಸ್ವಜನರೂ ಆದವರ ಖರ್ಚುವೆಚ್ಚ ನೋಡಿಕೊಳ್ಳುವುದು ಇವು ಗಳಲ್ಲದೆ ಈ ಹುಡುಗನ ಮೇಲೆ ಒಂದಿಷ್ಟು ಕಠೋರ ಶಾಸನ—ಇವೇ ನಿನ್ನ ಕೆಲಸ" ಎಂದು ಹೇಳುತ್ತ ದ್ವಿಜದಾಸನ ಕಡೆ ತೋರಿಸಿದಳು. ಮತ್ತೆ— "ನನಗೆ ಲೆಕ್ಕಾಚಾರ ತಿಳಿಯುವುದಿಲ್ಲ. ನನಗೆ ಮೋಸಮಾಡಿ ಇವನು ಸುಮ್ಮನೇ ಇಷ್ಟು ಹಣ ಪೋಲುಮಾಡಿದ್ದಾನೆ. ಅದಕ್ಕೇ ಎಲ್ಲಾ ಲೆಕ್ಕವೇ ಇಲ್ಲ. ಈ ದುರುಪಯೋಗವನ್ನು ನೀನು ತಡೆಗಟ್ಟಬೇಕು."

"ಅಮ್ಮ ಅಣ್ಣನೆದುರಿನಲ್ಲಿ ಇಂಥ ಮಾತುಗಳನ್ನಾಡಬೇಡಿ. ಇವರು ನಿಜವೆಂದೇ ನಂಬಿಬಿಡುತ್ತಾರೆ, ಆದ ಖರ್ಚನ್ನೆಲ್ಲ ಒಂದು ಕಡೆ ಸರಿ ಯಾಗಿ ಬರೆದಿಟ್ಟಿದ್ದೇನೆ. ಪರೀಕ್ಷಿಸಿ ನೋಡಲಿ ಗೊತ್ತಾಗುತ್ತದೆ" ಎಂದು ದ್ವಿಜದಾಸನು ಹೇಳಿದನು. ದಯಾಮಯಿ—ಏನು ನೋಡುವುದು? ಖರ್ಚನ್ನೇನೋ ಬರೆಯುತ್ತಿದ್ದೀಯೆ, ಸರಿ ಆದರೆ ವ್ಯರ್ಥವಾಗಿ ಮಾಡಿದ ಖರ್ಚನ್ನೆಲ್ಲ ಯಾರು ಬರೆದಿಡುತ್ತಾರೆ ಹೇಳು? ನಾನು ಇದನ್ನೇ ವಂದನ ಳಿಗೆ ಹೇಳುತ್ತಿದ್ದೆ. ವಂದನ—ನಾನು ತಿಳಿದು ಮಾಡುವುದಾದರೂ

ಏನು ? ಹಣ ಅವರದೇ. ಅಪವ್ಯಯ ಮಾಡಿದರೆ ನಾನು ಹೇಗೆ ತಡೆ ಗಟ್ಟಲಿ ? "

ದಯಾಮಯಿ—" ಅದೆಲ್ಲ ನನಗೆ ಗೊತ್ತಿಲ್ಲ. ನೀನು ಏನಾದರೂ ಕೆಲಸ ಕೊಡು ಎಂದು ಕೇಳಿದೆ. ಕೊಟ್ಟು ನಿಶ್ಚಿಂತಳಾಗಿದ್ದೇನೆ. ಆದರೆ ಒಂದು ಮಾತು. ವಂದನ ನೀನೂ ಸಂಸಾರಿಯಾಗೋಲ್ಲವೆ ? ಆಗ ಅಪ ವ್ಯಯವನ್ನು ತಡೆಗಟ್ಟಬೇಕಾದ ಸಂದರ್ಭ ಒದಗಿದರೆ ' ಒಲ್ಲೆ ' ಎಂದು ತಪ್ಪಿಸಿಕೊಳ್ಳಲು ಸಾಧ್ಯವೇ ? '

ದ್ವಿಜದಾಸನ ಕಡೆ ನೋಡಿ ವಂದನ ಹೇಳಿದಳು—" ತಾಯಿ ಅಪ್ಪಣೆ ಕೇಳಿದಿರಾ ? "

ದ್ವಿಜದಾಸ—" ಕೇಳದೆ ಏನು. ಅಣ್ಣ ನನಗೆ ಖರ್ಚು ಮಾಡುವ ಜವಾಬ್ದಾರಿಯನ್ನು ವಹಿಸಿಕೊಟ್ಟಿದ್ದಾರೆ. ಅಮ್ಮ ಖರ್ಚು ಮಾಡ ಕೂಡದೆಂದು ನಿನಗೆ ಹೇಳಿದ್ದಾರೆ. ಒಟ್ಟಿನಲ್ಲಿ ನಮ್ಮಿಬ್ಬರಲ್ಲಿ ಜಗಳ ತಪ್ಪಿ ದ್ದಲ್ಲ. ಆಗ ವ್ಯರ್ಥವಾಗಿ ನನ್ನನ್ನು ದೂಷಿಸಬೇಡ."

ವಂದನ ತಲೆಯಲ್ಲಾಡಿಸುತ್ತಾ ನಕ್ಕು " ದೋಷಾರೋಪಣೆ ಮಾಡುವ ಪರಿಸ್ಥಿತಿ ಬರುವುದಿಲ್ಲ. ದ್ವಿಜುಬಾಬು, ನಾವಿಬ್ಬರೂ ಜಗಳ ವಾಡಲಾರೆವು. ನಿಮ್ಮ ಹಣಕ್ಕಾಗಿ ನಾನು ಮಾರ್ಕ್‌ಫೈಟ್ ಮಾಡುವ ಹುಡುಗಾಟ ಈಗ ಮಾಡಲಾರೆ. ಬಂಗಾಳಕ್ಕೆ ಬಂದ ಮೇಲೆ ಆ ಅನುಭವ ವೇನೋ ನನಗೆ ದೊರೆತಿದೆ. ಜಗಳ ಬರೋದಕ್ಕೆ ಮುಂಚೆ ಅಮ್ಮ ಕೊಟ್ಟಿರೊ ಜವಾಬ್ದಾರಿ ಅಮ್ಮನಿಗೇ ವಹಿಸಿಕೊಟ್ಟು ನಾನು ಜಾರಿ ಕೊಳ್ಳುತ್ತೇನೆ."

ದಯಾಮಯಿ ಇದರ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳ ಲಾರದೆ ಹೋದರೂ ಇದು ಸ್ವಾಭಾವಿಕ ಅಭಿಮಾನವೆಂದು ತಿಳಿದಳು. ವ್ಯಥೆಯಿಂದ ಕೂಡಿದ ದನಿಯಲ್ಲಿ " ಅಮ್ಮ, ಆ ಭಾರವನ್ನು ನಾನು ಪುನಃ ಹೊತ್ತುಕೊಳ್ಳಲಾರೆ. ನೀನೇ ನಿರ್ವಹಿಸಿಕೊಂಡು ಹೋಗಬೇಕು. ಇರಲಿ ಒಳಗೆ ಬಾ" ಎಂದು ವಂದನಳ ಕೈ ಹಿಡಿದು ಒಳಕ್ಕೆ ಕರೆದುಕೊಂಡು ಹೋದಳು.

ಆದಿನ ಅವಳು ಎಲ್ಲೋ ಕೆಲವು ಗಂಟೆಗಳ ಕಾಲ ಈ ಮನೆಯಲ್ಲಿ

ದ್ದಳು. ಎಲ್ಲಿ ಏನಿದೆ ಎಂದು ನೋಡಿಕೊಳ್ಳಲು ಅವಕಾಶ ದೊರೆತಿರಲಿಲ್ಲ. ಮನೆ ಒಳಗೆ ಹೋಗಿ ನೋಡುತ್ತಾಳೆ ಒಂದಾದಮೇಲೆ ಇನ್ನೊಂದು. ಹೀಗೆ ಬೇರೆ ಬೇರೆ ಚೌಕಿಗಳು. ಆಶ್ರಿತ ಸ್ವಜನರ ಸಂಖ್ಯೆ ಈ ಮನೆಯಲ್ಲಿ ಕಡಿಮೆ ಇಲ್ಲ. ಮಗಳು, ಸೊಸೆ ಮೊಮ್ಮಕ್ಕಳು ಎಲ್ಲರದ್ದು ಪ್ರತ್ಯೇಕ ಪ್ರತ್ಯೇಕ ಸಂಸಾರ. ಹೊರಗಡೆ ಚೌಕಿಯಲ್ಲಿ ಆಫೀಸು ಮತ್ತು ಅದಕ್ಕೆ ಸಂಬಂಧಪಟ್ಟ ಕೋಣೆಗಳು. ಒಳಗಡೆಯ ಚೌಕಿಯಲ್ಲಿ ದೇವರಮನೆ, ಅಡಿಗೆ ಮನೆ, ದಯಾಮಯಿಯ ವಿಶಾಲವಾದ ಗೋಶಾಲೆ, ಎತ್ತರವಾದ ಗೋಡೆಯಿಂದ ಸುತ್ತಲ್ಪಟ್ಟ ತೋಟ ಮತ್ತು ಸರೋವರ ಪೂರ್ವದಿಕ್ಕಿನ ಎರಡನೆ ಅಂತಸ್ತಿನಲ್ಲಿರುವ ಕೋಣೆ ದಯಾಮಯಿಯದು. ಅದರ ಪಕ್ಕದ ಕೋಣೆಗೆ ಕರೆದೊಯ್ದು ದಯಾಮಯಿ ಹೇಳಿದಳು—ಮಗು ಇದು ನಿನ್ನ ಕೋಣೆ. ಇದರ ಎಲ್ಲ ಹೊಣೆಗಾರಿಕೆಯನ್ನೂ ನಿನಗೊಪ್ಪಿಸಿದ್ದೇನೆ.

ಆ ಕಡೆ ಜಗುಲಿಯಮೇಲೆ ಸತೀ ಮತ್ತು ಮೈತ್ರೇಯಿ ಇಬ್ಬರೂ ಯಾವುದೋ ಸಾಮಾನನ್ನು ನೋಡುತ್ತಿದ್ದರು ದಯಾಮಯಿ ದನಿಯನ್ನು ಕೇಳಿ ಆಕಡೆ ತಿರುಗಿ ನೋಡಿದರು. ಮತ್ತು ವಂದನಳನ್ನು ಕಂಡೊಡನೆಯೇ ಕೆಲಸವನ್ನು ಬಿಟ್ಟು ಎಲ್ಲರೂ ಅವಳ ಹತ್ತಿರ ಬಂದು ನಿಂತರು. ವಂದನ ಬಂದೇ ಬರುತ್ತಾಳೆಂಬ ಭರವಸೆ ಯಾರಿಗೂ ಇರಲಿಲ್ಲ. ಸತಿಯ ಕಾಲು ಮುಟ್ಟಿ ನಮಸ್ಕರಿಸಿ ಮೈತ್ರೇಯಿಗೆ ಹಾಗೆಯೇ ನಮಸ್ಕರಿಸಿ ವಂದನ ನಿಂತುಕೊಂಡಳು. ಆಗ ದಯಾಮಯಿ 'ನೋಡು ಬಹೂ' ಎಂದು ಪ್ರಾರಂಭಿಸಿದಳು—"ನನ್ನ ಈ ಮ್ಲೇಚ್ಛ ಹುಡುಗಿಯು ಏನಾದರೂ ಕೆಲಸ ಮಾಡಬೇಕೆಂದಿದ್ದಾಳೆ. ಸುಮ್ಮನೆ ಕುಳಿತುಕೊಳ್ಳಲು ಅವಳು ಬೇಸರ ಮಾಡುತ್ತಾಳೆ. ನಿಮಗೆ ಬೇಕಾದಷ್ಟು ಕೆಲಸ ವಹಿಸಿಕೊಟ್ಟಿದ್ದೇನೆ. ಇಗೊ ಈ ಭಂಡಾರದ ಬೀಗದ ಕೈಯನ್ನು ಇವಳಿಗೆ ಕೊಡುತ್ತೇನೆ."

"ಭಂಡಾರದಲ್ಲೇನಿದೆ?" ಎಂದು ಮೈತ್ರೇಯಿಯೇ ಕೇಳಿದಳು.

'ಇದರಲ್ಲಿ ಮ್ಲೇಚ್ಛ ಹುಡುಗಿ ಬಾಲ ಮುಟ್ಟಿದರೂ ಹಾಳಾಗದ ಪದಾರ್ಥಗಳಿವೆ' ಎಂದು ದಯಾಮಯಿ ಹೇಳಿ ಕುತೂಹಲದಿಂದ ನಕ್ಕುಬಿಟ್ಟು ಕೋಣೆಯ ಬಾಗಿಲನ್ನು ತೆರೆದು ಒಳಕ್ಕೆ ಪ್ರವೇಶಿಸಿದರು. ನೆಲದ ಮೇಲೆ ಲೆಕ್ಕವಿಲ್ಲದಷ್ಟು ಬೆಳ್ಳಿಯ ತಟ್ಟೆಗಳಿವೆ. ಬ್ರಾಹ್ಮಣರು ಮತ್ತು

ಪಂಡಿತರುಗಳಿಗೆ ದಾನಮಾಡಲು ಅವುಗಳನ್ನು ತರಿಸಿದ್ದಾರೆ. ಒಂದುಕಡೆ ಕಲ್ಕತ್ತೆಯಿಂದ ಚಿಲ್ಲರೆಮಾಡಿಸಿಕೊಂಡು ಬಂದಿರುವ ರೂಪಾಯಿ ಎಂಟಾಣೆ ನಾಲ್ಕಾಣೆಗಳ ರಾಶಿ ರಾಶಿ ಬೆಲೆಬಾಳುವ ರೇಷ್ಮೆ ವಸ್ತ್ರಗಳ ಗಂಟನ್ನು ಇನ್ನೂ ಬಿಚ್ಚಿಯೇ ಇಲ್ಲ. ಯಾರಿಗೂ ಬಿಚ್ಚಿ ನೋಡುವಷ್ಟು ಪುರಸತ್ತಿಲ್ಲ. ಇದಲ್ಲದೆ ಈ ಕೋಣೆಯಲ್ಲಿ ದಯಾಮಯಿಯ ಸ್ವಂತ ಬೀರು ಮತ್ತು ಸಂದೂಕವಿದೆ. ಕೈಯಿಂದ ಒಂದೊಂದನ್ನಾಗಿ ತೋರಿಸುತ್ತ ದಯಾಮಯಿ ಹೇಳಿದಳು.—"ವಂದನ ವಾಸ್ತವವಾಗಿ ಇವುಗಳಲ್ಲಿ ನನ್ನ ಸರ್ವಸ್ವವೂ ಇದೆ. ದ್ವಿಜೂನ ಕಣ್ಣು ಇವುಗಳ ಮೇಲೇ ಇದೆ. ನೀನು ಬಹಳ ಜಾಗರೂಕತೆಯಿಂದ ಇಲ್ಲೇ ಪಹರೆ ಇರಬೇಕು."

ವಂದನಳ ಮುಖದ ಕಡೆ ನೋಡಿ ಸತಿ ಅವಳ ಪರವಾಗಿ ಹೇಳಿದಳು—"ಅಮ್ಮ ಇಷ್ಟು ದೊಡ್ಡ ಜವಾಬ್ದಾರಿಯನ್ನು ಅವಳ ಮೇಲೆ ಹೊರಿಸಬಹುದೆ? ಹಣಕಾಸಿನ ವಿಚಾರ...." ಅವಳ ಮಾತು ಮುಗಿದಿರಲಿಲ್ಲ. ಅಷ್ಟರಲ್ಲಿ ದಯಾಮಯಿ "ಬಹಳ ದುಡ್ಡು ಕಾಸು ಇಲ್ಲಿದೆ ಅಂತ ತಿಳಿದೇ ವಂದನಳ ಕೈಗೆ ಬೀಗದ ಕೈ ಕೊಟ್ಟೆ. ಇಲ್ಲದಿದ್ದರೆ ದ್ವಿಜ ನನ್ನನ್ನು ಪಾಪರೆ ಮಾಡಿ ಕೈಬಿಡುತ್ತಾನೆ ಅಷ್ಟೆ.' ಎಂದಳು.

'ಅಮ್ಮ ಇವಳು ಪರರ ಮನೆ ಹುಡುಗಿ?' ಸತಿ ಇನ್ನೂ ಹೇಳಿ ಪೂರೈಸಿರಲಿಲ್ಲ. ಅಷ್ಟರಲ್ಲಿ ನಗುತ್ತ ದಯಾಮಯಿ ಹೇಳಿದಳು—"ನೀನೂ ಒಮ್ಮೆ ಪರರ ಮನೆ ಹುಡುಗಿಯಾಗಿದ್ದೆ. ಅದಕ್ಕಿಂತ ಮುಂಚೆ ನಾನೂ ಪರರ ಮನೆಯಿಂದ ಬಂದವಳೇ. ಇದೊಂದು ದೊಡ್ಡ ಅಡ್ಡಿಯ ಮಾತಲ್ಲ. ಆಗಲಿ. ಈಗ ನನಗೆ ಹೆಚ್ಚು ಅವಕಾಶವಿಲ್ಲ. ಹೊರಡುತ್ತೇನೆ.' ಎಂದು ಹೇಳಿ ಕೋಣೆಯನ್ನು ಬಿಟ್ಟು ಕೆಳಕ್ಕಿಳಿದು ಹೋದಳು.

"ಅಕ್ಕ ನಿಮ್ಮ ಮನೆಯಲ್ಲಿ ಬಂದು ಒಳ್ಳೆ ಜಂಜಾಟಕ್ಕೆ ಸಿಕ್ಕಿಬಿದ್ದೆ. ಬಹುಶಃ ಉಸಿರಾಡುವುದಕ್ಕೆ ಅವಕಾಶ ಸಿಗುವುದಿಲ್ಲವೆಂತ ತೋರುತ್ತೆ."—ವಂದನ ಕೇಳಿದಳು.

"ಹಾಗೆಂತಲೇ ತೋರುತ್ತೆ," ಎಂದು ಹೇಳಿ ಸತಿ ತುಸು ನಕ್ಕಳು.

## ೨೩

ಈ ಪ್ರಪಂಚದಲ್ಲಿ ವಿಪತ್ತು ಎಲ್ಲಿಂದ ಹೇಗೆ ಬಂದೊದಗುವುದೆಂಬು

ದನ್ನು ಯೋಚಿಸಿ ನೋಡಿದರೆ ಆಶ್ಚರ್ಯವಾಗದೇ ಇರದು. ಕೆಲಸ ಕಾರ್ಯಗಳ ಮಧ್ಯದಲ್ಲಿ ಕಲ್ಯಾಣಿ ಅಳುತ್ತ ಬಂದು "ಅಮ್ಮ, ಅವರು ಹೇಳಿದರು. ಈ ಕೂಡಲೆ ಅವರ ಜೊತೆಯಲ್ಲಿ ಊರಿಗೆ ಹೊರಡಬೇಕಂತೆ. ರೈಲಿಗೆ ಇನ್ನೂ ಹೊತ್ತಾಗಿಲ್ಲ. ಆದರೂ ಸ್ಟೇಷನ್ನಿನಲ್ಲೇ ಹೋಗಿ ಕುಳಿತ ರಾಯಿತು. ಈ ಮನೆಯಲ್ಲಿ ಇನ್ನು ಅರೆ ಕ್ಷಣವೂ ಇರಲಾರೆ ಎನ್ನುತ್ತಾರೆ ಅವರು" ಎಂದಳು.

ಸರೋವರದ ಪ್ರತಿಷ್ಠಾಪನೆಯ ಶಾಸ್ತ್ರೀಯ ಕಾರ್ಯಕಲಾಪಗಳು ಈಗತಾನೆ ಮುಗಿದಿವೆ. ಇದೇ ಈಗ ದಯಾಮಯಿ ಉತ್ಸವಮಂಟಪದಿಂದ ಮನೆಗೆ ಕಾಲಿಟ್ಟಿದ್ದಾಳೆ. ಬಹಳ ಗಾಬರಿಯಿಂದಲೂ ವ್ಯಾಕುಲತೆಯಿಂದ ಆಡಿದ ಮಗಳ ಮಾತನ್ನು ಕೇಳಿ ದಯಾಮಯಿ ಹೆದರಿ ನಿಂತಳು. ಮಗಳ ಮಾತು ಅವಳಿಗೆ ಅರ್ಥವಾಗದೆ ಅವಳ ಬುದ್ಧಿಗೆ ಏನೂ ತೋಚದಂತಾ ಯಿತು. "ಹೊರಡಲು ಯಾರು ಹೇಳುತ್ತಾರೆ? ಶಶಧರನೆ? ಏಕಂತೆ?" ಎಂದು ಪ್ರಶ್ನಿಸಿದಳು.

"ದೊಡ್ಡಣ್ಣ ಅವರಿಗೆ ತುಂಬಾ ಅವಮಾನ ಮಾಡಿ ಮನೆಯಿಂದ ತಳ್ಳಿಸಿದನಂತೆ" ಎಂದು ಹೇಳುತ್ತ ಉಕ್ಕಿಬರುವ ಸಂತಾಪದಲ್ಲಿ ಅತ್ತು ಬಿಟ್ಟಳು.

ಸುತ್ತಲೂ ಸ್ತ್ರೀಪುರುಷರ ಗುಂಪು. ಒಂದು ಕಡೆ ಊಟ ತಿಂಡಿಯ ಏರ್ಪಾಟು ಸಾಗುತ್ತಿದೆ. ಮತ್ತೊಂದು ಕಡೆ ಸಂಗೀತ ನಡೆಯುತ್ತಿದೆ. ಭಿಕಾರಿಗಳ ವಿತಂಡವಾದ ಒಂದು ಕಡೆ ನಡೆಯುತ್ತಿದ್ದರೆ ಮತ್ತೊಂದು ಕಡೆ ಪಂಡಿತರುಗಳ ವಾಕ್ಯಾರ್ಥ—ಒಟ್ಟಿನಲ್ಲಿ ಅಗಣಿತ ಜನ ಸಂದಣಿಯಲ್ಲಿ ಅಪರಿಮಿತ ಕೋಲಾಹಲ. ಈ ಮಧ್ಯದಲ್ಲಿ ಇದೊಂದು ಉಪದ್ರವ ಎದ್ದುಬಿಟ್ಟಿತು.

ಸತಿ ಮತ್ತು ಮೈತ್ರೇಯಿ ಬಂದು ಸೇರಿದರು. ಭಂಡಾರದ ಕೋಣೆಗೆ ಬೀಗ ಹಾಕಿ ವಂದನ ಸಹ ಸತಿಹತ್ತಿರ ಬಂದು ನಿಂತುಕೊಂಡಳು. ಸಂಬಂಧಿಕರಲ್ಲಿ ಕೆಲವರು ಕುತೂಹಲದಿಂದ ಬಂದು ನೆರೆದರು. ಶಶಧರನು ಬಂದು ಅತ್ತಿಗೆ ನಮಸ್ಕರಿಸುತ್ತ "ಅಮ್ಮ, ನಾವು ಹೊರಟುಬಿಡುತ್ತೇವೆ. ಬನ್ನಿ ಎಂದು ಹೇಳಿಕಳಿಸಿದಿರಿ ಬಂದೆವು. ಆದರೆ ಇಲ್ಲಿರಲಾಗಲಿಲ್ಲ."

' ಏಕಪ್ಪ ? '

' ವಿಪ್ರದಾಸಬಾಬು ನನ್ನನ್ನು ನಮ್ಮ ಕೋಣೆಯಿಂದ ತಳ್ಳಿಸಿದ್ದಾರೆ."

" ಕಾರಣ ? "

" ಕಾರಣ ಅವರು ದೊಡ್ಡ ಮನುಷ್ಯರು ನಾವು ಬಡವರು ಅನ್ನುವುದಿರಬೇಕು. ಎಷ್ಟು ಅಹಂಕಾರ ತುಂಬಿದೆ ಎಂದರೆ ಅಬ್ಬಾ ! ಮನೆಗೆ ಕರೆಸಿ ಅಪಮಾನ ಮಾಡಬೇಕು ಎಂದು ಅನ್ನಿಸಿದ್ದೀತು. ಆದರೆ ನಿಮ್ಮ ಮಗನಿಗೆ ತಿಳಿಸಿ, ನಮ್ಮಪ್ಪನೂ ಕೂಡ ಜಮೀನು ಮನೆ ಸ್ವಲ್ಪ ಬಿಟ್ಟು ಹೋಗಿದ್ದಾನೆ ನಾನು ತಿರಿದುತಿನ್ನಬೇಕಾಗಿಲ್ಲ ಅಂತ."

ದಯಾಮಯಿ ವ್ಯಾಕುಲಳಾಗಿ, " ಅಪ್ಪ ಈಗಲೇ ವಿಪ್ರದಾಸನನ್ನು ಕರೆಸುತ್ತೇನೆ,' ತಡಿ ಎಂದು ಪ್ರಾರಂಭಿಸಿ " ಏನಾಯಿತೋ ಕೇಳೋಣ. ನನ್ನ ಕೆಲಸ ಇನ್ನೂ ಪೂರೈಸಿಲ್ಲ. ಬ್ರಾಹ್ಮಣ ಸಂತರ್ಪಣೆ ಸಹ ಆಗಿಲ್ಲ. ವೈಷ್ಣವ ಭಿಕ್ಷುಗಳಿಗೆ ಕೊಡಬೇಕಾದ ದಾನಧರ್ಮಗಳು ಒಂದೂ ಆಗಿಲ್ಲ. ಆದಕ್ಕೆ ಮುಂಚೆ ನೀವು ಸಿಟ್ಟುಮಾಡಿಕೊಂಡು ಹೊರಟು ಹೋದರೆ, ಶಶಧರ, ಖಂಡಿತ ಹೇಳುತ್ತೇನೆ ನಾನು ಇದೇ ಈಗ ತೋಡಿಸಿರುವ ಆ ಕೆರೆಯಲ್ಲಿ ಬಿದ್ದು ಪ್ರಾಣಬಿಟ್ಟು ಬಿಡುತ್ತೇನೆ. ಈ ಮಾತುಸುಳ್ಳಲ್ಲ " ಎಂದು ಹೇಳುತ್ತಿರುವಾಗ ಅವಳ ಕಣ್ಣಲ್ಲಿ ಕಣ್ಣೀರು ಉಕ್ಕಿ ಬಂದಿತು.

ಅತ್ತೆಯ ಗೋಳಾಟದಿಂದ ವಿಶೇಷ ಫಲವೇನೂ ಆಗಲಿಲ್ಲ. ಸದ್ಗೃಹಸ್ಥನ ಮಗನಾಗಿದ್ದರೂ ಶಶಿಧರನ ಆಕೃತಿ ಪ್ರಕೃತಿಗಳಲ್ಲಿ ಸಭ್ಯತೆ ಕಂಡು ಬರುತ್ತಿರಲಿಲ್ಲ. ಅವನ ಹತ್ತಿರ ಹೋಗಿ ನಿಲ್ಲಲು ಮನಸ್ಸು ಹಿಂಜರಿಯುತ್ತಿತ್ತು. ಅವನದು ದಪ್ಪದೇಹ, ಅದಕ್ಕಿಂತಲೂ ದಪ್ಪವಾದ ಮುಖ. ಸಿಟ್ಟುಗೊಂಡ ಮಾಳಬೆಕ್ಕಿನಂತೆ ಕಾಣುತ್ತಿದ್ದ ಶಶಧರ " ವಿಪ್ರದಾಸಬಾಬು ಇಲ್ಲಿಗೆ ಬಂದು ಎಲ್ಲರೆದುರಿಗೆ ಕೈಜೋಡಿಸಿಕೊಂಡು ತಪ್ಪಾಯಿತು ಎನ್ನಲಿ. ಇಲ್ಲದಿದ್ದರೆ ಖಂಡಿತ ಇರಲಾರೆ " ಎಂದು ಹೇಳಿದನು.

ಅವನ ಈ ಷರತ್ತು ಎಷ್ಟು ಅಸಂಭವವಾಗಿ ತೋರುತ್ತಿತ್ತೆಂದರೆ ಒಬ್ಬರೂ ಈ ವಿಷಯವನ್ನು ಕುರಿತು ಆಲೋಚನೆ ಸಹ ಮಾಡಲಿಲ್ಲ. ಆಶ್ಚರ್ಯದಿಂದ ದಂಗುಬಡಿದು ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನಿದ್ದರು. ಭಯದಿಂದ ಮಲಿನವಾದ ಮುಖವುಳ್ಳ ಸತಿಯು ಆ ಮೌನವನ್ನು ಭೇದಿಸುತ್ತ

ಹೇಳಿದಳು—“ ಭಾವ ಈಗ ಈ ಮಾತು ಬೇಡ. ಕೆಲಸ ಕಾರ್ಯಗಳೆಲ್ಲ ಮುಗಿದು ಹೋಗಲಿ. ರಾತ್ರಿಗೆ ಅಮ್ಮ ಖಂಡಿತ ಇದನ್ನು ವಿಚಾರ ಮಾಡು ವರು. ಅಲ್ಲ ನಿಮಗೆ ಹಾಗೆಲ್ಲ ಅಪಮಾನ ಮಾಡಬಹುದೆ ? ಅವರು ಅನ್ಯಾಯ ಮಾಡಿದ್ದರೆ ಖಂಡಿತ ಕ್ಷಮೆಬೇಡುತ್ತೇನೆ.”

ವಂದನಳ ತುದಿಗಣ್ಣುಗಳು ಅದುರಿದವು. ಆದರೂ ಅವಳು ಶಾಂತ ಸ್ವರದಲ್ಲಿ ಆದನ್ನು ವಿರೋಧಿಸಿದಳು—“ ಅವರು ಎಂದೆಂದಿಗೂ ಅನ್ಯಾಯ ಮಾಡುವುದಿಲ್ಲ ಅಕ್ಕ.”

ಸತಿ ಅವಳನ್ನು ದಂಡಿಸಿ —‘ ನೀನು ಸುಮ್ಮನಿರು. ಎಲ್ಲರೂ ಅನ್ಯಾಯ ಮಾಡುತ್ತಾರೆ.” ಎಂದು ಹೇಳಿದಳು

ವಂದನ—‘‘ ಇಲ್ಲ ಅವರು ಎಂದಿಗೂ ಮಾಡುವುದಿಲ್ಲ ’’

ವಂದನಳ ವಾದವನ್ನು ಕೇಳಿ ಮೈತ್ರೇಯಿಗೆ ಮೈಯೆಲ್ಲ ಉರಿಯಿತು. ಅವಳು ಕೊಂಚ ತೀಕ್ಷ್ಣ ದನಿಯಲ್ಲಿ “ ನಿಮಗೆ ಹೇಗೆ ಗೊತ್ತು ತಾವೇನೂ ಅಲ್ಲಿರಲಿಲ್ಲವಲ್ಲ, ಹಾಗಾದರೆ ಇವರು ಹುಟ್ಟಿಸಿಕೊಂಡು ಹೇಳುತ್ತಿದ್ದಾ ರೆಯೇ ” ಎಂದು ಆಕ್ಷೇಪಿಸಿದಳು.

ವಂದನ ಕ್ಷಣಕಾಲ ಅವಳನ್ನೇ ನೋಡುತ್ತಿದ್ದು ಹೇಳಿದಳು: “ ಇವರು ಹುಟ್ಟಿಸಿಕೊಂಡು ಹೇಳುತ್ತಿದ್ದಾರೆಂದು ನಾನು ಹೇಳಲಿಲ್ಲ. ನಾನು ಹೇಳಿದ್ದು ಮುಖರ್ಜಿಯವರು ಅನ್ಯಾಯವನ್ನು ಎಂದಿಗೂ ಮಾಡುವುದಿಲ್ಲ ಅಂತ.”

ಇದಕ್ಕೆ ಉತ್ತರವಾಗಿ ಮೈತ್ರೇಯಿ ಅಷ್ಟೇ ವ್ಯಂಗ್ಯವಾಗಿ ಹೇಳಿ ದಳು—‘‘ ಎಲ್ಲರೂ ಒಂದುಸಾರಿ ಇಲ್ಲ ಒಂದುಸಾರಿ ಅನ್ಯಾಯ ಮಾಡು ತ್ತಾರೆ. ಇವರೇನೂ ದೇವರಲ್ಲ. ಅವಮರ್ಯಾದೆ ಮಾಡುವುದರಲ್ಲಿ ಅವರು ನಮ್ಮ ಅಪ್ಪನನ್ನೂ ಬಿಟ್ಟಿಲ್ಲ.”

ವಂದನ--‘‘ ಹಾಗಿದ್ದರೆ ಶಶಿಧರಬಾಬುವಿನಂತೆ ಅವರೂ ಹೊರಟು ಹೋಗಬೇಕಾಗಿತ್ತು.”

‘‘ ಆ ವಿಚಾರ ನಿಮಗೆ ಸಂಬಂಧಪಟ್ಟದ್ದಲ್ಲ. ಇದರ ನ್ಯಾಯ ದ್ವಿಜಬಾಬು ಹತ್ತಿರ ನಡೆಯುತ್ತೆ. ಅವರು ನಮ್ಮನ್ನು ಬರಹೇಳಿದವರು’’ ಎಂದು ಮೈತ್ರೇಯಿಯ ತೀಕ್ಷ್ಣವಾದ ಉತ್ತರ ಕೊಟ್ಟಳು.

"ವಂದನ, ನಿನ್ನ ಕಾಲಿಗೆ ಬೀಳುತ್ತೇನೆ. ಇಲ್ಲಿಂದ ಹೊರಟು ಹೋಗು. ನಿನ್ನ ಕೆಲಸ ನೀನು ನೋಡು" ಎಂದು ಸಿಟ್ಟಿನಿಂದ ತಿರಸ್ಕಾರ ದಿಂದ ಸತಿ ಹೇಳಿದಳು.

ಶಶಿಧರನು ದಯಾಮಯಿಗೆ ಹೇಳಿದ—"ಅಮ್ಮ ನಾನು ನ್ಯಾಯಾನ್ಯಾಯದ ನಿಷ್ಕರ್ಷೆಗಾಗಿ ಇಲ್ಲಿಗೆ ಬಂದಿಲ್ಲ. ನಾನು ಬಂದಿರುವುದು ನಿಮ್ಮ ಮಗ ಕೈಜೋಡಿಸಿಕೊಂಡು ತಪ್ಪಾಯಿತು ಎಂತ ಹೇಳುತ್ತಾನೋ ಇಲ್ಲವೋ ಕೇಳೋಣ ಅಂತ. ಇಲ್ಲದಿದ್ದರೆ ಇಗೊ ಹೊರಟೆ--ಒಂದು ನಿಮಿಷ ಸಹ ಇರಲಾರೆ. ನಿಮ್ಮ ಮಗಳು ಬೇಕಾದರೆ ಬರಲಿ. ಇಲ್ಲದಿದ್ದರೆ ಇರಲಿ. ಆದರೆ ಆಮೇಲೆ ಮತ್ತೆ ನಮ್ಮ ಮನೆ ಹೆಸರು ಸಹ ಎತ್ತುವಂತಿಲ್ಲ. ಸರಿ ಇವತ್ತು ಇಲ್ಲೇ ನಿರ್ಧರಿಸಿ ಬಿಡೋಣ."

ಇದೆಂತಹ ಹಾಳು ಮಾತು. ಆದರೆ ಶಶಿಧರನಿಗೆ ಯಾವುದೂ ಅಸಂಭವವಲ್ಲ. ಮಗಳು ಅಳಿಯನನ್ನು ಕರೆಸಿ ಎಂತಹ ಆಪತ್ತಿಗೆ ತುತ್ತಾಗಬೇಕಾಯಿತು. ಎದುರಿನಲ್ಲಿ ನಿಂತಿರುವ ಕಲ್ಯಾಣಿ ಅಳುತ್ತಲೇ ಇದ್ದಾಳೆ. ಬುದ್ಧಿ ಹೇಳುವವರು ಯಾರೂ ಇಲ್ಲ. ಯೋಚಿಸಿ ನೋಡುವುದಕ್ಕೂ ಹೊತ್ತಿಲ್ಲ. ಆಲಸ್ಯ, ಅಪಮಾನ ಮತ್ತು ನಾಚಿಕೆಯಿಂದ ದಯಾಮಯಿಯ ಕರ್ತವ್ಯ ಬುದ್ಧಿಯು ಮಲಿನವಾಗಿದ್ದಿತು. ಏನೂ ಯೋಚಿಸಲಾರದೆ ಹೋದಳು. ಆದರೂ ಹೆದರುತ್ತ ಹೆದರುತ್ತ "ಸ್ವಲ್ಪ ನಿಲ್ಲಪ್ಪ; ವಿಪ್ರದಾಸನಿಗೆ ಹೇಳಿ ಕಳಿಸಿದ್ದೇನೆ. ನಿನ್ನಿಂದ ಏನೋ ಒಂದು ತಪ್ಪು ನಡೆದಿರಬೇಕೆಂದು ನನಗನ್ನಿಸುತ್ತದೆ. ಆದರೆ ಈ ಪ್ರಸಂಗದಲ್ಲಿ ತಪ್ಪು ಹೊರಬಿದ್ದು ನಿಮಗೆ ಕಲಂಕ ತಟ್ಟಿದರೆ ನಿಜವಾಗಿಯೂ ನಾನು ಆತ್ಮಹತ್ಯೆ ಮಾಡಿಕೊಳ್ಳಬೇಕಾದ್ದೇ ಗತಿ" ಎಂದು ಹೇಳಿದಳು.

ಶಶಿಧರ: –ಇಗೊ ಇಲ್ಲಿ ನಿಂತಿದ್ದೇನೆ. ಅವರನ್ನು ಕರೆಸಿ. ನಾನು ಆ ಕೆಲಸ ಮಾಡಲಿಲ್ಲವೆಂದು ಅವರು ಸುಳ್ಳು ಹೇಳಿದರೂ ಚಿಂತೆ ಇಲ್ಲ.

"ಅವನು ಸುಳ್ಳು ಹೇಳುವವನಲ್ಲ, ಶಶಿಧರ." ದಯಾಮಯಿ ಇಷ್ಟು ಹೇಳಿ ವಿಪ್ರದಾಸನನ್ನು ಕರೆಯಲು ಜನರನ್ನು ಕಳಿಸಿದಳು. ನಾಲ್ಕೈದು ನಿಮಿಷದಲ್ಲಿ ವಿಪ್ರದಾಸ ಬಂದು ನಿಂತ. ಎಂದಿನಂತೆ ಶಾಂತ ಗಂಭೀರ ಮತ್ತು ಆತ್ಮ ನಿಮಗ್ನನಾಗಿದ್ದ. ಅವನ ಕಣ್ಣಿನಲ್ಲಿ ಮಾತ್ರ ಏನೊ ಒಂದು

ಕಂಡುಬರುತ್ತಿತ್ತು—ಅದರ ಹಿಂದೆ ಏನಡಗಿದೆಯೊ ಹೇಳುವುದು ಕಷ್ಟ.

ದಯಾಮಯಿ ಉಕ್ಕಿಬರುವ ಉದ್ವೇಗದಲ್ಲಿ ಕೇಳಿದಳು—"ಶಶಿಧರ ಏನು ಹೇಳುತ್ತಿದ್ದಾನೆ ಕೇಳು. ನೀನು ಅವನನ್ನು ನಿನ್ನ ಕೋಣೆಯಿಂದ ತಳ್ಳಿಸಿದೆಯಂತೆ. ಏನು ಇದು ಎಂದಾದರೂ ಸಾಧ್ಯವೆ?"

ವಿಪ್ರದಾಸ :—ನಿಜ ಅಮ್ಮ ಅದು.

"ನನ್ನ ಅಳಿಯನನ್ನು ನೀನು ನಿಜವಾಗಿಯೂ ತಳ್ಳಿಸಿದೆಯಾ? ಅದೂ ಇಂಥ ಉತ್ಸವದ ಸಮಯದಲ್ಲಿ?"

"ಹ್ಞಂ, ನಿಜವಾಗಿಯೂ ತಳ್ಳಿಸಿದ್ದೇನೆ. ಇನ್ನುಮೇಲೆ ನನ್ನ ಕೋಣೆಯಲ್ಲಿ ಕಾಲಿಡಬೇಡವೆಂದು ಹೇಳಿದ್ದೇನೆ."

ಇದನ್ನು ಕೇಳಿದ ದಯಾಮಯಿ ಸಿಡಿಲು ಬಡಿದಂತೆ ಸುಮ್ಮನೆ ನಿಂತುಬಿಟ್ಟಳು. ಸ್ವಲ್ಪ ಹೊತ್ತಿನ ಮೇಲೆ ಕೊಂಚ ಚೇತರಿಸಿಕೊಂಡು "ಕಾರಣ?" ಎಂದು ಕೇಳಿದಳು.

"ಕಾರಣ ಕೇಳದಿದ್ದರೆ ಚೆನ್ನಾಗಿರುತ್ತದೆ ಅಮ್ಮ"

ಸತಿಗೆ ಸುಮ್ಮನಿರಲಾಗಲಿಲ್ಲ. ವ್ಯಾಕುಲಳಾಗಿ "ಯಾರೂ ಆ ಕಾರಣವನ್ನು ಕೇಳಲು ಹಾತೊರೆದು ನಿಂತಿಲ್ಲ. ಈಗ ಭಾವ ಕಲ್ಯಾಣಿಯನ್ನು ಸಂಗಡ ಕರೆದುಕೊಂಡು ಹೊರಟು ಹೋಗುತ್ತಾರೆ. ನೀವೇ ಯೋಚಿಸಿ ನೋಡಿ ಇಷ್ಟು ಜನಗಳ ಮಧ್ಯದಲ್ಲಿ ಇದೆಂಥ ಅನರ್ಥಕ್ಕೆ ಕಾರಣವಾಗುತ್ತದೆ ಅಂತ. ಏನೂ ಗೊತ್ತಿಲ್ಲದೆ ತಪ್ಪು ಆಗಿಬಿಟ್ಟಿತು. ಅದನ್ನು ಮನಸ್ಸಿಗೆ ತಂದುಕೊಳ್ಳದೆ 'ಇರಿ' ಎಂದು ಅವರಿಗೆ ಹೇಳಿ" ಎಂದಳು.

ವಿಪ್ರದಾಸನು ಕ್ಷಣಕಾಲ ತನ್ನ ಹೆಂಡತಿಯ ಮುಖವನ್ನು ನೋಡುತ್ತಿದ್ದು ಅನಂತರ—"ಸತಿ, ನನ್ನಿಂದ ಹಾಗೆ ಗೊತ್ತುಗುರಿಯಿಲ್ಲದೆ ಅನ್ಯಾಯವಾಗುವುದಿಲ್ಲ" ಎಂದನು.

"ಆಗುತ್ತೆ ಆಗುತ್ತೆ. ಗೊತ್ತಿಲ್ಲದಂತೆ ಅನ್ಯಾಯವನ್ನು ಎಲ್ಲರೂ ಮಾಡುತ್ತಾರೆ. ಅವರಿಗೆ ಇದ್ದು ಹೋಗುವಂತೆ ಹೇಳಿ"

ವಿಪ್ರದಾಸ ತಲೆಯಲ್ಲಾಡಿಸುತ್ತ "ಸಾಧ್ಯವಿಲ್ಲ. ನನ್ನಿಂದ ಅನ್ಯಾಯ ನಡೆದಿಲ್ಲ" ಎಂದನು.

ಗಂಡ ಹೆಂಡರ ಮಾತನ್ನು ಕೇಳುತ್ತ ದಯಾಮಯಿ ಸುಮ್ಮನೆ ನಿಂತಿದ್ದಳು. ಆದರೆ ಅಕಸ್ಮಾತ್ತಾಗಿ ಯಾರೋ ಅವಳನ್ನು ಅಲುಗಾಡಿಸಿ ಎಬ್ಬಿಸಿದಂತಾಯಿತು. ಆಗ ತೀವ್ರಕಂಠದಿಂದ '' ವಿಪಿನ್ ಈಗ ನ್ಯಾಯ ಅನ್ಯಾಯದ ವಿಚಾರ ಬೇಕಿಲ್ಲ. ಅಳಿಯ ಮಗಳು ಇನ್ನು ಯಾವಾಗಲೂ ನಮ್ಮ ಪಾಲಿಗೆ ಇಲ್ಲದಂತಾಗುತ್ತಾರೆ. ಇದನ್ನು ನಾನು ಎಂದಿಗೂ ಸಹಿಸಲಾರೆ. ಸುಮ್ಮನೆ ಶಶಿಧರನಿಗೆ ಕೈಮುಗಿದು ತಪ್ಪಾಯಿತು ಅನ್ನು '' ಎಂದು ಆಜ್ಞಾಪಿಸಿದಳು.

"ಅಮ್ಮ ಇದು ಅಸಾಧ್ಯ, ಅಸಂಭವ".

"ಸಾಧ್ಯ ಅಸಾಧ್ಯ ಈ ವಿಚಾರ ನನಗೆ ಬೇಕಿಲ್ಲ. ನೀನು ಅವನ ಮುಂದೆ ಕ್ಷಮೆ ಬೇಡಲೇಬೇಕು."

ವಿಪ್ರದಾಸನು ಸ್ಥಿರನಾಗಿಯೇ ಇದ್ದ. ಅಸಾಧ್ಯವನ್ನು ಸಾಧ್ಯವನ್ನಾಗಿ ಮಾಡಲು ಸಾಧ್ಯವೆಂದು ದಯಾಮಯಿ ಮನಸ್ಸಿನಲ್ಲೇ ಅರಿತಳು. ಅವಳಿಗೆ ಮಿತಿಮೀರಿ ಕೋಪಬಂದಿತು. "ವಿಪಿನ್, ಮನೆ ನಿನ್ನೊಬ್ಬನದು ಎಂದು ತಿಳಿಯಬೇಡ. ಯಾರನ್ನಾದರೂ ಮನೆಯಿಂದ ತಳ್ಳಿಸಿ ಹೊರದೂಡುವ ಅಧಿಕಾರ ನಿಮ್ಮ ತಂದೆ ನಿನಗೆ ಕೊಟ್ಟಿಲ್ಲ. ಇವರು ಈ ಮನೆಯಲ್ಲೇ ಇರುತ್ತಾರೆ' ಎಂದು ಹೇಳಿದಳು.

'ಇಲ್ಲಿ ನೋಡು ಅಮ್ಮ', ವಿಪ್ರದಾಸ ಹೇಳಿದ—"ನನ್ನನ್ನು ಕರೆಸದೆ ನೀನು ಈ ಮಾತು ಹೇಳಿದ್ದರೆ ನಾನು ಸುಮ್ಮನಿರುತಿದ್ದ. ಆದರೆ ಈಗ ಇದಕ್ಕೆ ಒಪ್ಪಲು ಸಾಧ್ಯವಿಲ್ಲ. ಶಶಧರ ಇಲ್ಲಿರುವುದಾದರೆ ನಾನು ಮನೆಬಿಟ್ಟು ಹೋಗಬೇಕಾಗುತ್ತದೆ. ಆಮೇಲೆ ನನ್ನನ್ನು ಬರಮಾಡಿಕೊಳ್ಳುವುದು ಸಾಧ್ಯವಿಲ್ಲ. ಇವೆರಡರಲ್ಲಿ ಯಾವುದು ಇಷ್ಟವೋ ಯೋಚಿಸಿ ನೋಡಿ

ಇಷ್ಟು ಕಠೋರವಾದ ಪ್ರಶ್ನೆಯು ದಯಾಮಯಿಯ ಎದುರಿನಲ್ಲಿ ಇದುವರೆಗೂ ಬಂದೇ ಇರಲಿಲ್ಲ. ಇಂತಹ ಸಮಸ್ಯೆಯನ್ನು ಪರಿಹರಿಸುವ ಅವಕಾಶ ಅವಳಿಗೆ ಒದಗಿರಲಿಲ್ಲ. ಒಂದು ಕಡೆ ಮಗಳು ಅಳಿಯ, ಇನ್ನೊಂದುಕಡೆ ಅವಳ ವಿಪಿನ್. ಅವನನ್ನು ಸಾಕಿ ಸಲಹಿ ಇಷ್ಟು ದೊಡ್ಡವನನ್ನಾಗಿ ಮಾಡಿದ್ದಾಳೆ. ಅವಳ ಆತ್ಮೀಯರಲ್ಲೆಲ್ಲಾ ಅತ್ಯಂತ ಆತ್ಮೀಯ

ನವನು. ದುಃಖದಲ್ಲಿ ಒಂದು ಸಮಾಧಾನ, ವಿಪತ್ತಿನಲ್ಲಿ ಆಶ್ರಯದಂತಿರುವವನು. ಅಷ್ಟೇಕೆ ಅವಳಿಗೆ ಅವನು ಪ್ರಾಣಕ್ಕಿಂತಲೂ ಪ್ರಿಯನಾದವನು. ಈ ಅನರ್ಥ ಸಂಭವಿಸಿದರೆ ಅವಳು ಬದುಕಲಾರಳು. ಆದರೂ ಕರ್ತವ್ಯವನ್ನು ಬಿಡುವಂತಿಲ್ಲ. ಸರ್ವಸ್ವವೂ ಲಯವಾಗುವ ಕಾಲ ಒದಗಿ ಬಂದಂತೆ ತೋರಿತು ಆದರೆ ಅದನ್ನು ತಪ್ಪಿಸಲು ಸಾಧ್ಯವಿಲ್ಲ..ಆಡಿದ ಮಾತು ಹಿಂದಕ್ಕೆ ಬರಲಾರದು. ಇದರ ಪರಿಣಾಮವೇನಾಗುವುದೋ ಹೇಳಲು ಬರುವುದಿಲ್ಲ. ಹೀಗಾಗಿ ಅವಳು ಸಮಾಧಾನ ತಂದುಕೊಳ್ಳಲಾರದೇ ಹೋದಳು. ತಡೆಯಲಾರದ ಕೋಪ ಮತ್ತು ಅಭಿಮಾನದ ಬಿರುಗಾಳಿಯು ಅವಳನ್ನು ಮುಂದಕ್ಕೆ ದೂಡಿತು. ಅವಳು ಕಠೋರ ದನಿಯಲ್ಲಿ—"ವಿಪಿನ್, ನಿನ್ನದು ಬಹಳ ಅನ್ಯಾಯ. ಹಟಮಾಡಬೇಡ. ನಿನಗಾಗಿ ನಾನು ಮಗಳು ಅಳಿಯನನ್ನು ಕಳೆದುಕೊಳ್ಳಲು ಇಷ್ಟ ಪಡುವುದಿಲ್ಲ. ನಿನಗೆ ತೋರಿದಂತೆ ಮಾಡು. ಶಶಧರ, ನನ್ನೊಡನೆ ಬಾ. ಅವನ ಮಾತು ಗಮನಿಸಬೇಕಾದ್ದಿಲ್ಲ ಮನೆ ಅವನೊಬ್ಬನದೇ ಏನಲ್ಲ."—ಇಷ್ಟು ಹೇಳಿ ಶಶಧರ ಮತ್ತು ಕಲ್ಯಾಣಿಯನ್ನು ಜೊತೆಯಲ್ಲಿ ಕರೆದುಕೊಂಡು ಹೊರಟುಹೋದಳು. ಅವರ ಆತ್ಮೀಯರಲ್ಲೊಬ್ಬಳೋ ಎನ್ನುವಂತೆ ಮೈತ್ರೇಯಿ ಅವರನ್ನು ಹಿಂಬಾಲಿಸಿದಳು.

ಸತಿಯ ಹೃದಯವು ವಿದೀರ್ಣವಾಗುವುದೆಂಬ ಭಯ ಎಲ್ಲರಿಗೂ ಇತ್ತು. ಆದರೆ ಅವಳ ನಿಶ್ಚಲವಾದ ಸ್ಥೈರ್ಯವನ್ನು ಕಂಡು ವಂದನ ಮತ್ತು ವಿಪ್ರದಾಸ್ ಇಬ್ಬರೂ ಆಶ್ಚರ್ಯದಿಂದ ದಂಗುಬಡಿದು ನಿಂತು ಬಿಟ್ಟರು. ಅವಳ ಕಣ್ಣಿನಲ್ಲಿ ಅಳುವಿಲ್ಲ. ಆದರೆ ಮುಖ ಮಾತ್ರ ಬೆಳ್ಳಗೆ ಬಿಳಚಿಕೊಂಡಿತ್ತು. ಅವಳೇ ಮಾತು ಪ್ರಾರಂಭಿಸಿದಳು.—"ಭಾವ ಏನು ಮಾಡಿದರೋ ನಮಗೆ ಗೊತ್ತಿಲ್ಲ. ಆದರೆ ನೀವು ವಿನಾಕಾರಣ ಇಷ್ಟು ದೊಡ್ಡ ರಾದ್ಧಾಂತ ಮಾಡಲಾರಿರೆಂದು ನನ್ನ ದೃಢ ನಂಬಿಕೆ. ಏನೂ ಯೋಚಿಸಬೇಡಿ. ನನಗೆ ಲೇಶಮಾತ್ರವೂ ನಿಮ್ಮ ಮೇಲೆ ಸಿಟ್ಟಿಲ್ಲ."

ವಿಪ್ರದಾಸ ಸುಮ್ಮನೇ ಇದ್ದ.

"ನೀವು ಈ ದಿನವೇ ಹೊರಟುಬಿಡುವಿರೋ?" ಎಂದು ಸತಿ ಕೇಳಿದಳು.

" ಇಲ್ಲ. ನಾಳೆ ಹೋಗುತ್ತೇನೆ.''

" ಇನ್ನು ಈ ಮನೆಗೆ ಬರುವುದಿಲ್ಲವೆ? "

' ಇಲ್ಲ '

" ನಾನು ? ವಾಸು ? "

" ನೀವೂ ಹೊರಡಬೇಕಾಗುತ್ತದೆ. ನಾಳೆ ಹೊರಡಲಾಗದಿದ್ದರೆ ಇನ್ನೆಂದಾದರೂ ".

'' ಇಲ್ಲ. ಇನ್ನೆಂದಾದರೂ ಸಾಧ್ಯವಿಲ್ಲ. ನಾಳೆ ನಾವೂ ನಿಮ್ಮ ಜೊತೆಯಲ್ಲೇ ಹೊರಡುತ್ತೇವೆ.—ಇಷ್ಟು ಹೇಳಿ " ವಂದನ, ನೀನೇನು ಮಾಡುತ್ತೀ? ನಾಳೆಯೇ ಹೊರಡುತ್ತೀಯಾ?" ಎಂದು ಅವಳನ್ನು ಕೇಳಿದಳು.

'' ಇಲ್ಲ.'' ವಂದನ ಹೇಳಿದಳು '' ಅಕ್ಕ, ನಾನೇನೂ ವ್ಯಾಜ್ಯ ಮಾಡಿಲ್ಲ ಗುಂಪು ಕಟ್ಟಿಕೊಂಡು ಹೊರಡುವುದಕ್ಕೆ." ಸತಿ :—ನಾನೂ ವ್ಯಾಜ್ಯಮಾಡಿಲ್ಲ ವಂದನ. ಇವರಾದರೂ ಆಡಿಲ್ಲ. ಆದರೆ ಎಲ್ಲಿ ಇವರಿಗೇ ಎಡೆ ಇಲ್ಲವೊ ಅಲ್ಲಿ ನಾನು ಇರಲಾರೆ. ನಿನಗೆ ಮದುವೆಯಾಗಿದ್ದರೆ ಇದು ನಿನಗರ್ಥವಾಗುತ್ತಿತ್ತು."

'' ಮದುವೆ ಆಗದೇ ಇದ್ದರೂ ತಿಳಿದುಕೊಳ್ಳಬಲ್ಲೆ- ಅಕ್ಕ, ಪತಿಗೆ ಎಲ್ಲಿ ಸ್ಥಾನವಿಲ್ಲವೋ ಅಲ್ಲಿ ಪತ್ನಿಗೂ ಸ್ಥಾನವಿಲ್ಲ. ತಪ್ಪು ಆಗುವುದು ಸಹಜ. ಆದರೆ ಅದನ್ನು ತಿಳಿದುಕೊಳ್ಳದ ಒಪ್ಪಿಕೊಳ್ಳುವುದು ಸ್ತ್ರೀಯ ಕರ್ತವ್ಯ, ಎಂಬ ನಿನ್ನ ಈ ಮಾತನ್ನು ಮಾತ್ರ ನಂಬಲಾರೆ."

ಅತ್ತೆಯ ವಿಷಯದಲ್ಲಿ ಸತಿಗೆ ತುಂಬ ಅಭಿಮಾನ. ಅವರ ಬಗ್ಗೆ ನೆನೆದಾಗ ಸತಿಗೆ ಅಳು ಬಂತು. ಕಣ್ಣೀರನ್ನು ತಡೆಯಲು ಅಲ್ಲಿಂದ ವೇಗವಾಗಿ ಹೊರಟುಹೋದಳು.

" ಇದೇನು ಮಾಡಿಬಿಟ್ಟಿರಿ ಮುಖರ್ಜಿಸಾಹಬ್ ? " ವಂದನ ಕೇಳಿದಳು.

" ಇದು ಬಿಟ್ಟು ನನಗೆ ಬೇರೆ ಮಾರ್ಗವಿರಲಿಲ್ಲ, ವಂದನ."

" ಆದರೆ ತಾಯಿಯ ಮುಖ ತೊರೆದು ಹೋಗಲು ನಿಮಗೆ ಮನಸ್ಸು ಹೇಗೆ ಬಂತು. ''

"ನೀನು ಹೇಳುವುದೇನೋ ನಿಜ. ಆದರೆ ಹೊಸ ಹೊಸ ಸಮಸ್ಯೆಗಳು ಬಂದಂತೆ ಹೊಸ ಸಮಾಧಾನವನ್ನೂ ಹುಡುಕಬೇಕು. ಅಲ್ಲವೇ?

"ನಿಮ್ಮ ಅಕ್ಕನಂತೂ ನನ್ನ ಜೊತೆಯಲ್ಲೇ ಹೊರಡುತ್ತಾಳೆ. ಆದರೆ ನೀನು? ಇನ್ನೂ ಒಂದೆರಡು ದಿನ ಇರುವ ವಿಚಾರವೋ ಹೇಗೆ?"

"ಎಷ್ಟು ದಿನ ಇರಬೇಕಾಗುತ್ತೋ ನನಗೆ ಗೊತ್ತಿಲ್ಲ'' ವಂದನ ಹೇಳಿದಳು—"ನಿಮ್ಮ ಮುಂದೆ ಹೊಸ ಹೊಸ ಸಮಸ್ಯೆಗಳು ಬೇಕಾದಷ್ಟು ಬರುತ್ತಿರಲಿ. ನಾನು ಮಾತ್ರ ಅವುಗಳಿಗೆ ಆದೇ ಹಳೇ ರೀತಿಯಲ್ಲಿ ಉತ್ತರವನ್ನು ಹುಡುಕುತ್ತಿರುತ್ತೇನೆ.—ನಿಮ್ಮ ಮನೆಗೆ ಅಕಸ್ಮಾತ್ತಾಗಿ ಬಂದು ಒಳಗೆ ಕಾಲಿಟ್ಟೆನಲ್ಲಾ ಅಂದಿನಿಂದ ನನ್ನ ಮನಸ್ಸಿನ ಗತಿಯೇ ಬದಲಾಯಿಸಿಬಿಟ್ಟಿದೆ."

ವಿಪ್ರದಾಸನು ಇದಕ್ಕೆ ಏನೂ ಉತ್ತರ ಕೊಡಲಿಲ್ಲ. ಅವನ ತುಟಿಯ ಅಂಚಿನಲ್ಲಿ ಮಾತ್ರ ಎಳೆ ನಗುವು ಮೂಡಿತು. ಆ ನಗುವಿನಲ್ಲಿ ಎಷ್ಟು ವೇದನೆಯಿದ್ದಿತೋ ಅಷ್ಟೇ ನಿರಾಶೆಯೂ ಅಡಕವಾಗಿದ್ದಿತು.

ವಿಪ್ರದಾಸ್ 'ನಾನು ಹೊರಗೆ ಹೋಗುತ್ತೇನೆ. ಪುನಃ ಭೇಟಿಯಾಗೋಣ' ಎಂದು ಹೇಳಿದನು.

ವಂದನಳ ಕಣ್ಣೀರು ಆವಿಯಾಗಿ ಹೋಗುತ್ತಿತ್ತು. "ಒಂದು ಪಕ್ಷ ಪುನಃ ಭೆಟ್ಟಿಯಾದರೆ ನಿಮಗೆ ದೂರದಿಂದಲೇ ನಮಸ್ಕರಿಸುತ್ತೇನೆ. ನಿಮ್ಮ ಪ್ರಕೃತಿ ಅತಿ ಕಠೋರವಾದುದು. ಎಂಥ ಕಠಿಣ ಹೃದಯ! ಅದರಲ್ಲಿ ಸ್ನೇಹವೂ ಇಲ್ಲ, ಕ್ಷಮೆಯೂ ಇಲ್ಲ. ಮತ್ತೊಮ್ಮೆ ಹೇಳಲು ಸಮಯ ಸಿಗದೇ ಇರಬಹುದು. ಅದಕ್ಕೇ ಈಗಲೇ ಹೇಳಿದ್ದೇನೆ. ಮನೆ ಮಠ ಸುಖ ದುಃಖ, ಮಾನ ಅಭಿಮಾನ ಇವೆಲ್ಲ ಯಾರಿಗೆ ಇದೆಯೋ ಅವರನ್ನು ಜೊತೆಯಲ್ಲಿ ಸೇರಿಸಿಕೊಂಡು ನಾವು ಜೀವನವನ್ನು ಸಾಗಿಸೋಣ. ಈ ಜೀವನದಲ್ಲಿ ಅವರನ್ನು ನಮ್ಮವರೆಂದು ಅರಿತುಕೊಳ್ಳೋಣ. ಸುಮ್ಮನೆ ವ್ಯರ್ಥವಾಗಿ ಬಿಸಿಲುಕುದುರೆಯ ಹಿಂದೆ ಓಡುವುದು ಬೇಡ" ಎಂದು ಹೇಳಿ ತಡೆದು ಪುನಃ ಮುಂದುವರಿಸಿದಳು—"ದೂರವಿರುವಾಗ ತಮ್ಮ ನೆನಪೇನಾದರೂ ಬಂದರೆ ಆಗ ಇಷ್ಟು ಮಾತ್ರ ಏಕಾಗ್ರತೆಯಿಂದ ಜಪಿಸುತ್ತೇನೆ. ಅವರು ನಿರ್ಮಲರು, ಪಾಪಲೇಶವೂ ಅವರಿಗಿಲ್ಲ. ಅವರು ದೊಡ್ಡವರು; ಅವರ ಕಲ್ಪನೆಯು ನಿಷ್ಕಲಂಕವಾದುದು; ಪ್ರಪಂಚದ

ಮಧ್ಯೆ ಇದ್ದರೂ ಅವರು ಒಬ್ಬಂಟಿಗರು. ತನ್ನವರೆನ್ನುವರು ಅವರಿಗಿಲ್ಲ. ಈ ಪ್ರಪಂಚದಲ್ಲಿ ಯಾರೂ ಅವರವರಾಗಿ ಜೀವಿಸಲಾರರು" ಎಂದು. ಹೀಗೆ ಹೇಳುತ್ತ ಸೆರಗಿನಿಂದ ಕಣ್ಣನ್ನು ಒತ್ತಿ ಹಿಡಿದು ಹೊರಟು ಹೋದಳು.

* * * *

ಆ ರಾತ್ರಿ ಮನೆಗೆಲಸ ಮುಗಿಯುವ ಹೊತ್ತಿಗೆ ಬಹಳ ಹೊತ್ತಾಯಿತು. ಆ ಶ್ರೃಂಖಲಾಬದ್ಧರಾದ ಸುವ್ಯಸ್ಥಿತ ಪರಿವಾರದ ಕೆಲಸ ಕಾರ್ಯಗಳಲ್ಲಿ ಏನೊಂದೂ ವಿಘ್ನವಾಗಲಿ ಬಾಧೆಯಾಗಲಿ ಕಂಡು ಬರಲಿಲ್ಲ; ಬೆಳಗಾಗಲು ಇನ್ನು ಹೆಚ್ಚು ಕಾಲವಿಲ್ಲ. ಎಲ್ಲರೂ ಕೆಲಸಕಾರ್ಯದಿಂದ ಆಯಾಸಗೊಂಡಿದ್ದರಿಂದ ಇಡೀ ಮನೆಯಲ್ಲಿ ನಿಸ್ತಬ್ಧತೆಯು ತಾಂಡವವಾಡುತ್ತಿದೆ. ಯಾರಿಗೆ ಎಲ್ಲಿ ಸ್ಥಳಸಿಕ್ಕಿತೋ ಅಲ್ಲಿಯೋ ಬಿದ್ದುಕೊಂಡು ನಿದ್ರಿಸುತ್ತಿದ್ದಾರೆ. ತನ್ನ ಭಾರೀ ಜವಾಬ್ದಾರಿ ಕೆಲಸವನ್ನು ಮುಗಿಸಿಕೊಂಡು ವಂದನ ಸೋತ ಕಾಲುಗಳನ್ನು ಎಳೆದು ಹಾಕುತ್ತ ತನ್ನ ಕೋಣೆಯ ಕಡೆ ಹೊರಟಳು. ಆ ಕಡೆ ಜಗುಲಿಯ ಹತ್ತಿರ ದ್ವಿಜದಾಸನ ಕೋಣೆಯಲ್ಲಿ ದೀಪ ಉರಿಯುತ್ತಿದೆ. ಈ ಹೊತ್ತಿನಲ್ಲಿ ಅಲ್ಲಿಗೆ ಹೋಗುವುದು ಸರಿಯೋ ತಪ್ಪೋ ಎಂಬ ಸಂಶಯವು ಅವಳ ಮನಸ್ಸನ್ನು ಆವರಿಸಿತು. ಯಾರಾದರೂ ನೋಡಿದರೆ ಅನ್ಯಾಯವಾಗಿ ನೂರೊಂದು ವಿಧದಲ್ಲಿ ದೂರುವರೆಂದು ತಿಳಿದಳು. ಆದಾಗ್ಯೂ ಅವಳಿಗೆ ಸುಮ್ಮನಿರಲಾಗಲಿಲ್ಲ. ಯಾವ ಉದ್ವೇಗವು ಬೆಳಗಿನಿಂದ ಇದುವರೆಗೂ ಅವಳ ಮನಸ್ಸಿನಲ್ಲಿ ಕಳವಳ ಮತ್ತು ಅಶಾಂತಿಯನ್ನುಂಟುಮಾಡಿದೆಯೋ ಅದೇ ಈಗ ಅವಳನ್ನು ಆ ಕಡೆ ಎಳೆದುಕೊಂಡು ಹೋಯಿತು. ಬಾಗಿಲು ಮುಚ್ಚಿದ್ದಿತು. ಅವಳು ಹೋಗಿ "ದ್ವಿಜಬಾಬು ಇನ್ನೂ ಎದ್ದಿರುವಿರಾ?" ಎಂದು ಕೂಗಿದಳು.

"ಹೌದು. ರಾತ್ರಿ ಇಷ್ಟು ಹೊತ್ತಿನಮೇಲೆ ನೀವು ಬಂದದ್ದು?" ಒಳಗಿನಿಂದ ಉತ್ತರ ಬಂದಿತು.

"ಬರಲೆ?"

"ಸಂತೋಷವಾಗಿ"

ಬಾಗಿಲು ತೆರೆದುಕೊಂಡು ವಂದನ ಒಳಗೆ ಪ್ರವೇಶಿಸಿದಳು. ಪರ್ವತಾಕಾರವಾಗಿ ಬಿದ್ದಿರುವ ಕಾಗದಪತ್ರಗಳನ್ನು ನೋಡುತ್ತ ದ್ವಿಜದಾಸ

ಹಾಸಿಗೆಯ ಮೇಲೆ ಕುಳಿತಿದ್ದಾನೆ. ವಂದನ ಕೇಳಿದಳು. "ಇದು ಇವತ್ತಿನ ಲೆಕ್ಕವೆ? ದ್ವಿಜಬಾಬು, ಲೆಕ್ಕ ಏನೂ ಓಡಿಹೋಗುವುದಿಲ್ಲ. ಇಷ್ಟು ಹೊತ್ತಾದರೂ ಎದ್ದಿದ್ದೀರಲ್ಲಾ, ಆರೋಗ್ಯ ಕೆಟ್ಟುಹೋದರೆ?"

"ಕೆಟ್ಟು ಹೋಗಿದ್ದರೆ ಬದುಕುತ್ತಿದ್ದೆ. ಇವನ್ನೆಲ್ಲ ಕಣ್ಣಿಂದ ನೋಡ ಬೇಕಾಗುತ್ತಿರಲಿಲ್ಲ."

"ಖರ್ಚು ವಿಪರೀತವಾಗಿರಬೇಕು ಅಲ್ಲವೆ? ಅಣ್ಣಂದಿರ ಮುಂದೆ ಇದಕ್ಕೆ ಸಮಜಾಯಿಷಿ ಹೇಳಬೇಕಾಗುತ್ತದೆ ಅಲ್ಲವೇನು".

ದ್ವಿಜದಾಸ ಕಾಗದಪತ್ರಗಳನ್ನು ಒತ್ತರಿಸಿ ನೆಟ್ಟಗೆ ಕುಳಿತುಕೊಂಡು ಹೇಳಿದ—"ವಂದನ ನೋಡು, 'ಚಕ್ರಂ ಪರಿವರ್ತಂತೇ ದುಃಖಾನಿಚ ಸುಖಾನಿಚ' ಎಂದು ದೊಡ್ಡವರು ಹೇಳಿದ್ದಾರೆ. ಶ್ರೀಗುರುವಿನ ಪರಮ ಕೃಪೆಯಿಂದ ಆ ದಿನಗಳು ಕಳೆದು ಹೋದುವು. ಅಣ್ಣನಿಗೆ ಸಮಜಾಯಿಷಿ ಹೇಳುವ ಕಾಲ ಈಗಿಲ್ಲ. "ಎಲ್ಲಿ ಲೆಕ್ಕ ತೆಗಿ. ದುಡ್ಡು ತೆಗೆದುಕೊಂಡು ಬಾ. ಹೇಗೆ ಖರ್ಚು ಮಾಡಿದೆ ಹೇಳು?" ಎಂದು, ಅವರನ್ನು ಈಗ ನಾನೇ ಕೇಳುತ್ತೇನೆ."

ವಂದನ ದಂಗುಬಡಿದು "ಏನು ಸಮಾಚಾರ?" ಎಂದು ಕೇಳಿದಳು. ದ್ವಿಜದಾಸನು ಎರಡು ಕೈಗಳನ್ನೂ ಬಿಗಿಯಾಗಿ ಮುಷ್ಟಿಕಟ್ಟಿ ತಲೆಯ ಮೇಲಕ್ಕೆತ್ತಿ "ಬಹಳ ಭಯಂಕರವಾದ ವಿಚಾರ." ಎಂದು ಹೇಳಲು ಪಕ್ರಮಿಸಿದ. ಮಾತೆ ನನ್ನಲ್ಲಿ ದಯೆ ತೋರಲಿ. ಭಾವ ಶಶಿಧರನು ಸಹಾಯ ಕನಾಗಿರಲಿ—ವಿಪ್ರದಾಸನ ದ್ರವ್ಯ ಮತ್ತು ಪ್ರಾಣ ಎರಡನ್ನೂ ಆಗ ನಾನು ಕಿತ್ತುಕೊಳ್ಳುತ್ತೇನೆ. ನಮ್ಮಣ್ಣ ನಮ್ಮ ಕೈಯಿಂದ ತಪ್ಪಿಸಿಕೊಳ್ಳಲಾರ.'

ವಂದನಳಿಗೆ ಚಿಂತೆ ಮಿತಿಮೀರಿ ಹೋಯಿತು. ಆದಾಗ್ಯೂ ನಗು ಬರದೇ ಇರಲಿಲ್ಲ. "ತಮಗೆ ಎಲ್ಲ ವಿಷಯದಲ್ಲೂ ತಮಾಷೆ ಕಂಡು ಬರುತ್ತದೆ. ದ್ವಿಜ ಬಾಬು, ತಮಗೆ ಒಂದು ಕ್ಷಣಕಾಲವಾದರೂ ಸೀರಿಯಸ್ಸಾಗಿರಲು ಸಾಧ್ಯವಿಲ್ಲವೆ?" ಎಂದು ಕೇಳಿದಳು.

ದ್ವಿಜದಾಸ :—"ಸಾಧ್ಯವಿಲ್ಲದೇ ಏನು? ಶಶಿಧರನನ್ನು ಕರೆದು ಕೊಂಡು ಬಾ. ಅವರು ಬೇಡ. ಅವರು ಎದುರಿಗೆ ಬಂದರೆ ಹಾಸ್ಯ, ಕುಚೋದ್ಯ ಎಲ್ಲ ಊರುಬಿಟ್ಟು ಸಹರಾ ಮರುಭೂಮಿಗೆ ಓಡಿಹೋಗು

ತ್ತದೆ. ಮರಸಂಡಿಗೆ ಗಡ್ಡೆಯಂತೆ ಮುಖ ಗಂಭೀರವಾಗುತ್ತದೆ. ಬೇಕಾದರೆ ಪರೀಕ್ಷಿಸಿ ನೋಡು."

ಕುರ್ಚಿಯನ್ನೆಳೆದುಕೊಂಡು ಕುಳಿತುಕೊಂಡು ವಂದನ ಕೇಳಿದಳು.—" ಹಾಗಾದರೆ ನಿಮಗೆ ಎಲ್ಲ ಗೊತ್ತಿರಬೇಕು ".

' ಇಲ್ಲ ಎಲ್ಲೋ ಸ್ವಲ್ಪ. ಎಲ್ಲ ಗೊತ್ತಿರೋದು ಅಣ್ಣನಿಗೆ. ಅದೊಂದು ದೊಡ್ಡ ಕಾಡು. ಅಲ್ಲಿ ಏನೂಗೊತ್ತಾಗುವುದಿಲ್ಲ. ಮತ್ತೆ ಶಶಿಧರನಿಗೂ ಗೊತ್ತು. ಅವನು ಹೇಳಿಯೂ ಹೇಳುತ್ತಾನೆ. ಆದರೆ ಎಲ್ಲ ಸುಳ್ಳು.

ವಂದನ ವ್ಯಾಕುಲತೆಯಿಂದ " ನಿಮಗೆ ಗೊತ್ತಿರುವಷ್ಟನ್ನಾದರೂ ನನಗೆ ಹೇಳಿ ;—ನನಗೆ ನಿಜವಾಗಿಯೂ ಬಹಳ ಹೆದರಿಕೆಯಾಗಿದೆ " ಎಂದು ಹೇಳಿದಳು.

" ಹೆದರುವುದು ವ್ಯರ್ಥ. ಅಣ್ಣನ ಸಂಕಲ್ಪ ದೃಢವಾದುದು.—ನಮ್ಮ ಪಾಲಿಗೆ ಇನ್ನು ಅವರಿಲ್ಲ. "

ದೀಪದ ಪ್ರಕಾಶದಲ್ಲಿ ಉಕ್ಕಿ ಬರುತ್ತಿರುವ ಅವನ ಕಣ್ಣುಗಳು ಹೊಳೆಯುತ್ತಿದ್ದವು. ಹೇಗೋ ಪ್ರಯತ್ನಪಟ್ಟು ;ಬೇರೆ ಕಡೆ ಮುಖ ತಿರುಗಿಸಿ ಕಣ್ಣೊರಸಿಕೊಂಡು ನೆಟ್ಟಗೆ ಕುಳಿತ.''

" ಇಷ್ಟು ಸುಲಭವಾಗಿ ವಿಚ್ಛೇದದ ಸಾಧ್ಯವೆ ? ಇದನ್ನು ತಡೆಗಟ್ಟಲು ಸಾಧ್ಯವಿಲ್ಲವೆ ?"—ವಂದನಳ ದನಿ ಭಾರವಾಗಿತ್ತು.

ದ್ವಿಜದಾಸ ತಲೆಯಲ್ಲಾಡಿಸುತ್ತ ಹೇಳಿದ—" ಇಲ್ಲ, ಸಾಧ್ಯವಿಲ್ಲ. ಇವೆಲ್ಲ ಬಂದರೆ ಹೀಗೆ ಬರುತ್ತವೆ. ತಡೆಯುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಅಷ್ಟು ವೇಗವಾಗಿ ಬೇಡವೆಂದರೂ ಬಿಡುವುದಿಲ್ಲ. ಅಳು ಬಂದರೆ ಅಳುತ್ತಿರಬೇಕು. ಆದರೆ ಅಳುವೇ ಅದರ ಅಂತ್ಯ''—ಕ್ಷಣಕಾಲ ಸುಮ್ಮನಿದ್ದು ಪುನಃ ಮಾತು ಮುಂದುವರಿಸಿದ—ಕಾರಣ ತಿಳಿಯ ಬೇಕೆಂಬ ಕುತೂಹಲವಿದೆ ಅಲ್ಲವೆ ? ಎಲ್ಲ ಗೊತ್ತಿಲ್ಲ ನನಗೆ. ಗೊತ್ತಿರುವಷ್ಟನ್ನು ಮಾತ್ರ ನಿಮಗೆ ಹೇಳುತ್ತೇನೆ. ನನಗೇನಾದರೂ ಅವಶ್ಯಕವೆಂದು ತೋರಿದರೆ ನೀವು ಎಲ್ಲಿಬೇಕಾದರೂ ಇರಿ. ನಿಮ್ಮ ಸಹಾಯವನ್ನು ಕೋರುತ್ತೇನೆ.''

'' ಕೇವಲ ನನ್ನ ಸಹಾಯವನ್ನೇ ಏಕೆ ? "

" ಕಾರಣ ಇಷ್ಟೆ. ಕೈಚಾಚಬೇಕಾಗಿ ಬಂದರೆ ದೊಡ್ಡವರ ಮುಂದೆ ಕೈಚಾಚಬೇಕು. ಶಾಸ್ತ್ರ ಹೀಗಿದೆ."

" ದೊಡ್ಡವರು ಇನ್ನಾರೂ ಇಲ್ಲವೆ ? "

" ಇರಬಹುದು. ಆದರೆ ನನಗೆ ಗೊತ್ತಿಲ್ಲ. ಅಣ್ಣನ ಮಾತು ನಾನು ಎತ್ತುವುದಿಲ್ಲ. ಯಾವಾಗಲೂ ಅತ್ತಿಗೆಯ ಮುಂದೆ ಕೈ ಒಡ್ಡುವ ಅಭ್ಯಾಸ. ಇನ್ನು ಅದಕ್ಕೂ ಮಾರ್ಗವಿಲ್ಲ. ನೀವು ಅವರ ತಂಗಿ. ಆ ಸಂಬಂಧ ಇರುವುದರಿಂದ ಹೇಳಿದೆ."

" ಅಮ್ಮ ಇಲ್ಲವೆ ? "

" ರಥ ವೇಗವಾಗಿ ಸಾಗುತ್ತಿದ್ದರೆ ಅಮ್ಮ ಅದರ ಅಸಾಧಾರಣ ಸಾರಥಿಯಾಗಿರಬಲ್ಲಳು ; ಅದೇ, ಗಾಲಿ ಕೆಸರಿನಲ್ಲಿ ಹೂತು ಹೋದರೆ ಅವಳು ಉಪಾಯ ತೋರದೆ ಅಸಹಾಯಳಾಗಿ ಕುಳಿತುಬಿಡುತ್ತಾಳೆ. ಇಳಿದು ಅದನ್ನು ತಳ್ಳಲಾರಳು. ಅಂಥ ಕಷ್ಟ ಕಾಲದಲ್ಲಿ ನಿಮ್ಮ ಹತ್ತಿರ ಬರುತ್ತೇನೆ. ನೆರವು ನೀಡುವಿರಾ ? "

" ಏನು ಬೇಡುವಿರೆಂದು ತಿಳಿಯದೆ ಹೇಗೆ ಮಾತು ಕೊಡಲಿ, ದ್ವಿಜಬಾಬು ? "

" ಅದು ನನಗೇ ಗೊತ್ತಿಲ್ಲ ವಂದನ. ಎಷ್ಟು ಗೊತ್ತಿದೆಯೊ ಅದೂ ಭ್ರಮೆಯಲ್ಲವೆಂದು ಖಚಿತವಾಗಿ ಹೇಳಲಾರೆ. ಆದರೆ ಒಂದು ವಿಷಯದಲ್ಲಿ ಕೊಂಚವೂ ಸಂದೇಹವಿಲ್ಲ. ಅಣ್ಣನ ಸರ್ವಸ್ವವೂ ಹಾಳಾಗಿ ಹೋಯಿತು. —ಅವರ ಹತ್ತಿರ ಏನೂ ಉಳಿಯಲಿಲ್ಲ. ಎಲ್ಲ ಹೋಯಿತು."

ವಂದನ ಬೆಚ್ಚಿದಳು—" ಮುಖರ್ಜಿಯವರು ಎಲ್ಲರನ್ನೂ ಕಳೆದು ಕೊಂಡರೆ ? ಹೇಗೆ ? " ಎಂದು ಕೇಳಿದಳು.

" ಬಹಳ ಸುಲಭವಾಗಿ ಆ ಶಶಿಧರನ ಷಡ್ಯಂತ್ರದಿಂದ. ಅಕಸ್ಮಾತ್ತಾಗಿ ಆ ದಿನ ಚೌಧುರೀ ಕಂಪೆನಿಯು ಪಾಪರ್‌ಚೀಟಿ ತೆಗೆದುಕೊಂಡಿತು. ಆಗಲೇ ಅದರ ಜೊತೆಯಲ್ಲೇ ಅಣ್ಣನ ಸರ್ವಸ್ವವೂ ಹೊರಟು ಹೋಯಿತು. ಅದರ ಒಳಗಡೆ ಇರುವ ಇತಿಹಾಸ ಯಾರಿಗೂ ತಿಳಿಯದೇ ಹೋಯಿತು.

ವ್ಯಾಕುಲಳಾಗಿ " ಇತಿಹಾಸದ ಮಾತಿರಲಿ. ಏನು ನಡೆಯಿತೆಂಬು

ದನ್ನು ಹೇಳಿ. ಎಲ್ಲ ಕಳೆದುಕೊಂಡ ಸಂಗತಿ ನಿಜವೋ ಸುಳ್ಳೊ?'' ವಂದನ ಕೇಳಿದಳು.

'' ಹೌದು ನಿಜ. ಅದರಲ್ಲೇನೂ ಸುಳ್ಳಿಲ್ಲ.''

'' ಮತ್ತೆ ಅಕ್ಕ? ವಾಸು? ಅವರಿಗೂ ಏನೂ ಉಳಿಯಲಿಲ್ಲವೆ?''

'' ಇಲ್ಲ. ಅವಳ ತೌರುಮನೆ ಉತ್ಪತ್ತಿ ಮಾತ್ರ ಉಳಿದಿದೆ. ಅದೂ ಕೊಂಚ. ಬಹಳ ಕಡಿಮೆ.

'' ಆದರೆ ಮುಖರ್ಜಿಯವರು ಅದನ್ನು ಕೈಯಿಂದ ಸಹ ಮುಟ್ಟುವುದಿಲ್ಲ. ಉಪವಾಸವಾದರೂ ಇದ್ದಾರು.''

ಇಬ್ಬರೂ ಮೌನದಿಂದಿದ್ದರು.

'' ಮತ್ತೆ ತಾವು? ತಮ್ಮ ಭಾಗದ್ದು ಇತ್ತಲ್ಲ. ಅದೇನಾಯಿತು?'' ಕೆಲವು ನಿಮಿಷಗಳ ಅನಂತರ ವಂದನ ಪ್ರಶ್ನಿಸಿದಳು.

'' ನನಗೇನೂ ಭಯವಿಲ್ಲ ಏನೂ ಕೊರತೆಯಿಲ್ಲ. ಅಣ್ಣ ಮುಳುಗಿದರು ಆದರೆ ನನ್ನನ್ನು ಮುಳುಗಿಸಲಿಲ್ಲ. ಒಂದು ಗುಟುಕು ನೀರು ಸಹ ಕುಡಿಯಲು ನನ್ನನ್ನು ಬಿಡಲಿಲ್ಲ. ಇದು ಅಸಂಭವವಲ್ಲವೆ? ಅದು ಹೇಗೆ ಸಾಧ್ಯ ಎಂದು ನೀವು ಕೇಳಬಹುದು. ಸಾಧ್ಯವಾಯಿತು. ಅಮ್ಮನ ಸುಬುದ್ಧಿ, ಅಣ್ಣನ ಸದ್ಭಾವನೆ ಮತ್ತು ನನ್ನ ಗ್ರಹಗಳ ಶುಭ ದೃಷ್ಟಿಯಿಂದ ಸಾಧ್ಯವಾಯಿತು. ಪೂರ್ತಿಕತೆ ಹೇಳುತ್ತೇನೆ ಕೇಳಿ -ಈ ಶಶಿಧರ ನಮ್ಮ ಅಣ್ಣನ ಬಾಲ್ಯ ಸ್ನೇಹಿತ. ಒಟ್ಟಿಗೇ ಓದಿದವರು. ಇವರ ಪರಸ್ಪರ ಪ್ರೇಮ ಹೇಳತೀರದು ಅಷ್ಟಿತ್ತು. ದೊಡ್ಡವರಾದ ಮೇಲೆ ಅಣ್ಣ ಕಲ್ಯಾಣಿಯನ್ನು ಅವನಿಗೆ ಕೊಟ್ಟು ಮದುವೆ ಮಾಡಿದರು. ಈ ಸಂಬಂಧ ಅಣ್ಣನ ಜೀವನದಲ್ಲಿ ಅತಿ ಮಹತ್ತರವಾದುದು. ಅವರ ಕೀರ್ತಿಯನ್ನು ಉಳಿಸುವಂತಹುದು. ಶಶಿಧರನ ತಂದೆ ದೊಡ್ಡ ಜಮೀನ್ದಾರರು. ಬೇಕಾದಷ್ಟು ಹಣವಿದೆ. ದೊಡ್ಡ ವ್ಯಾಪಾರ ನಡೆಯುತ್ತಿದೆ. ಪಬನಾ ಜಿಲ್ಲೆಯಲ್ಲಿ ಅಷ್ಟು ಧನಿಕರು ಬೇರೊಬ್ಬರಿಲ್ಲ ಎಂತ ಕೇಳಿದ್ದೆವು. ಮದುವೆ ಆಗಿ ನಾಲ್ಕು ವರ್ಷ ಸಹ ಆಗಿಲ್ಲ. ಒಂದು ದಿನ ಶಶಿಧರ ಬಂದು ಹೇಳಿದ ' ನನ್ನ ಜಮೀನು ಮನೆಮಠ, ಹಣಕಾಸು, ವ್ಯಾಪಾರ ಎಲ್ಲ ಮುಳುಗುವ ಸ್ಥಿತಿಯಲ್ಲಿದೆ, ಹೆಚ್ಚು ಅವಕಾಶವಿಲ್ಲ. ಹೇಗಾದರೂ ಮಾಡಿ ಉಳಿಸಿಕೊಳ್ಳ

ಬೇಕಾಗಿದೆ ಅಂತ. ‘ ಹೌದು ಉಳಿಸಬೇಕು ಅದು ಯೋಗ್ಯವಾದ ವಿಚಾರ. ಆದರೆ ನನ್ನ ಮಗ ದ್ವಿಜು ಇನ್ನೂ ಮೈನರು. ಅವನ ಆಸ್ತಿಯಲ್ಲಿ ಬಿಡಿಕಾಸೂ ಸಹ ಮುಟ್ಟುವ ಹಾಗಿಲ್ಲ, ಎಂದು ತಾಯಿ ಹೇಳಿದರು. ‘ ವರ್ಷದೊಳಗೆ ಎಲ್ಲ ತೀರಿಸಿಬಿಡುತ್ತೇನೆಂದು ಶಶಿಧರ ಭರವಸೆ ಹೇಳಿದ. ‘ ಹಾಗೇ ಆಗಲಿ ಎಂದು ಆಶೀರ್ವಾದ ಮಾಡುತ್ತೇನೆ. ಆದರೆ ಮೈನರ್ ಆಸ್ತಿ. ಅವನ ತಂದೆ ಅದನ್ನು ಖಂಡಿತ ಮುಟ್ಟಬೇಡವೆಂದು ಹೇಳಿ ಹೋಗಿದ್ದಾರೆ ’ ಎಂದು ತಾಯಿ ಖಡಾಖಂಡಿತ ಹೇಳಿಬಿಟ್ಟರು.

ಆಗ ಕಲ್ಯಾಣಿ ಅಳುತ್ತ ಮನೆಗ ಬಂದು ಅಣ್ಣನ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ‘ ಅಣ್ಣ, ನನ್ನ ಮದುವೆ ಮಾಡಿದವನು ನೀನೇ. ಈಗ ಮಕ್ಕಳುಮರಿಯನ್ನು ಕರೆದುಕೊಂಡು ನಾನು ಭಿಕ್ಷಕ್ಕೆ ಹೊರಡಲೇ ? ನೀನು ಅದನ್ನು ಕಣ್ಣಿನಿಂದ ನೋಡುತ್ತಿರುವೆಯಾ ? ಅಮ್ಮ ನೋಡಬಹುದು. ಆದರೆ ನೀನು ?—ಹೀಗೆ ಅಣ್ಣನ ವಿವೇಕ ವೈರಾಗ್ಯ ಮತ್ತು ಯಾವ ಕಾರಣದಿಂದ ಅವರು ನಮ್ಮೆಲ್ಲರಿಗಿಂತಲೂ ದೊಡ್ಡವರಾಗಿ ದ್ದಾರೆಯೊ, ಯಾವುದನ್ನೂ ಅವರು ಧರ್ಮವೆಂದು ನಂಬಿದ್ದಾರೆಯೊ ಅದನ್ನು ಉಲ್ಲೇಖಿಸುತ್ತಾ ಹೇಳಿದಳು. ಆಗ ಅಣ್ಣ ಅವಳಿಗೆ ಅಭಯದಾನ ಮಾಡುತ್ತ ‘ ತಂಗಿ, ಏಳು. ಏನು ಮಾಡಬೇಕೋ ಅದನ್ನು ನಾನು ಮಾಡುತ್ತೇನೆ. ನೀನು ನಿಶ್ಚಿಂತಳಾಗಿ ಮನೆಗೆ ಹೋಗು ’ ಎಂದು ಹೇಳಿ ದರು. ಕಲ್ಯಾಣಿ ಅದೇ ಮಂತ್ರವನ್ನು ಜಪಿಸುತ್ತ ಮನೆಗೆ ಹೋದಳು. ಇದರ ಮುಂದಿನ ಕತೆ ಬಹಳ ಸ್ವಲ್ಪ ಉಳಿದಿದೆ. ಆದರೆ ವಂದನ, ಅಲ್ಲಿ ನೋಡು. ಬೆಳಗಾಯಿತು ಎಂದು ಹೇಳುತ್ತ ತೆರೆದ ಕಿಟಕಿಯ ಕಡೆ ಅವಳ ದೃಷ್ಟಿಯನ್ನು ಆಕರ್ಷಿಸಿದ.

ವಂದನ ಎದ್ದು ನಿಂತು “ ಈ ಕಾಗದವೆಲ್ಲ ನಿಮ್ಮದೋ ಹೇಗೆ ? ” ಎಂದು ಪ್ರಶ್ನಿಸಿದಳು.

“ ನನ್ನನ್ನು ನಿರ್ಭಯವಾಗಿಡುವ ಕಾಗದಪತ್ರಗಳು. ಬರುವಾಗ ಅಣ್ಣ ಜೊತೆಯಲ್ಲಿ ತಂದಿದ್ದರು. ನಿಮ್ಮನ್ನು ಒಂದುಮಾತು ಕೇಳಬೇ ಕೆಂದಿದ್ದೆ. ನೀವೂ ನಮ್ಮನ್ನು ಬಿಟ್ಟು ಈ ದಿನ ಹೊರಟುಹೋಗುವಿರಾ ? ”

“ ದ್ವಿಜಬಾಬು, ಅದಿನ್ನೂ ಸರಿಯಾಗಿ ಗೊತ್ತಿಲ್ಲ. ಈಗ ಹೊತ್ತಿಲ್ಲ

ಹೋಗುತ್ತೇನೆ ಪುನಃ ನೋಡೋಣ ಎಂದು ಹೇಳಿ ಮೆಲ್ಲಗೆ ಕೋಣೆ ಯಿಂದ ಹೊರಕ್ಕೆ ಬಂದಳು.

೨೪

ಅಕ್ಕನನ್ನು ಬಲಾತ್ಕಾರವಾಗಿ ಕುರ್ಚಿಯ ಮೇಲೆ ಕೂಡಿಸಿ ವಂದನ ಅವಳ ಕಾಲಿಗೆ ಮಹಾವರ*ವನ್ನು ಹಚ್ಚುತ್ತಿದ್ದಳು. ಅವಳಿಗೆ ಈ ಮಂಗಲಾ ಚರಣೆಯನ್ನು ಕಲಿಸಿ ಅನ್ನದ ಎಲ್ಲೋ ಹೋಗಿ ಅವಿತುಕೊಂಡಿದ್ದಾಳೆ. ಅವಳ ಕಣ್ಣು ಕೆಂಪಾಗಿದ್ದವು. ಒಂದೇ ಸಮನೆ ಅಳುತ್ತಿದ್ದ ಕಾರಣ ಕಣ್ಣು ಊದಿದ್ದಿತು. ಇದಕ್ಕೆ ವಂದನ ಕಾರಣವನ್ನು ಕೇಳಿದಾಗ ಅವಳು ಸಂಕ್ಷೇಪ ವಾಗಿ ಸತಿಯಮ್ಮನವರಿಗೆ ನಾನು ಮುಖ ತೋರಿಸುವಂತಿಲ್ಲ ಎಂದು ಹೇಳಿದಳು.

" ಅನ್ನದ, ಮುಖ ಏಕೆ ತೋರಿಸುವಂತಿಲ್ಲ. ಅಂಥ ನಾಚಿಕೊಳ್ಳುವ ಕೆಲಸ ನೀನೇನು ಮಾಡಿದ್ದೀಯೆ ? "

ಇವನ್ನೆಲ್ಲ ಕಣ್ಣಿಂದ ನೋಡುವುದಕ್ಕೆ ಮುಂಚೆ ಸಾಯದೆ ಬದು ಕಿರುವುದು ನಾಚಿಕೆಗೇಡಲ್ಲವೆ? ಅಮ್ಮ, ನಾನು ಕೇವಲ ದ್ವಿಜದಾಸನನ್ನು ಮಾತ್ರ ಸಾಕಿ ಸಲಹಿ ದೊಡ್ಡವರನ್ನಾಗಿ ಮಾಡಲಿಲ್ಲ. ವಿಪ್ರದಾಸರನ್ನೂ ಸಾಕಿ ಸಲಹಿದ್ದೇನೆ. ಅವರ ತಾಯಿ ಸತ್ತಾಗ ತನ್ನ ಎರಡು ತಿಂಗಳ ಕಂದನನ್ನು ಯಾರ ವಶಕ್ಕೆ ಕೊಟ್ಟಿದ್ದರು ? ನನ್ನ ಕೈಗೇ ತಾನೆ? ಆಗ ದಯಾಮಯಿ ಎಲ್ಲಿದ್ದರು? ಅವರ ಮಗಳು ಅಳಿಯ ಇವರೆಲ್ಲಿದ್ದರು ? " ಎಂದು ಹೇಳುತ್ತ ಹೇಳುತ್ತ ಸೆರಗಿನಿಂದ ಮುಖ ಮುಚ್ಚಿಕೊಂಡು ಅವಳು ಎಲ್ಲಿಗೋ ಹೊರಟುಹೋದಳು.

ವಂದನ ನೆಲದ ಮೇಲೆ ಕುಳಿತು ಅಕ್ಕನ ಕಾಲನ್ನು ಮೊಳಕಾಲಿನ ಮೇಲಿಟ್ಟುಕೊಂಡು ಮಹಾವರವನ್ನು ಹಚ್ಚುತ್ತಿದ್ದಳು. ಅದು ಮುಗಿಯು ವಂತೆ ತೋರುತ್ತಿರಲಿಲ್ಲ.

---

* ಉತ್ತರ ಭಾರತದಲ್ಲಿ ಸೌಭಾಗ್ಯವತಿ ಸ್ತ್ರೀಯರು ಒಂದು ತರದ ಕೆಂಪು ರಸವನ್ನು ಹೆಜ್ಜೆಯ ಸುತ್ತಲೂ ಹಚ್ಚಿಕೊಳ್ಳುತ್ತಾರೆ. ಅದಕ್ಕೆ ಮಹಾವರವೆಂದು ಹೆಸರು.

ಅವಳ ಕಣ್ಣಿನಿಂದ ಒಂದು ತೊಟ್ಟು ಬಿಸಿನೀರು ಸತಿಯ ಕಾಲಿನ ಮೇಲೆ ಬಿದ್ದಿತು. ಬಗ್ಗಿದರೂ ಅವಳಿಗೆ ವಂದನಳ ಮುಖ ಕಾಣಿಸಲಿಲ್ಲ. ಕೈಯಿಂದ ಅವಳ ಕಣ್ಣೀರನ್ನು ಒರೆಸುತ್ತ 'ವಂದನ, ನೀನೇಕೆ ಅಳುತ್ತಿದ್ದೀಯೆ ಹೇಳು?' ಎಂದು ಕೇಳಿದಳು.

ವಂದನ ಅದೇ ರೀತಿ ತಲೆ ತಗ್ಗಿಸಿಕೊಂಡು, ಅಳುತ್ತ ಹೇಳಿದಳು "ಎಲ್ಲರೂ ಅಳುತ್ತಿದ್ದಾರಕ್ಕ ನಾನೊಬ್ಬಳೇ ಅಲ್ಲ."

"ಎಲ್ಲರೂ ಅಳುತ್ತಿದ್ದಾರೆ ಅಂದ ಮಾತ್ರಕ್ಕೆ ನೀನೂ ಅಳಬೇಕೆ? ಇಷ್ಟು ಓದಿ ಬರೆದು ನೀನು ಕಲಿತಿರುವುದು ಇಷ್ಟೇ ತಾನೆ?"

ಸತಿಯ ಮಾತು ಕೇಳಿ ವಂದನ ತಲೆ ಎತ್ತಿ ಒಮ್ಮೆ ಅವಳ ಮುಖದ ಕಡೆ ನೋಡಿ ಹೇಳಿದಳು "ಏನು, ಕಾರಣವನ್ನು ತೋರಿಸಿಯೇ ಮನುಷ್ಯನು ಅಳಬೇಕೆ? ಸುಮ್ಮನೆ ಅಳಲು ಸಾಧ್ಯವಿಲ್ಲವೆ? ಆಹ ಇದೆಂಥ ತರ್ಕ ನಿನ್ನದು."

ಸತಿ ತನ್ನ ಕೈಯಿಂದ ವಂದನಳ ತಲೆಯನ್ನು ಅಲುಗಿಸಿ ಸ್ನೇಹದಿಂದ 'ತರ್ಕವಾಗೀಶರನ್ನು ತರ್ಕದಲ್ಲಿ ಗೆಲ್ಲುವುದು ಕಷ್ಟ. ನಾನೇನೂ ಹಾಗೆ ಹೇಳಲಿಲ್ಲ. ನಮ್ಮ ಸರ್ವಸ್ವವೂ ಹಾಳಾಯಿತೆಂದು ಯೋಚಿಸಿ ಅವರೆಲ್ಲ ಅಳುತ್ತಿದ್ದಾರೆ. ಆದರೆ ವಾಸ್ತವವಾಗಿ ಏನೂ ಆಗಿಲ್ಲ. ನನಗೆ ಒಂದು ಕಡೆ ಗಂಡ ಇದ್ದಾರೆ ಇನ್ನೊಂದು ಕಡೆ ಮಗ ಇದ್ದಾನೆ. ಪ್ರಪಂಚದಲ್ಲಿ ನನಗಾಗಿರುವ ನಷ್ಟವಾದರೂ ಏನು ಹೇಳು? ನನಗೋಸ್ಕರ ನೀನು ಅಳಬೇಡ. ನನಗೇನು ಚಿಂತೆ ಇದೆ ಹೇಳು?" ಎಂದು ಕೇಳಿದಳು.

"ದೇವರ ದಯೆಯಿಂದ ನಿನಗೆ ದುಃಖ ಒದಗುವುದೇ ಬೇಡ. ಆದರೆ ನಿನ್ನ ದುಃಖವೇ ಸರ್ವಸ್ವವೂ ಅಲ್ಲ ತಾನೆ. ನಿನ್ನದೇನು ಹೋಯಿತೆಂಬುದು ನಿನಗೆ ಗೊತ್ತು. ಅತ್ತು ಅತ್ತು ಕಣ್ಣು ಕೆಂಪಾಗಿದೆಯಲ್ಲ. ಅದರ ನಷ್ಟವನ್ನು ಯಾರು ಕಟ್ಟಿಕೊಡಬಲ್ಲರು ಹೇಳು."—ವಂದನ ಪ್ರಶ್ನಿಸಿದಳು.

ಪುನಃ ಕ್ಷಣಕಾಲ ಸುಮ್ಮನಿದ್ದು ಹೇಳತೊಡಗಿದಳು—ಮುಖರ್ಜಿಯವರು ಗಂಡಸರು. ಅವರು ಮನಸ್ಸಿಗೆ ಏನು ತೋಚಿದರೆ ಅದನ್ನು ಹೇಳಲಿ. ಆದರೆ ನೀನು ಮಾತ್ರ ನಮ್ಮನ್ನು ತೊರೆದು ಹೋಗಬೇಡ. ಇದರಿಂದ ಎಲ್ಲರಿಗೂ ಬಹಳ ವೇದನೆಯಾಗುವುದು."

“ ಯಾರಿಗಮ್ಮ ಇದರಿಂದ ವೇದನೆಯಾಗುವುದು ? ”

“ ಯಾರಿಗೆ ! ನಿನಗೆ ಗೊತ್ತಿಲ್ಲವೊ ? ನೀನು ಕೇವಲ ಒಂಬತ್ತು ವರ್ಷದವಳಾದಾಗ ಈ ಪರರ ಮನೆಯಲ್ಲಿ ಕಾಲಿಟ್ಟೆ. ಅಂದಿನಿಂದ ವರ್ಷ ವರ್ಷಕ್ಕೆ ನಿನ್ನನ್ನು ಬೆಳಸಿ, ಇದನ್ನು ನಿನ್ನ ಮನೆಯಾಗಿ ಮಾಡಿದವರು ಯಾರು—ಅಕ್ಕ, ಈ ದಿನದ ಒಂದು ಸಣ್ಣ ದುರ್ಘಟನೆಯಿಂದ ಅವರನ್ನು ಮರೆತುಬಿಟ್ಟೆಯಾ ? ನಿನ್ನ ಅತ್ತೆ, ನಿನ್ನ ಮೈದುನ, ನಿನ್ನ ಮನೆಯ ದಾಸ ದಾಸಿಯರು, ಆಶ್ರಿತರು, ಮಂದಿರ, ಅತಿಥಿಶಾಲೆ, ಗೋಶಾಲೆ, ಗುರು, ಪುರೋಹಿತರು—ಇವರನ್ನೆಲ್ಲ ನೀನು ಕಳೆದುಕೊಳ್ಳುವುದಿಲ್ಲವೆ ? ಕೇವಲ ಗಂಡ ಮತ್ತು ಮಗನಿಂದ ನಿನಗೆ ಅವು ದೊರೆಯುವುವೆ ? ಈ ಜೀವನದಲ್ಲಿ ಗಂಡ ಮಕ್ಕಳನ್ನು ಬಿಟ್ಟರೆ ಇನ್ನೇನೂ ಇಲ್ಲವೆ ? ಅವರೇ ಸರ್ವಸ್ವವೆ ? ” ವಂದನೆ ಮುಂದುವರಿಸಿದಳು—“ ಇದು ಯಾರ ಬಾಯಿಂದ ಬರುವ ಮಾತು ಗೊತ್ತೇ? ಅಕ್ಕ? ನಾನು ಯಾವ ಸಮಾಜದಲ್ಲಿ ಬೆಳೆದು ದೊಡ್ಡವಳಾಗಿದ್ದೇನೊ ಆ ಸಮಾಜದ ಜನಗಳಿಂದ. ಬಹುಶಃ ಇದೇ ಪತಿಭಕ್ತಿಯು ಎಲ್ಲೆ ಎಂದು ನೀನು ಯೋಚಿಸುತ್ತಿರಬಹುದು. ಹೆಂಗಸಿಗೆ ಇದಕ್ಕಿಂತಲೂ ಬೇರೆ ಯೋಚಿಸುವ ವಿಷಯವಿಲ್ಲೆಂದು ತಿಳಿದಿರಬಹುದು. ಆದರೆ ಇದು ನಿನ್ನ ತಪ್ಪು ಭಾವನೆ. ಕಲ್ಕತ್ತೆಯಲ್ಲಿ ನನ್ನ ಚಿಕ್ಕಮ್ಮನ ಮನೆಗೆ ಬಾ. ನೋಡುವಿಯಂತೆ ಈ ಮಾತು ಎಷ್ಟು ಹಳೆಯದಾಗಿಬಿಟ್ಟಿದೆ ಅಂತ. ಇದಕ್ಕಿಂತ ಹೆಚ್ಚು ಅವರು ಯೋಚಿಸುವುದೂ ಇಲ್ಲ. ಮಾಡುವುದೂ ಇಲ್ಲ. ಇಷ್ಟು ಮಾತ್ರ ಅಲ್ಲ ಮತ್ತೆ....'' ಎಂದು ಹೇಳುತ್ತಿರುವಾಗ ಅವಳ ಮಾತು ನಿಂತಿತು. ಯಾರೊ ಹಿಂದೆ ಬಂದು ನಿಂತಿರಬೇಕೆಂದು ಅವಳಿಗನ್ನಿಸಿತು. ತಿರುಗಿ ನೋಡಿದಾಗ ಅಲ್ಲಿ ದ್ವಿಜದಾಸ ನಿಂತಿದ್ದಾನೆ. ಅವನು ಯಾವಾಗ ಅಲ್ಲಿ ಬಂದು ನಿಂತನೆಂಬುದು ಇಬ್ಬರಲ್ಲಿ ಒಬ್ಬರಿಗೂ ಗೊತ್ತಿಲ್ಲ. ನಾಚಿಕೆಪಟ್ಟು ವಂದನ ಏನೋ ಹೇಳಬೇಕೆಂದಿದ್ದಳು. ಅಷ್ಟರಲ್ಲಿ ದ್ವಿಜದಾಸನೇ ಮಾತು ಪ್ರಾರಂಭಿಸಿದ—“ ಏನೂ ಹೆದರಬೇಕಾಗಿಲ್ಲ. ನಿಮ್ಮ ಚಿಕ್ಕಮ್ಮನ ಗುರುತು ನನಗಿಲ್ಲ. ಅಥವ ಅವಳ ಪರಿವಾರದವರು ಬೇರೆ ಯಾರೂ ನನಗೆ ಗೊತ್ತಿಲ್ಲ. ನಿನ್ನ ಮಾತುಗಳನ್ನು ಅವರಿಗೆ ಹೇಳಲು ಹೋಗುವುದಿಲ್ಲ. ಆದರೆ ವಾಸ್ತವವಾಗಿ ನೀವು ಒಂದು ತಪ್ಪು

ಮಾಡುತ್ತಿದ್ದೀರಿ. ಪ್ರಪಂಚದಲ್ಲಿ ಪಶು ಪಕ್ಷಿಗಳದ್ದು ಒಂದೊಂದು ಗುಂಪಿರುತ್ತದೆ ; ಅವುಗಳ ವರ್ತನೆಯನ್ನು ಒಂದು ಸೂತ್ರರೂಪವಾಗಿ ಎಣಿಸಿ ಹೇಳಬಹುದು. ಆದರೆ ಮನುಷ್ಯರಲ್ಲಿ ಅಂತಹ ಗುಂಪಿರುವುದಿಲ್ಲ. ಎಲ್ಲರನ್ನೂ ಒಟ್ಟು ಸೇರಿಸಿ ಟೀಕಿಸುವುದು ಸರಿಯಲ್ಲ. ಬೆಳಿಗ್ಗಿನಿಂದ ನಾನು ಇದನ್ನೇ ಯೋಚಿಸುತ್ತಿದ್ದೇನೆ. ಅಕ್ಕನ ಪರಿವಾರದಿಂದ ನಿಮ್ಮನ್ನು ಬೇರ್ಪಡಿಸಿ ಅಣ್ಣನ ಸಂಗಡದೊಂದಿಗೆ ಸೇರಿಸಬಹುದು. ಮತ್ತೆ ದಯಾಮಯಿ ಗುಂಪಿನಿಂದ ಮೈತ್ರೇಯಿಯನ್ನು ಎಳೆದೊಯ್ದು ನಿಮ್ಮ ಚಿಕ್ಕಮ್ಮನ ಸಮಾಜಕ್ಕೆ ಸುಖವಾಗಿ ಸೇರಿಸಬಹುದು. ಏನು ಬೇಕಾದರೂ ಷರತ್ತು. ಇದರಿಂದ ಎಳ್ಳಷ್ಟೂ ವ್ಯತ್ಯಾಸವಾಗುವುದಿಲ್ಲ. ಅಹ ಮನುಷ್ಯನದು ಎಂಥ ಮನಸ್ಸು! ಎಂತಹ ಪ್ರಕೃತಿ! ಸತಿ ಪರಮಾಶ್ಚರ್ಯದಿಂದ ಕೇಳಿದಳು— 'ಲಾಲಜಿ ನಿನ್ನ ಮಾತಿನ ಅರ್ಥವೇನು ?'

ದ್ವಿಜದಾಸನು ಅವಳಿಗಿಂತಲೂ ಹೆಚ್ಚು ಆಶ್ಚರ್ಯವನ್ನು ಪ್ರಕಟಿಸುತ್ತ—ಅತ್ತಿಗೆ ನಿನಗೂ ಇದರ ಅರ್ಥ ಹೇಳಬೇಕೆ ? ದ್ವಿಜೂನ ಮಾತು ಅಥವ ಕೆಲಸಕ್ಕೂ ಏನಾದರೂ ಅರ್ಥವಿದ್ದರೆ, ಅತ್ತಿಗೆ ಇರುವವರೆಗೂ ದಯಾಮಯರಾದ ವಿಪ್ರದಾಸರ ದರ್ಬಾರಿಗೆ ಹೋಗದೆ ನಿನ್ನ ಮುಂದೇಕೆ ಎಲ್ಲ ಅರ್ಜಿಗಳನ್ನು ಇಡುತ್ತಿದ್ದ. ಅರ್ಥ ತಿಳಿದುಕೊಳ್ಳಬೇಕಾದ ಅವಶ್ಯಕತೆ ನಿನಗಿಲ್ಲ. ಆದುದರಿಂದಲೇ ತಾನೆ ? ಈಗ ನೀನು ಹೊರಟು ಹೋಗುವಾಗಲೂ ಅದೇ ರೀತಿ . ಸರಿ ತಪ್ಪುಗಳನ್ನು ಎಳೆ ಎಳೆಯಾಗಿ ಬಿಡಿಸಿ ನೋಡುವ ಆವಶ್ಯಕತೆ ಇಲ್ಲ—ಇಷ್ಟು ಹೇಳಿ ಮುಂದೆ ಬಂದು ಅವನು ಅತ್ತಿಗೆಯ ಕಾಲು ಮುಟ್ಟಿ ನಮಸ್ಕರಿಸಿದನು. ಹಾಗೆ ಸಾಮಾನ್ಯವಾಗಿ ಅವನು ಮಾಡುತ್ತಿರಲಿಲ್ಲ. ಕಾಲಿನ ಮಹಾವರದ ಬಣ್ಣ ಹಸಿಯಾಗಿದ್ದರೂ ಹಣೆಗೆ ಹತ್ತಿತು. ಸತಿ ಬಹಳ ಆತುರದಿಂದ ಸೆರಗಿನಿಂದ ಅದನ್ನು ಒರೆಸಬೇಕೆಂದಿದ್ದಳು. ಅಷ್ಟರಲ್ಲಿ ದ್ವಿಜದಾಸನು ಕತ್ತು ತಿರಗಿಸಿ ಹಣೆಯನ್ನು ಒರೆಸಲು ಬಿಡದೆ ಹೇಳಿದನು—" ಅತ್ತಿಗೆ ಈ ಗುರುತು ತನ್ನಷ್ಟಕ್ಕೆ ತಾನೇ ಅಳಿಸಿ ಹೋಗುತ್ತದೆ. ಕಡೆಯಪಕ್ಷ ಒಂದು ದಿನವಾದರೂ ಇರಲೇಳು,"—ಮಾತು ಅಷ್ಟು ವಿಶೇಷವಾದುದೇನೂ ಅಲ್ಲ. ದ್ವಿಜದಾಸನು ನಗುತ್ತಲೇ ಹೇಳಿದನು. ಆದರೆ ವಂದನ ಎರಡು ಕಣ್ಣುಗಳಲ್ಲಿಯೂ ಪ್ರವಾಹವೇ ಉಕ್ಕಿ ಬಂದಿತು.

ಅದನ್ನು ಮರೆಮಾಚಲು ಯತ್ನಿಸಿದಳು. ಮತ್ತೆ ಮುಖ ಎತ್ತಲೂ ಸಹ ಆಗಲಿಲ್ಲ.

ದ್ವಿಜದಾಸ ಹೇಳಿದ —"ನಾನು ನಿಮಗೆ ಹೊತ್ತಾಯಿತೆಂದು ಹೇಳಲು ಬಂದಿದ್ದೆ. ಬಹಳ ಹೊತ್ತಾಯಿತು. ಅಣ್ಣ ಅವಸರ ಪಡಿಸುತ್ತಿದ್ದಾರೆ. ಸಾಮಾನುಗೀಮಾನೆಲ್ಲ ಕಳಿಸಿದ್ದಾಯಿತು. ವಾಸುಗೆ ಬಟ್ಟೆಹಾಕಿ ಕಾರಿನಲ್ಲಿ ಕೂಡಿಸಿ ಬಂದಿದ್ದೇನೆ. ಈ ಮಂಗಲಾಚರಣೆಯ ಸಿದ್ಧತೆಯನ್ನು ಯಾರು ಮಾಡಿದರೋ ಗೊತ್ತಿಲ್ಲ. ಅದೂ ಹೇಗೋ ಆಗಿ ಹೋಗಿದೆ. ಎಲ್ಲೋ ಅನ್ನದ ಕೆರೆ ಭಾವಿ ಹಾರಿ ಸತ್ತು ಹೋಗಿರಬೇಕೆಂದು ಹೆದರಿದ್ದೆ; ಈಗ ಅವಳು ಎಲ್ಲೋ ಒಂದು ಕಡೆ ಬದುಕಿರಬೇಕೆಂದು ಅನಿಸುತ್ತಿದೆ. ಇಲ್ಲದಿದ್ದರೆ ಇವೆಲ್ಲ ಎಲ್ಲಿಂದ ಬರುತ್ತಿದ್ದವು. ಸರಿ ಆದರೆ ಇದುವರಿಗೂ ಹುಡುಕಿದರೂ ಅವಳು ಸಿಕ್ಕಲಿಲ್ಲ. ಅಂದಮೇಲೆ ಹುಡುಕುವುದರಿಂದ ಪ್ರಯೋಜನವಾದರೂ ಏನು? ಅತ್ತ ದಯಾಮಯಿ ಕೋಣೆಯಲ್ಲಿ ಅಗಳಿಹಾಕಿಕೊಂಡು ಕುಳಿತಿದ್ದಾಳೆ. ಈ ದುಃಖದಿಂದ ಪಾರಾಗಲು ಅವಳು ಅವಲಂಬಿಸಿರುವ ಉಪಾಯದಲ್ಲಿ ಮಾಡಬೇಕಾದ ಕೆಲಸವೇನೂ ಇಲ್ಲ. ಹ್ಞಾಂ, ಏನಾದರೂ ಹೇಳಬೇಕಾಗಿದ್ದರೆ ಶ್ರೀಮತಿ ಮೈತ್ರೇಯಿ ಇವರಿಗೆ ತಿಳಿಸಬಹುದು. ಯಥಾಸಮಯ ಅಮ್ಮನವರ ಕಿವಿಯವರೆಗೂ ಹೋಗುವುದು. ಆದರೆ ಅದರ ಆವಶ್ಯಕತೆ ಇಲ್ಲವೆಂದು ನನ್ನ ಅಭಿಪ್ರಾಯ. ಈಗ ಜಾಗ್ರತೆ ಮಾಡಿ ಬೇಗ ಕಾರಿನಲ್ಲಿ ಹೋಗಿ ಕುಳಿತುಕೊಳ್ಳಿ. ನಿಮ್ಮನ್ನು ರೈಲಿಗೆ ಹತ್ತಿಸಿಬಿಟ್ಟರೆ ಸಾಕು. ಆಮೇಲಾದರೂ ಏನಾದರೂ ಕೆಲಸವನ್ನು ಮಾಡಲು ಮನಸ್ಸು ಬರಬಹುದು.

'ನನ್ನನ್ನು ಕಳಿಸಿಕೊಡಲು ಲಾಲಾಜೀಗೆ ಎಷ್ಟು ಅವಸರ!' ಸತಿ ನಕ್ಕು ಹೇಳಿದಳು. ಅವಳ ನಗುವಿನಲ್ಲಿ ಗೆಲುವು ಇರಲಿಲ್ಲ.

"ಹೌದು ಎಷ್ಟು ಕೆಲಸ ಬಿದ್ದಿದೆ ನನಗೆ ಅಂತ"

"ಎಲ್ಲಿ ಏನು ಕೆಲಸ ಕೇಳೋಣ ಒಂದಿಷ್ಟು."

ಅತ್ತಿಗೆ ಇವತ್ತಿನವರೆಗೆ ಎಂದೂ ನನ್ನ ಕೆಲಸ ಕೇಳಲು ನೀನು ಇಷ್ಟಪಟ್ಟಿಲ್ಲ. ನಾನು ಯಾವಾಗ ಏನು ಕೇಳಿದರೂ ನೀನು ಕಾರಣವನ್ನು ಸಹ ಕೇಳದೆ ತಪ್ಪದೆ ಕೊಡುತ್ತ ಬಂದಿದ್ದೀಯೆ. ಇದು ನಿನಗೆ ಹೇಳಲು

ಯೋಗ್ಯವಾದುದಲ್ಲ."

ಸತಿ ಮತ್ತು ವಂದನ ಇಬ್ಬರೂ ಕ್ಷಣಕಾಲ ಅವನನ್ನೇ ನೋಡುತ್ತ ನಿಂತುಬಿಟ್ಟರು. ಅನಂತರ ಸತಿ ಹೇಳಿದಳು—"ಲಾಲಾಜಿ ನೀನು ಈಗ ಹೊರಡು. ಇನ್ನು ಹೊತ್ತುಮಾಡುವುದಿಲ್ಲ."—ಪುನಃ ವಂದನಳನ್ನು ಕುರಿತು —"ತಂಗಿ ನೀನು ಇನ್ನು ಹೆಚ್ಚುಕಾಲ ಇಲ್ಲಿರಬೇಡ. ಎಷ್ಟು ಜಾಗ್ರತೆಯಾದರೆ ಅಷ್ಟು ಜಾಗ್ರತೆ ಬೊಂಬಾಯಿಗೆ ಹೊರಟು ಹೋಗು. ಕಲ್ಕತ್ತೆಗೆ ಹೋಗಬೇಕಾದ ಆವಶ್ಯಕತೆ ಇಲ್ಲ. ಅಲ್ಲಿ ಕಕ್ಕ ಒಬ್ಬರೇ ಇದ್ದಾರೆ. ನೆನಪಿರಲಿ."

ವಂದನ ದ್ವಿಜದಾಸನಂತೆ ತಾನೂ ಕಾಲುಮುಟ್ಟಿ ಅವಳಿಗೆ ನಮಸ್ಕಾರ ಮಾಡಿದಳು. ಕಾಲು ಧೂಳಿಯನ್ನು ಹಣೆಗೆ ಹಚ್ಚಿಕೊಳ್ಳುತ್ತಾ ಹೇಳಿದಳು—"ಇಲ್ಲ ಅಕ್ಕ, ಇನ್ನು ಚಿಕ್ಕಮ್ಮನ ಮನೆ ಕಡೆ ಮುಖ ಹಾಕುವುದಿಲ್ಲ. ಅಲ್ಲಿನ ಪಾಠವನ್ನು ಕಲಿತುಬಂದಿದ್ದೇನೆ. ಅದನ್ನು ಮರೆಯುವಂತಿಲ್ಲ''—ಹೇಳುತ್ತ ಅವಳು ಸೆರಗಿನಿಂದ ಕಣ್ಣೊರಿಸಿಕೊಂಡು ಪುನಃ ಹೇಳತೊಡಗಿದಳು. —"ಬಹುಶಃ ನಾಳೆಯೇ ಬೊಂಬಾಯಿಗೆ ಹೊರಡುತ್ತೇನೆ. ಆದರೆ ಅಕ್ಕ, ನೀನೂ ನನಗೊಂದು ಮಾತುಕೊಟ್ಟು ಹೋಗು. ಆದಷ್ಟು ಜಾಗ್ರತೆ ನಾನು ನಿಮ್ಮನ್ನು ನೋಡಬೇಕು."

ಸತಿ ಮನಸ್ಸಿನಲ್ಲಿಯೇ ಆಶೀರ್ವದಿಸಿದಳು. ಏನು ಆಶೀರ್ವದಿಸಿದಳೊ ದೇವರೇ ಬಲ್ಲ. ಕೈಯಿಂದ ಅವಳ ಗಲ್ಲವನ್ನು ಮುಟ್ಟಿ ಚುಂಬಿಸಿದಳು. ಮತ್ತು ನಗುತ್ತ "ಅದು ನಿನ್ನ ಕೈಯಲ್ಲಿದೆ ವಂದನ" ಎಂದು ಹೇಳತೊಡಗಿದಳು—"ಹೋಗಿ ಕಕ್ಕನಿಗೆ ಹೇಳು. ನಿನ್ನ ಮದುವೆಗೆ ಕಾಗದ ಬರೆಸಲಿ ಎಲ್ಲಿದ್ದರೂ ಬರುತ್ತೇನೆ."—ಸ್ವಲ್ಪ ನಿಂತು, ಬಹುಶಃ ಹೇಳುವುದು ಉಚಿತವೊ ಅನುಚಿತವೋ ಎಂದು ಮನಸ್ಸಿನಲ್ಲಿ ಯೋಚಿಸಿ ಪುನಃ ಹೇಳಿದಳು —"ಈ ಮನೆಗೇ ನೀನು ಬರಬೇಕೆಂದು ನಾನು ಬಹಳ ಆಸೆ ಪಟ್ಟಿದ್ದೆ. ಲಾಲಾಜಿಯವರಿಗೆ ನಿನ್ನನ್ನು ಒಪ್ಪಿಸಿ, ನಿನ್ನ ಕೈಗೆ ಈ ಮನೆ ಮಠ, ನನ್ನ ವಾಸು ಇವರ ಭಾರವನ್ನು ವಹಿಸಿಕೊಟ್ಟು ಅತ್ತೆಯ ಜೊತೆಯಲ್ಲಿ ನಾನೂ ಕೈಲಾಸ ಯಾತ್ರೆಗೆ ಹೊರಡಬೇಕೆಂದಿದ್ದೆ. ಹಿಂತಿರುಗಿ ಬಂದಿದ್ದರೂ ಸರಿಯೆ, ಬಾರದಿದ್ದರೂ ಸರಿಯೆ—ಆದರೆ, ಮನುಷ್ಯ

ಬಯಸುವುದೇ ಒಂದು, ಆಗುವುದು ಮತ್ತೊಂದು"—ಇಷ್ಟು ಹೇಳಿ ಅವಳು ಸುಮ್ಮನಾದಳು. ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ ಪ್ರಾರಂಭಿಸಿದಳು —"ಈ ಮನೆಯಲ್ಲಿ ನಾನು ಏನೇನು ಪಡೆದೆನೊ ಅದನ್ನು ಈ ಪ್ರಪಂಚ ದಲ್ಲಿ ಮತ್ತೆಯಾರೂ ಪಡೆದಿರಲಾರರು. ಎಲ್ಲಕ್ಕಿಂತಲೂ ಮಿಗಿಲಾದವರು ನನ್ನ ಅತ್ತೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಈಗ ಅವರನ್ನೇ ತೊರೆಯುವ ಹೊತ್ತು ಬಂದಿತು. ಹೋಗುವಾಗ ಒಂದು ನಮಸ್ಕಾರ ಸಹ ಮಾಡು ವಂತಿಲ್ಲ.—ಹೊಸಲಿನ ಮೇಲಿದ್ದ ಧೂಳನ್ನೇ ಹಣೆಗೆ ಹಚ್ಚಿಕೊಂಡು— "ಅಮ್ಮ ಈ ಮನೆಯ ಹೊಸಲಿನ ಮೇಲೆ ನಿನ್ನ ಪಾದ ಧೂಳಿ ಹತ್ತಿದೆ. ಇದೇ ನನಗೆ—" ಮಾತು ಹೇಳಿ ಮುಗಿಸಲಾಗಲಿಲ್ಲ. ಕುತ್ತಿಗೆ ಹಿಡಿದಂತಾ ಯಿತು. ಅತ್ಯಂತ ದುಃಖದಿಂದ ಅವಳು ಶಿಥಿಲಳಾದಳು. ಅವಳ ಕಣ್ಣು ಗಳಲ್ಲಿ ಕಣ್ಣೀರಿನ ಕೋಡಿಯು ಉಕ್ಕಿ ಹರಿಯಿತು. ಒಂದೆರಡು ನಿಮಿಷ ಗಳು ಬೇಕಾಯಿತು. ಸ್ವಲ್ಪ ಸಮಾಧಾನ ಮಾಡಿಕೊಳ್ಳುವುದಕ್ಕೆ ಸೆರಗಿ ನಿಂದ ಕಣ್ಣೊರಿಸಿಕೊಳ್ಳುತ್ತ ಹೇಳಿದಳು—"ಅನ್ನದಳನ್ನು ಹುಡುಕಿ ಹುಡುಕಿ ಸಾಕಾಯಿತು. ಅವಳೂ ಸಿಕ್ಕಲಿಲ್ಲ. ನಮ್ಮ ಅಮ್ಮನಿಗಿಂತಲೂ ಅವಳು ಹೆಚ್ಚು. ವಂದನ, ನಾವೆಲ್ಲ ಹೊರಟುಹೋದ ಮೇಲಾದರೂ ಸಿಕ್ಕದುದ ಕ್ಕಾಗಿ ಸಿಟ್ಟು ಮಾಡಿಕೊಂಡೆನೆಂದು ಅವಳಿಗೆ ತಿಳಿಸು." ಪುನಃ ಕಣ್ಣೀರು ಉಕ್ಕಿಬಂದಿತು. ಪುನಃ ಸೆರಗಿನಿಂದ ಒರೆಸಿಕೊಂಡಳು. ಅವಳು ಒಂದು ಬೆಕ್ಕು ಸಾಕಿದ್ದಳು. ಅದನ್ನು ಪ್ರೀತಿಯಿಂದ 'ನಿಮೂ' ಎಂದು ಕರೆಯುತ್ತಿ ದ್ದಳು. ಆ ಕಾರ್ಯಭರದಲ್ಲಿ ಆ ಬೆಕ್ಕು ಎಲ್ಲಿ ಮಾಯವಾಗಿದ್ದಿತೋ ದೇವರೇ ಬಲ್ಲ. ಬೆಳಗಿನಿಂದ ಎಷ್ಟೋ ಸಲ ಅದರ ನೆನಪು ಬಂದಿತು. ಪುನಃ ಈಗ ಅದು ಜ್ಞಾಪಕಕ್ಕೆ ಬರಲು ಹೇಳಿದಳು—"ಆ ನೀಮೂ ಕೂಡ ಎಲ್ಲಿ ಅವಿತು ಕೊಂಡಿದೆಯೋ ಅದನ್ನೂನೋಡಲಾಗಲಿಲ್ಲ. ವಂದನ, ಅನ್ನದಾಗೆ ತಿಳಿಸು." ಆಶ್ಚರ್ಯ ಎಂದರೆ ಇದೇ. ಈಗ ಕೊಂಚ ಹೊತ್ತಿನ ಕೆಳಗೆ ತನಗೆ ಏನೂ ನಷ್ಟವಾಗಿಲ್ಲವೆಂದೂ–ಒಂದು ಕಡೆ ಗಂಡ ಇನ್ನೊಂದು ಕಡೆ ಮಗ ಇರುವ ರೆಂದೂ ಒತ್ತಿ ಒತ್ತಿ ಹೇಳಿದ್ದಳು. ಅದೇ ಈಗ ಅವಳ ಮಾತು ಎಷ್ಟು ಸುಳ್ಳೆಂದು ಗೊತ್ತಾಗುತ್ತದೆ :

"ಅತ್ತಿಗೆ ಇನ್ನೂ ಮುಗಿಯಲಿಲ್ಲವೆ" ? ಹೊರಗಿನಿಂದ ದ್ವಿಜದಾಸನ

ಕೂಗು ಕೇಳಿಸಿತು.

"ಬಂದೆ, ಇಗೊ ಬಂದುಬಿಟ್ಟೆ"–ಎಂದು ಹೇಳುತ್ತ ಸತಿ ಎದ್ದು ಜಾಗ್ರತೆ ಹೊರಗೆ ಹೊರಟುಹೋದಳು.

* * * * *

ಸ್ಟೇಷನ್ನಿನಿಂದ ದ್ವಿಜದಾಸನು ಒಬ್ಬನೇ ಹಿಂತಿರುಗಿದಾಗ ಸಂಜೆಯಾಗಿತ್ತು. ಮನೆಯಲ್ಲಿ ಎಲ್ಲ ಕಡೆಯಲ್ಲಿಯೂ ದೀಪ ಉರಿಯುತ್ತಿದ್ದಿತು. ಮೊದಲಿನಂತೆ ಎಲ್ಲ ಗಂಡಸರೂ ಹೆಂಗಸರೂ ತಮ್ಮ ತಮ್ಮ ಕೆಲಸದಲ್ಲಿ ತೊಡಗಿದ್ದಾರೆ. ಎಲ್ಲಿ ಏನು ವಿಪ್ಲವವಾಯಿತೆಂಬುದರ ಗಂಧ ಸಹ ಒಬ್ಬರಿಗೂ ಇಲ್ಲ. ಹೊರಗಡೆ ಮಹಡಿಯ ಮೇಲಿದ್ದ ವಿಪ್ರದಾಸನ ಕೋಣೆಯ ಬಾಗಿಲು ಮುಚ್ಚಿದೆ. ಆ ಕಡೆ ಕತ್ತಲು ವ್ಯಾಪಿಸಿದೆ. ಆದರೇನು ಇದು ಹೊಸದಲ್ಲ. ವಿಪ್ರದಾಸನು ಕಲ್ಕತ್ತೆಗೆ ಹೋದಾಗಲೂ ಅಲ್ಲಿ ದೀಪ ಹತ್ತಿರುತ್ತಿರಲಿಲ್ಲ. ಇದರಲ್ಲಿ ಎಂದೂ ನಡೆಯದ ಹೊಸದೇನೂ ತೋರಿಬರುವುದಿಲ್ಲ. ಅದೇ ಮೆಟ್ಟಲಿನಿಂದ ಎಡಗಡೆ ಇರುವ ಕೋಣೆಯಲ್ಲಿ ಈಗ ಅಶೋಕನು ವಾಸವಾಗಿದ್ದಾನೆ. ತೆರೆದ ಕಿಟಕಿಯಿಂದಲೇ ಅವನು ದೀಪದ ಬೆಳಕಿನಲ್ಲಿ ಯಾವುದೊ ಪುಸ್ತಕವನ್ನು ಓದುವುದರಲ್ಲಿ ಮಗ್ನನಾಗಿ ಆರಾಮು ಕುರ್ಚಿಯ ಮೇಲೆ ಸುಖಾಸೀನನಾಗಿರುವಂತೆ ಕಂಡುಬಂದಿತು. ಕಾಲೇಜಿಗೆ ತಪ್ಪಿಸಿಕೊಂಡು ಅಕ್ಷಯ ಬಾಬು ಇನ್ನೂ ಇಲ್ಲೇ ಇರುವಂತೆ ತೋರಿತು. ಅವರು ತುದಿಯಲ್ಲಿರುವ ಕೋಣೆಯಲ್ಲಿದ್ದಾರೆ. ಅವರು ಮನೆಯಲ್ಲಿದ್ದಾರೋ ಅಥವ ಹೊರಗಡೆ ಗಾಳಿ ಸವಾರಿಗೆ ಹೋಗಿರುವರೋ ಗೊತ್ತಾಗಲಿಲ್ಲ. ಮೋಟಾರಿನಿಂದಿಳಿದು ಅಂಗಳದಲ್ಲಿ ಕಾಲಿಟ್ಟ ಕೂಡಲೆ ಮೂರನೆ ಮಹಡಿಯಲ್ಲಿದ್ದ ಪುಸ್ತಕಾಲಯದ ಕಡೆ ಅವನ ದೃಷ್ಟಿ ಹರಿಯಿತು. ಸಾಯಂಕಾಲದ ನಂತರ ಸಾಮಾನ್ಯವಾಗಿ ಅಲ್ಲಿ ಕತ್ತಲು ಕವಿದಿರುತ್ತದೆ. ಆದರೆ ಈ ದಿನ ತೆರೆದ ಕಿಟಕಿಯಿಂದ ಪ್ರಕಾಶವು ಹೊರಚಿಮ್ಮುತ್ತಿದೆ. ಅಲ್ಲಿ ವಂದನಳಿರಬೇಕೆಂಬ ಬಗ್ಗೆ ಅವನಿಗೆ ಸಂದೇಹವಿರಲಿಲ್ಲ. ಅವಳೇನೂ ಅಲ್ಲಿ ಪುಸ್ತಕ ಓದುತ್ತಿಲ್ಲ. ಆದರೆ ದುಃಖವನ್ನು ಶಮನಮಾಡಿಕೊಳ್ಳಲು ಅವಳು ಏಕಾಂತದ ಆಶ್ರಯವನ್ನು ಪಡೆದಿದ್ದಾಳೆ. ಹೇಗೊ ಈ ರಾತ್ರಿಯನ್ನು ಕಳೆದರೆ ಸಾಕು. ನಾಳೆ ಬೆಳಿಗ್ಗೆ ಬೊಂಬಾಯಿಗೆ ಹೊರಟುಹೋಗುತ್ತಾಳೆ.

ಅಲ್ಲಿ ಅವಳು ಬೆಳೆದು ದೊಡ್ಡವಳಾದುದು. ಅಲ್ಲಿಯೇ ಅವಳ ತಂದೆ, ಆತ್ಮೀಯರು ಸ್ವಜನರು, ಮತ್ತು ಲೆಕ್ಕವಿಲ್ಲದಷ್ಟು ಗೆಳತಿಯರು ಸಹ ಪಾಠಿಗಳು ಎಲ್ಲರೂ ಇಲ್ಲಿದ್ದಾರೆ. ಯಾವುದಾದರೂ ಕಾರಣದಿಂದ, ಎಂದಾದರೂ ಪುನಃ ಅವಳು ಈ ಮನೆಗೆ ಬರಬಹುದೆಂದು ಕೂಡ ಊಹಿಸುವುದು ಕಷ್ಟ ಸಾಧ್ಯ. ಎಂತಹ ವಿಚಿತ್ರ ವಿಶ್ವ—ಎವೆ ಇಕ್ಕುವುದರೊಳಗಾಗಿ ಎಂತೆಂತಹ ಅದ್ಭುತವೂ ಮತ್ತು ಅನಿರೀಕ್ಷಿತವೂ ಆದ ಘಟನೆಗಳು ಘಟಿಸುತ್ತವೆ. ಮೊದಲನೆಯ ದಿನದಿಂದ ಇಂದಿನವರೆಗೆ ನಡೆದ ಎಲ್ಲಾ ಘಟನೆಗಳೂ ಒಂದೊಂದಾಗಿ ದ್ವಿಜದಾಸನಿಗೆ ಜ್ಞಾಪಕಕ್ಕೆ ಬಂದಿತು ಅದೇ ಅಕಸ್ಮಾತ್ತಾಗಿ ಬಂದು ಅಕಸ್ಮಾತ್ ಕೋಪಗೊಂಡು ಹೊರಟುಹೋದುದು. ಮಧ್ಯೆ ಎಲ್ಲೋ ಕೆಲವು ಗಂಟೆಗಳ ಕಾಲ ಮಾತುಕತೆ. ಆದಿನ ವಂದನ ನಗುತ್ತ ಹೇಳಿದ್ದಳು. " ಕೇವಲ ಕಣ್ಣಿಂದ ನೋಡಿದ ಪರಿಚಯ ಮಾತ್ರವಲ್ಲ ದ್ವಿಜಬಾಬು. ಮೈದುನನ ಗುಣಾವಗುಣಗಳನ್ನು ಬರೆಯುವುದರಲ್ಲಿ ಅಕ್ಕ ಕೊಂಚವೂ ಉದಾಸೀನ ಮಾಡಿಲ್ಲ, ನನಗೆಲ್ಲ ಗೊತ್ತಿದೆ. ತಮ್ಮ ವಿಷಯದಲ್ಲಿ ನನಗೆ ತಿಳಿಯದ ಮಾತೇ ಇಲ್ಲ. ನೀವು ಯಾವಾಗ ಮನೆಮಂದಿಗೆಲ್ಲ ದುಃಖವನ್ನು ಕೊಟ್ಟಿದ್ದೀರೋ ಅದು ನನಗೆ ಕೂಡಲೇ ಗೊತ್ತಾಗುತ್ತಿತ್ತು." ದ್ವಿಜದಾಸ ಕೇಳಿದ್ದ—"ನಮ್ಮಲ್ಲಿ ಒಬ್ಬರನ್ನೊಬ್ಬರು ನೋಡಿ ಸಹ ಇರಲಿಲ್ಲ. ಆದಾಗ್ಯೂ ತಮ್ಮ ಮುಂದೆ ನನ್ನ ಅವಗುಣಗಳನ್ನು ಹೇಳಿ ನನಗೆ ಅವಮಾನ ಮಾಡುವುದರಿಂದ ಆದ ಪ್ರಯೋಜನ ? " ವಂದನ ನಕ್ಕು ಉತ್ತರ ಕೊಟ್ಟಿದ್ದಳು—" ಬಹುಶಃ ನಿಮ್ಮನ್ನು ಕಂಡರೆ ಅಕ್ಕನಿಗೆ ಮೈ ಎಲ್ಲ ಉರಿ ಎಂತ ಕಾಣುತ್ತೆ. ಅದಕ್ಕೋಸ್ಕರ ಹೀಗೆ ಪ್ರತೀಕಾರ ಮಾಡಿದ್ದಾಳೆ."

ಅನಂತರ ಇಬ್ಬರೂ ನಕ್ಕು ಮಾತನ್ನು ಪರಿಹಾಸ್ಯವಾಗಿ ತಿಳಿದುಕೊಂಡರು. ಆದರೆ ಆ ದಿನ ಒಬ್ಬರಿಗಾದರೂ ಸತಿ ವಂದಳನ ಮನಸ್ಸನ್ನು ದ್ವಿಜದಾಸನ ಕಡೆ ಸೆಳೆಯಲು ಮಾಡಿದ ಹಂಚಿಕೆ ಇದೆಂದು ಅರ್ಥವಾಗಿರಲಿಲ್ಲ. ತನ್ನ ತಂಗಿಯನ್ನು ಯಾವಾಗಲಾದರೂ ಕರೆಸಿ ಹತ್ತಿರ ಇಟ್ಟುಕೊಂಡು ತನ್ನ ಮೈದುನನನ್ನು ಅವಳ ವಶಕ್ಕೆ ಕೊಟ್ಟು ಅವನನ್ನು ದಾರಿಗೆ ತರುವ ಅವಕಾಶ ದೊರೆಯಲೇ ಇಲ್ಲ. ಅವಳ ಮನೋಭಿಲಾಷೆಯು ಮನಸ್ಸಿನಲ್ಲಿಯೇ ಅಳಿದು ಹೋಯಿತು. ಈ ದಿನ ಕೂಡ ಅವರಿಬ್ಬರಲ್ಲಿ ಒಬ್ಬರಿಗೂ

ಆ ಪತ್ರದ ಆಶಯವು ಗೊತ್ತಾಗಿಲ್ಲ.

ದ್ವಿಜದಾಸ ನೇರವಾಗಿ ಮಹಡಿಯನ್ನೇರಿದ. ಪರದೆಯನ್ನು ಸರಿಸಿ ಒಳಗೆ ಹೋಗಿ ನೋಡಿದ. ವಂದನಳ ತೊಡೆಯ ಮೇಲೆ ತೆರೆದ ಪುಸ್ತಕ ಹಾಗೇ ಬಿದ್ದಿದೆ. ಅವಳು ಮಾತ್ರ ಮೆಟ್ಟಲಿನಿಂದ ಹೊರಕ್ಕೆ ನೆಟ್ಟದೃಷ್ಟಿಯಿಂದ ಏನನ್ನೊ ನೋಡುತ್ತಿದ್ದಾಳೆ. ಒಂದು ಪಂಕ್ತಿಯನ್ನಾದರೂ ಓದಿದ್ದಾಳೆಯೊ ಇಲ್ಲವೊ ಸಂಶಯ. ಇದು ಗೊತ್ತಾದರೂ ಮಾತುಕತೆ ಪ್ರಾರಂಭಿಸಲು ಪೀಠಿಕಾರೂಪವಾಗಿ ದ್ವಿಜದಾಸ ಪ್ರಶ್ನಿಸಿದ—“ ಯಾವ ಪುಸ್ತಕ ಅದು ? ”

ವಂದನ ಪುಸ್ತಕವನ್ನು ಮುಚ್ಚಿ ಮೇಜಿನಮೇಲಿಟ್ಟಳು. ಮತ್ತೆ ಎದ್ದು ನಿಂತು “ ಹಿಂತಿರುಗಿ ಬರಲು ಇಷ್ಟು ಹೊತ್ತೇಕಾಯಿತು. ? ಕಲ್ಕತ್ತೆಯ ರೈಲು ಆಗಲೇ ಹೊರಟು ಹೋಗಿರಬೇಕು ” ಎಂದು ಕೇಳಿದಳು.

“ ಹೊತ್ತಾಯಿತು. ಆದರೂ ವಾಪಸು ಬಂದೆನಲ್ಲ. ವಾಪಸು ಬಾರದೇನೂ ಇರಬಹುದಾಗಿತ್ತು.”

“ ಸುಲಭವಾಗಿ ” ವಂದನ ಹೇಳಿದಳು.

ದ್ವಿಜದಾಸ ಕ್ಷಣಕಾಲ ಸುಮ್ಮನಿದ್ದು ಹೇಳಿದ:—“ ಮೊದಲು ನಾನೂ ಹೀಗೆಯೇ ಯೋಚಿಸಿದ್ದೆ. ರೈಲು ಹೊರಟಿತು. ಕಿಟಕಿಯಿಂದ ಹೊರಕ್ಕೆ ಮುಖಹಾಕಿ ವಾಸು ಕೈಯಲ್ಲಾಡಿಸುತ್ತಿದ್ದ. ಕ್ರಮಶಃ ಅವನ ಪುಟ್ಟ ಕೈಗಳು ರೈಲು ತಿರುಗಿದ ಕೂಡಲೆ ಮಾಯವಾಗಿ ಹೋಯಿತು. ಅವನ ಜೊತೆಯಲ್ಲಿ ಹೊರಟು ಹೋಗಿದ್ದರೆ ಚೆನ್ನಾಗಿರುತ್ತಿತ್ತೆಂದು ಆಗ ತೋರಿತು.—”

“ ತಾವು ವಾಸೂನ ಬಹಳ ಪ್ರೀತಿಸುತ್ತೀರಿ ಅಲ್ಲವೆ ?” ವಂದನ ಕೇಳಿದಳು.

ದ್ವಿಜದಾಸ ಸ್ವಲ್ಪ ಯೋಚಿಸಿ ಹೇಳಿದ—“ ನೋಡಿ ಇದಕ್ಕೆ ಉತ್ತರ ಏನು ಕೊಡಲಿ ? ಇವುಗಳ ಸ್ವರೂಪ ಸಹ ನನಗೆ ಗೊತ್ತಿಲ್ಲ. ನನ್ನ ಪಕೃತಿ ಎಷ್ಟು ಕಠೋರ ಮತ್ತು ಎಷ್ಟು ನೀರಸವಾದುದೆಂದರೆ ಒಂದೆರಡು ಕ್ಷಣದಲ್ಲಿ ಇವೆಲ್ಲವೂ ಆರಿಹೋಗಿ ಒಣ ಮರಳಿನಂತೆ ಪುನಃ ಸುಡಲು ಪ್ರಾರಂಭಿಸುತ್ತದೆ. ಪ್ಲಾಟ್‌ಫಾರಂ ಮೇಲೆ ನಿಂತಾಗ ಕಣ್ಣಿನಲ್ಲಿ ನೀರು ಬಂದಿತು. ಆದರೆ ಪುನಃ ತನ್ನಷ್ಟಕ್ಕೆ ತಾನೆ ಅದು ಆರಿಹೋಯಿತು. ಆವಿಯಾಗಿ

ಹೋದ ಚಿಹ್ನೆ ಸಹ ಉಳಿದಿಲ್ಲ.

"ಇದು ದೇವರ ಪರಮಾನುಗ್ರಹ"

"ಯಾರಿಗೆ ಗೊತ್ತು. ಇದ್ದರೂ ಇರಬಹುದು. ನಿಜ ಹೇಳುವುದಾದರೆ ವಾಸೂನ ಭಯದಿಂದಲೇ ಅಮ್ಮ ನಿನ್ನೆಯಿಂದ ಬಾಗಿಲು ಮುಚ್ಚಿಕೊಂಡು ಕೋಣೆಯಲ್ಲಿ ಕುಳಿತಿದ್ದಾಳೆ. ಇಲ್ಲದಿದ್ದರೆ ಅವಳು ಅಣ್ಣ ಅಥವ ಅತ್ತಿಗೆ ಗೋಸ್ಕರವಾಗಿ ಹಾಗೆ ಮಾಡುತ್ತಿರಲಿಲ್ಲ. 'ವಾಸೂನ ಲಾಲಿಸಿ ಪಾಲಿಸಿದವಳು ನಾನು' ಎಂದು ಅಮ್ಮ ಯೋಚಿಸುತ್ತಾಳೆ. ಆದರೆ ಲೆಕ್ಕಹಾಕಿ ನೋಡು. ಅವನ ವಯಸ್ಸಿನ ಅರ್ಧಕ್ಕಿಂತಲೂ ಹೆಚ್ಚು ಭಾಗ ಅವಳು ತೀರ್ಥಯಾತ್ರೆಯಲ್ಲಿ ಕಳದಿದ್ದಾಳೆ. ಆಗ ಅವನು ಯಾರ ಹತ್ತಿರ ಇರುತ್ತಿದ್ದ? ನನ್ನ ಹತ್ತಿರ ಅಲ್ಲವೇ? ಅವನಿಗೆ ಟೈಫೈಡ್ ಜ್ವರ ಬಂದಾಗ ಹಗಲೂ ರಾತ್ರಿ ಎನ್ನದೆ ಅರವತ್ತು ದಿನಗಳವರೆಗೆ ಅವನ ಹತ್ತಿರ ಕುಳಿತಿದ್ದವರು ಯಾರು? ನಾನೇ. ಈ ದಿನ ಅವನು ಹೊರಟುಹೋಗುವುದಕ್ಕೆ ಮುಂಚೆ ಅವನಿಗೆ ಬಟ್ಟೆ ತೊಡಿಸಿದವರಾರು? ನಾನೇ ತಾನೆ. ಅವನ ಬಟ್ಟೆ ಬರೆ ಎಲ್ಲ ಯಾರ ಬೀರುವಿನಲ್ಲಿರುತ್ತಿದ್ದವು ಗೊತ್ತೆ? ನನ್ನ ಬೀರುವಿನಲ್ಲಿ. ಅವನ ಪುಸ್ತಕ ಸ್ಲೇಟು ಎಲ್ಲವೂ ನನ್ನ ಮೇಜಿನಮೇಲಿರುತಿದ್ದವು. ನನ್ನ ಮಂಚದಮೇಲೇ ಅವನು ಮಲಗುತ್ತಿದ್ದ. ಅಮ್ಮ ಯಾವಾಗಲಾದರೂ ಪುಸಲಾಯಿಸಿ ಅವನನ್ನು ಎತ್ತಿಕೊಂಡು ಹೋಗುತ್ತಿದ್ದಳು. ಆದರೆ ರಾತ್ರಿ ಎಷ್ಟು ಹೊತ್ತಿನಲ್ಲಿ ಅವನಿಗೆ ಎಚ್ಚರವಾಗಲಿ ಎದ್ದು ನೇರವಾಗಿ ನನ್ನ ಕೋಣೆಗೆ ಓಡಿಬರುತ್ತಿದ್ದ."

ವಂದನ ಎವೆ ಇಕ್ಕದೆ ಅವನನ್ನೇ ನೋಡುತ್ತಿದ್ದಳು.

"ಅಷ್ಟಾದರೂ ಕಣ್ಣೀರು ಒಂದು ಕ್ಷಣದೊಳಗಾಗಿ ಒಣಗಿ ಹೋಯಿತೆ?" ಎಂದು ಕೇಳಿದಳು.

ದ್ವಿಜದಾಸ—"ಇಲ್ಲ, ಅದು ನನ್ನ ಸ್ವಭಾವ. ಅವನು ಅಪ್ಪ ಅಮ್ಮನ ಸಂಗಡ ಹೋಗುತ್ತಿರುವನಲ್ಲ ಎಂದು ನನಗೆ ಯೋಚನೆ ಅಷ್ಟೆ. ಇದೇ ತಾನೆ ಜಗತ್ತಿನರೀತಿ ಎಂದು ತಾವು ಹೇಳಬಹುದು. ಇದಕ್ಕೇಕೆ ಇಷ್ಟು ದುಃಖವೆಂದು ಕೇಳಬಹುದು. ಇದು ಜಗತ್ತಿನ ರೀತಿಯಾದುದರಿಂದಲೇ ತಾನೆ ನನಗಷ್ಟು ಸಂಕಟವಾಗುತ್ತಿರುವುದು. ಇಷ್ಟು ವಿರುದ್ಧ ವಿಚಾರವನ್ನು ನಿಮಗೆ ಹೇಗೆ ತಿಳಿಸಲಿ?"

ಇದನ್ನು ತಿಳಿಸುವ ಆವಶ್ಯಕತೆ ಇಲ್ಲವೆಂದು ವಂದನ ಹೇಳಲಿಲ್ಲ! ಅತ್ತ ತಂದೆ ತಾಯಿಗಳ ಮೇಲೆ ಹೊರಿಸಿದ ಅಭಿಯೋಗವು ಸತ್ಯವೆಂದು ನಂಬುವುದೂ ಕಷ್ಟ. ಅದರಲ್ಲೂ ವಿಪ್ರದಾಸನ ವಿರುದ್ಧವಾಗಿ. ಆದರೂ ಅವಳು ತರ್ಕಮಾಡದೆ ಸುಮ್ಮನಾದಳು.

ಮರುಕ್ಷಣದಲ್ಲಿ ತನ್ನ ಮಾತಿನ ಅಭಿಪ್ರಾಯವನ್ನು ವಿಶದ ಪಡಿಸುತ್ತ ದ್ವಿಜದಾಸ ಹೇಳಿದ "ನನಗೆ ಒಂದೇ ಒಂದು ಸಮಾಧಾನ. ಅತ್ತಿಗೆ ಜೊತೆಯಲ್ಲಿದ್ದಾಳೆ. ಇಲ್ಲದಿದ್ದರೆ ಅವನನ್ನು ಅಣ್ಣನಿಗೆ ಒಪ್ಪಿಸಿದಮೇಲೆ ನನಗೆ ಎಳ್ಳಷ್ಟೂ ಶಾಂತಿ ಇರುತ್ತಿರಲಿಲ್ಲ."

"ತಾವು ವಿಕಾರ ರಹಿತರು.ವಾಸುವಿನ ಯೋಗಕ್ಷೇಮ ನಿಮಗೇಕೆ? ಆಗಬೇಕಾದ್ದು ಆಗುತ್ತಿರಲಿ. ಅಲ್ಲವೆ?"—ವಂದನ ಕೇಳಿದಳು.

ಇದನ್ನು ಕೇಳಿ ದ್ವಿಜದಾಸನ ಮುಖದ ಮೇಲೆ ಗಾಢವಾದ ವೇದನೆಯ ಕಳೆಯು ಮೂಡಿತು. ಆದರೂ ಅವನು ಮಾತನಾಡಲಿಲ್ಲ.

"ಅಣ್ಣನ ವಿಷಯದಲ್ಲಿ ಒಂದು ದಿನ ತಾವೇ ಗಾಢವಾದ ವಿಶ್ವಾಸವನ್ನು ಪ್ರಕಟಿಸಿದಿರಿ. ಏನು ಅದು ಕೂಡ ಆ ಕಣ್ಣೀರಿನಂತೆ ಎವೆ ಇಕ್ಕುವುದರಲ್ಲಿ ಅಳಿದುಹೋಯಿತೆ? ಅಥವ ಯಾವನಾದರೂ ಮನುಷ್ಯನು ತನ್ನ ದೋಷದಿಂದ ತನ್ನ ಸರ್ವಸ್ವವನ್ನೂ ಕಳೆದುಕೊಂಡು ನಿರ್ಗತಿಕನಾದರೆ ಅವನ ಮೇಲೆ ವಿಶ್ವಾಸವಿಡಬಾರದು ಅಲ್ಲವೆ?—ಕೊನೆಗೆ ತಾವು ಇದನ್ನು ಹೇಳಬೇಕೆಂದಿರುವಿರಿ ಅಲ್ಲವೆ?"

ದ್ವಿಜದಾಸನು ವಿಹ್ವಲನಾಗಿ ವ್ಯಥೆಯಿಂದ ಅವಳನ್ನು ಸ್ವಲ್ಪ ಹೊತ್ತು ನೋಡುತ್ತ ನಿಂತಿದ್ದನು. ಅನಂತರ ಎರಡು ಕೈಗಳನ್ನೂ ಎತ್ತಿ ಮುಗಿಯುತ್ತ, ಮೆಲುದನಿಯಲ್ಲಿ "ಇಲ್ಲ. ಅದನ್ನು ಹೇಳಬೇಕೆಂದಿಲ್ಲ. ಬಾಯಾರಿಕೆಯನ್ನು ಹೋಗಲಾಡಿಸಿಕೊಳ್ಳಲು ಯಾರೂ ನೀರಿಗಾಗಿ ಸಮುದ್ರದ ಮುಂದೆ ಕೈಚಾಚಬಾರದೆಂದು ಹೇಳುತ್ತಿದ್ದೆ. ಇರಲಿ. ಅಣ್ಣನ ವಿಚಾರವಾಗಿ ಇನ್ನು ವಿಮರ್ಶೆ ಸಾಕು. ಅದನ್ನು ಹೊರಗಿನ ಜನಗಳು ತಿಳಿದುಕೊಳ್ಳಲಾರರು" ಎಂದು ಹೇಳಿದ.

ಆ ಮಾತು ವಂದನಳ ಒಳಗನ್ನು ಚುಚ್ಚಿತು. ಪ್ರತಿವಾದವನ್ನು ಮಾಡಲು ಅವಳಿಗೆ ಏನೂ ಸಿಕ್ಕಲಿಲ್ಲ. ಅವಳು ಸುಮ್ಮನಾದಳು.

ದ್ವಿಜದಾಸನು ಬೇರೆ ಪ್ರಸಂಗವನ್ನು ಷುರುಮಾಡಿದ.

"ಏನು, ತಾವು ನಾಳೆಯೇ ಬೊಂಬಾಯಿಗೆ ಹೊರಡುವಿರಾ ?"

ವಂದನ—"ಹೌದು"

"ಅಶೋಕ ಬಾಬುವೇ ಕರೆದುಕೊಂಡು ಹೋಗುತ್ತಾರೋ ?"

"ಹೌದು ಅವರೇ ಬಿಟ್ಟು ಬರುತ್ತಾರೆ."

ರಾತ್ರಿ ಬಹಳ ಹೊತ್ತಿನಮೇಲೆ ಬೊಂಬಾಯಿ ಮೇಲ್ ಹೊರಡುತ್ತದೆ. ನಾಳೆ ನಿಮ್ಮನ್ನು ನಾನು ಸ್ಟೇಶನ್ನಿಗೆ ಬಿಡಲು ಬರುತ್ತೇನೆ. ಹಗಲು ಇರಲು ಸಾಧ್ಯವಿಲ್ಲ, ಸ್ವಲ್ಪ ಕೆಲಸವಿದೆ.

"ತಂದೆಗೆ ಒಂದು ಟೆಲಿಗ್ರಾಂ ಕೊಡಿ"

"ಆಗಲಿ."

ಒಂದೆರಡು ನಿಮಿಷಗಳು ಸುಮ್ಮನಿದ್ದು ಅಕ್ಕಪಕ್ಕವನ್ನು ನೋಡಿ 'ತಮ್ಮ ಹತ್ತಿರ ಒಂದು ಮಾತು ಕೇಳಬೇಕೆಂದಿದ್ದೆ' ಎಂದು ಪ್ರಾರಂಭಿಸಿದನು.—"ಎಷ್ಟೋಸಲ ಕೇಳೋಣ ಅಂದುಕೊಂಡಿದ್ದೆ. ಕಾರಣಾಂತರದಿಂದ ಇಷ್ಟು ದಿನಗಳಾದರೂ ಕೇಳಲಾಗಿಲ್ಲ. ನಾಳೆ ತಾವು ಹೊರಟೇ ಹೋಗುತ್ತೀರಿ. ಪುನಃ ಅವಕಾಶ ಸಿಕ್ಕುವುದಿಲ್ಲ. ಸಿಟ್ಟು ಮಾಡಿಕೊಳ್ಳದಿದ್ದರೆ ಕೇಳುತ್ತೇನೆ."

"ಕೇಳಿ"

'ಸಿಟ್ಟು ಬಂದೀತು'

"ಸಿಟ್ಟಾಗುವುದಿಲ್ಲ, ಏನೂ ಹೆದರದೆ ನಿಸ್ಸಂಕೋಚವಾಗಿ ಕೇಳಿ." ವಂದನ ಪುನಃ ಹೇಳಿದಳು.

"ಅಮ್ಮ ಒಂದು ಸಲ ಅತ್ತಿಗೆಯನ್ನು ಕರೆದುಕೊಂಡು ಬಹಳ ಸಿಟ್ಟುಗೊಂಡು ಕಲ್ಕತ್ತೆಯಿಂದ ಹೊರಟು ಬಂದಿದ್ದರು ಜ್ಞಾಪಕವಿದೆಯೆ ?"—ದ್ವಿಜದಾಸ ಕೇಳಿದ

"ಇದೆ."

'ಕಾರಣ ಗೊತ್ತಿಲ್ಲದೆ ತಮಗೆ ಆಶ್ಚರ್ಯವಾಗಿತ್ತು. ನಿಮ್ಮ ಮನಸ್ಸು ಕೆಟ್ಟು ಹೋಗಿತ್ತು. ಆದಿನ ನನ್ನ ಕೋಣೆಗೆ ಬಂದು ನಾನು ನಿಮಗೆ ಬಹಳ ಚೆನ್ನಾಗಿ ತೋರುತ್ತಿರುವೆನೆಂದು ಹೇಳಿದ್ದಿರಿ. ಜ್ಞಾಪಕವಿದೆಯೆ ?"

" ಇದೆ. ಆದರೆ ಅದನ್ನು ಜ್ಞಾಪಿಸಿಕೊಂಡಾಗಲೆಲ್ಲ ನಾಚಿಕೆಯಾಗು ತ್ತದೆ."

" ಆದರೆ ಆಮಾತಿಗೆ ಈಗೇನೂ ಬೆಲೆ ಇಲ್ಲವೆ ?"

" ಇಲ್ಲ "

ದ್ವಿಜದಾಸ ಕೊಂಚ ಹೊತ್ತು ಸುಮ್ಮನಿದ್ದು ಪುನಃ ಹೇಳಿದ :— " ನಾನೂ ಹಾಗೆಯೇ ಯೋಚಿಸುತ್ತಿದ್ದೇನೆ. ಅದಕ್ಕೇನೂ ಬೆಲೆಯಿಲ್ಲ."

ಪುನಃ ಸ್ವಲ್ಪ ಹೊತ್ತಿನಮೇಲೆ ಹೇಳತೊಡಗಿದ—ನಿಮ್ಮ ಚಿಕ್ಕಮ್ಮ ಅಶೋಕನಿಗೆ ನಿಮ್ಮನ್ನು ಕೊಟ್ಟು ಮದುವೆ ಮಾಡಬೇಕೆಂದಿರುವರೆಂದು ಅತ್ತಿಗೆ ಹೇಳಿದ್ದಳು. ಅದು ನಿಶ್ಚಯವೇ ?

" ಇದು ನನ್ನ ಗೃಹಕೃತ್ಯದ ಮಾತು. ಹೊರಗಿನವರೊಡನೆ ಇದನ್ನು ಚರ್ಚಿಸಲು ಸಾಧ್ಯವಿಲ್ಲ."— ವಂದನ ಹೇಳಿದಳು.

" ನಾನು ಚರ್ಚಿಸುತ್ತಿಲ್ಲ ಕೇವಲ ಈ ಒಂದು ಮಾತು ತಿಳಿದುಕೊಳ್ಳ ಬೇಕೆಂದಿದ್ದೇನೆ ಅಷ್ಟೆ."

ಸ್ವಲ್ಪ ರೇಗಿದ ದನಿಯಲ್ಲಿ ವಂದನ ಹೇಳಿದಳು. ' ನನಗೂ ನಿಮಗೂ ಅಷ್ಟು ಆತ್ಮೀಯತೆ ಇಲ್ಲ. ಹೀಗಿದ್ದೂ ನೀವು ಕೇಳುವುದು ಉಚಿತವಲ್ಲ. ದ್ವಿಜಬಾಬು, ತಾವು ಸುಶಿಕ್ಷಿತರು. ಈ ವಿಷಯದಲ್ಲಿ ನಿಮಗಿರುವ ಕುತೂ ಹಲ ಲಜ್ಜಾಜನಕವಾದುದು."

ಇದನ್ನು ಕೇಳಿ ದ್ವಿಜದಾಸ ನಿಜವಾಗಿಯೂ ಲಜ್ಜಿತನಾದ. ಅವನ ಮುಖ ಮಲಿನವಾಯಿತು.—" ತಪ್ಪಾಯಿತು ವಂದನ. ಸ್ವಭಾವತಃ ನನಗೆ ಅಷ್ಟು ಕುತೂಹಲವಿಲ್ಲ. ಇನ್ನೊಬ್ಬರ ವಿಷಯದಲ್ಲಿ ನನಗೆ ಅಷ್ಟು ಆಸಕ್ತಿಯೂ ಇಲ್ಲ. ಆದರೆ ಪ್ರಪಂಚದಲ್ಲಿ ಯಾರ ಮುಂದೆಯೂ ಆಡ ಲಾಗದ ಮಾತನ್ನು ನಿಮ್ಮ ಹತ್ತಿರ ನಿಸ್ಸಂಕೋಚವಾಗಿ ಕೇಳಬಹುದೆಂದು ಹೇಗೋ ಅನ್ನಿಸುತ್ತಿದ್ದಿತು. ವಿಪತ್ತು ಬಂದಾಗ ಯಾರನ್ನೂ ಕರೆಯ ಲಾಗುವುದಿಲ್ಲ. ಆದರೆ ನಿಮ್ಮನ್ನು ಕರೆಯಬಹುದು ಎಂದು ತೋರುತ್ತಿತ್ತು. ತಾವು—

ಅವನ ಮಾತಿನ ಮಧ್ಯದಲ್ಲೇ ವಂದನ ನಕ್ಕುಬಿಟ್ಟಳು. ಆಮೇಲೆ ಹೇಳಿದಳು:— ಈಗ ತಾನೆ ನೀವು ಹೊರಗಿನವರೊಂದಿಗೆ ಅಣ್ಣನ ವಿಷಯ

ವನ್ನು ಚರ್ಚಿಸುವುದು ತರವಲ್ಲವೆಂದು ಹೇಳುತ್ತಿದ್ದೀರಿ. ಎಷ್ಟೇ ಆಗಲಿ ನಾನು ಹೊಸಬಳು—ಕೇವಲ ಪರಕೀಯಳು. ಅಲ್ಲವೆ?''

"ಅದೇ ನಿಜವಾಗಿದ್ದರೆ ತಾವೇಕೆ ನಾನು ಅಣ್ಣನ ವಿಷಯದಲ್ಲಿ ಅಶ್ರದ್ಧೆಯನ್ನು ತೋರಿಸುತ್ತಿರುವೆನೆಂದು ನನ್ನ ಮೇಲೆ ದೋಷಾರೋಪಣೆ ಮಾಡಿದಿರಿ? ನನ್ನ ಹೃದಯದಲ್ಲಿ ಏನಾಗುತ್ತಿದೆ ಎಂದು ತಮಗೆ ಗೊತ್ತಿಲ್ಲ"

ಅವನ ಕಣ್ಣುಗಳು ಒದ್ದೆಯಾಗಿವೆ ಎಂದು ದೀಪದ ಬೆಳಕಿನಲ್ಲಿ ಸ್ಪಷ್ಟವಾಗಿ ಕಂಡುಬಂದಿತು.

ಅಷ್ಟರಲ್ಲಿ ಮೈತ್ರೇಯಿ ಕೋಣೆಯಲ್ಲಿ ಪ್ರವೇಶಿಸಿದಳು. "ತಾವು ಯಾವಾಗ ಬಂದಿರಿ? ನಮಗೆ ಸುಳಿವು ಸಪ್ಪಳ ಸಹ ಗೊತ್ತಾಗಲಿಲ್ಲ" ಎಂದಳು ವಂದನ.

ದ್ವಿಜದಾಸನು ಹಿಂತಿರುಗಿ "ಏನು? ಅತ್ಯವಶ್ಯಕವಾಗಿ ತಿಳಿಸುವುದು ಏನಾದರೂ ಇತ್ತೆ?—ಎಂದು ಪ್ರಶ್ನಿಸಿದ.

"ಸರಿ ಚೆನ್ನಾಯಿತು. ನಿನ್ನೆ ತಾವು ಊಟಮಾಡಿಲ್ಲ. ಇವತ್ತೂ ಸಹ ಊಟಮಾಡಲಿಲ್ಲ.—ಇದು ಇತರರಿಗೆ ಗೊತ್ತಿದೆಯೋ ಇಲ್ಲವೋ ನನಗಂತೂ ಗೊತ್ತಿದೆ. ನಡೆಯಿರಿ ಅಮ್ಮನ ಕೋಣೆಗೆ" ಮೈತ್ರೇಯಿ ಕರೆದಳು.

"ಅರರೆ ಅಮ್ಮನ ಕೋಣೆಯ ಬಾಗಿಲು ಮುಚ್ಚಿದೆಯಲ್ಲ."

ಮುಚ್ಚಿದ್ದಿತು. ಆದರೆ ನಾನು ಬಿಡಬೇಕಲ್ಲ. ತಲೆ ಚಚ್ಚಿಕೊಂಡು ಬಾಗಿಲು ತೆಗೆಸಿದೆ. ಅವರಿಗೆ ಸ್ನಾನ ಮಾಡಿಸಿದೆ. ಸಂಧ್ಯಾಪೂಜೆ ನಡೆಯಿತು. ಬಹಳ ಕಷ್ಟಪಟ್ಟು ಸ್ವಲ್ಪ ಫಲಾಹಾರ ಮಾಡಿಸಿಯೇ ಬಿಟ್ಟೆ. "ದ್ವಿಜೂ ಊಟಮಾಡದೆ ನಾನೇನೂ ತಿನ್ನಲಾರೆ' ಎಂದು ಹೇಳಿದರು. ನೀವೇನು ಬೇಕಾದರೂ ಹೇಳಿ. ನಿಮ್ಮ ಮಾತು ಮಾತ್ರ ಕೇಳುವುದಿಲ್ಲ. ಆಗಿನಿಂದ ನಾವು ನಿಮ್ಮ ದಾರಿಯನ್ನೇ ಕಾಯುತ್ತಿದ್ದೇವೆ. ನಡೆಯಿರಿ ನಿಮಗೆ ಅಮ್ಮನ ಕೋಣೆಯಲ್ಲಿ ಬಡಿಸಿದ್ದೇನೆ.

ದ್ವಿಜದಾಸನು ದಂಗು ಬಡಿದು ನಿಂತುಬಿಟ್ಟ. ಇವಳ ಬಾಯಲ್ಲಿ ಇಷ್ಟು ಮಾತು ಮೊದಲು ಅವನು ಕೇಳಿಯೇ ಇರಲಿಲ್ಲ. "ನಡೆಯಿರಿ" ಎಂದು ಹೇಳಿದ.

ಅನಂತರ ಮೈತ್ರೇಯಿ ವಂದನಳನ್ನು ಕುರಿತು—"ತಾವೂ ಬನ್ನಿ ಅಮ್ಮ ನಿಮ್ಮನ್ನು ಕರೆಯುತ್ತಿದ್ದಾರೆ"—ಎಂದು ಹೇಳಿ ದ್ವಿಜದಾಸನನ್ನು ಸಂಗಡ ಕರೆದುಕೊಂಡೇ ಹೊರಟಳು.

ದಯಾಮಯಿ ತನ್ನ ಕೋಣೆಯಲ್ಲೇ ಹಾಸಿಗೆಯ ಮೇಲೆ ಮಲಗಿದ್ದಳು. ಮಸಕಾದ ದೀಪದ ಬೆಳಕಿನಲ್ಲಿ ನೋಡಿದರೂ ದುಃಖದಿಂದ ಕಂದಿದ ಅವನ ಮುಖದಲ್ಲಿ ವೇದನೆಯು ಕಂಡುಬರುತ್ತಿತ್ತು. ಕಣ್ಣು ಊದಿ ಕೆಂಪಾಗಿವೆ. ಈಗತಾನೆ ಸ್ನಾನ ಮಾಡಿರುವುದರಿಂದ ಕೂದಲು ಇನ್ನೂ ಒದ್ದೆಯಾಗಿದೆ. ಮತ್ತು ಅತ್ತ ಇತ್ತ ಹರಡಿವೆ. ತಲೆಯ ಹತ್ತಿರ ಕುಳಿತು ಕಲ್ಯಾಣಿ ಹಣೆಯನ್ನು ನೇವರಿಸುತ್ತಿದ್ದಾಳೆ. ಅತ್ತಕಡೆ ಕುರ್ಚಿಯ ಮೇಲೆ ಶಶಧರ ಕುಳಿತಿದ್ದಾನೆ. ಸ್ವಲ್ಪದೂರದಲ್ಲಿ ಬೇರೊಂದು ಕುರ್ಚಿಯ ಮೇಲೆ ಅಕ್ಷಯ ಬಾಬು ಕುಳಿತಿದ್ದಾನೆ. ದ್ವಿಜದಾಸನು ಕಾಲಿಟ್ಟ ಕೂಡಲೆ ದಯಾಮಯಿ ಹೊರಳಿ ತನ್ನ ಮುಖವನ್ನು ತಿರುಗಿಸಿಕೊಂಡಳು. ಮತ್ತು ಮರುಕ್ಷಣದಲ್ಲಿಯೇ ಅವಳ ಅಸ್ಫುಟ ಕ್ರಂದನದ ವೇಗದಿಂದ ಮೈಯೆಲ್ಲವೂ ಅಲುಗಹತ್ತಿತು ವಂದನ ಮೆಲ್ಲಗೆ ಮಾತನಾಡದೆ ಅವಳ ಕಾಲ ಬಳಿ ಹೋಗಿ ಕುಳಿತುಕೊಂಡಳು. ಇಷ್ಟು ವೇದನೆಯಿಂದ ತುಂಬಿದ ದೃಶ್ಯವನ್ನು ಅವಳು ಕನಸಿನಲ್ಲಿಯೂ ಕಂಡಿರಲಿಲ್ಲ. ಬಹಳ ಹೊತ್ತಿನವರೆಗೆ ಒಬ್ಬರೂ ಮಾತನಾಡಲಿಲ್ಲ. ಈ ಮೌನವನ್ನು ಭಂಗಪಡಿಸಿ ಮೊದಲು ಶಶಧರನೇ ಮಾತನಾಡಿದನು–"ನೆನ್ನೆಯಿಂದ ಊಟಮಾಡಿಲ್ಲವಂತೆ. ಸೇರಿದಷ್ಟು ಊಟಮಾಡು."

ದ್ವಿಜದಾಸ— ಹ್ಞೂಂ.

ಮಂಡಲಮಾಡಿ ಮೈತ್ರೇಯಿ ಎಲೆ ಹಾಕುತ್ತಿದ್ದಳು. ಶಶಧರ ಕೇಳಿದ–"ಹಿಂತಿರುಗಿ ಬರಲು ಇಷ್ಟು ಹೊತ್ತೇಕಾಯಿತು? ಅವರು ಎರಡೂವರೆ ರೈಲಿಗೆ ಹೋದರು ಅಲ್ಲವೆ ?'

ದ್ವಿಜದಾಸ—'ಹ್ಞೂಂ'

ಶಶಧರ ಸ್ವಲ್ಪ ನಗಲು ಪ್ರಯತ್ನಪಟ್ಟು ಹೇಳಿದ—"ಅಲ್ಲಿ ಕಲ್ಕತ್ತೆಯಲ್ಲಿರುವ ಮನೆ ಕೂಡ ನಿನ್ನದು ಎಂತ ಕೇಳಿದೆ."

"ಏಕೆ ? ನನ್ನ ಮನೆಯಲ್ಲಿ ಕೂಡ ಅಣ್ಣನು ಪ್ರವೇಶಮಾಡದಂತೆ ಕಟ್ಟಪ್ಪಣೆಯೆ ?"—ದ್ವಿಜದಾಸ ಕೇಳಿದ.

ಶಶಧರ—“ ಹಾಗೆ ಹೇಳಲಿಲ್ಲ. ಅವನೇ ಆ ಭಾವವನ್ನು ತೋರಿದ್ದು. ಈ ಮನೆಯನ್ನು ಬಿಟ್ಟು ಹೋಗಬೇಕಾದ ಪ್ರಮೇಯವಾದರೂ ಏನಿತ್ತು? ನಮ್ಮಲ್ಲೇ ರಾಜಿಯಾಗಬಹುದಾಗಿತ್ತು.”

ದ್ವಿಜದಾಸ—ರಾಜಿಮಾಡಿಕೊಳ್ಳಲು ಸಾಧ್ಯವಿದ್ದರೆ ತಾವು ಸುಮ್ಮನೇ ಏಕಿದ್ದಿರಿ?

“ನಾನೇ ರಾಜಿ ಮಾಡಿಕೊಳ್ಳಲು ಹೋಗಬೇಕಾಗಿತ್ತೇ?”—ಆಶ್ಚರ್ಯದಿಂದ ಶಶಧರ ಕೇಳಿದ.—“ ಅಲ್ಲ ಏನು ಮಾತು ಹೇಳುತ್ತೀ ನೀನು. ನನಗೆ ಅಪಮಾನ ಮಾಡಿದವನು ಅವನು. ರಾಜಿಮಾಡಿಕೊಳ್ಳಲು ನಾನು ಹೋಗಬೇಕು ಬಹಳ ಚೆನ್ನಾಗಿದೆ ಸಲಹೆ.”—ಇಷ್ಟು ಹೇಳಿ ಪ್ರಯತ್ನಪಟ್ಟು ಹೇಗೋ ನಗಲು ಪ್ರಾರಂಭಿಸಿದನು.

ನಗು ನಿಂತಮೇಲೆ ದ್ವಿಜದಾಸ ಹೇಳಿದ—“ನಾನು ಯಾವ ಕೆಟ್ಟಸಲಹೆಯನ್ನು ಕೊಡಲಿಲ್ಲ ಶಶಧರ ಬಾಬು. ಹೆಂಗಸರು ಹೇಳುತ್ತಾರೆ ಏನೋ ಬೆಟ್ಟದ ಹಿಂದೆ ಅಡಗಿತ್ತಂತೆ. ಬೆಟ್ಟದಂತಿದ್ದರು ನಮ್ಮಣ್ಣ. ನೀವು ಅವರ ಹಿಂದೆ ಅಡಗಿದ್ದರಿ. ಈಗ ನಾವೂ ನೀವು ಎದುರು ಬದರು ನಿಂತಿದ್ದೇವೆ. ಮಾನಾಪಮಾನದ ಆಟ ಇನ್ನೂ ಮುಗಿದಿಲ್ಲ—ಇನ್ನೂ ಈಗತಾನೆ ಪ್ರಾರಂಭವಾಗಿದೆ.”

“ ಅಂದರೆ ”

“ ಅಂದರೆ ನಾನು ನಿಮ್ಮ ಬಾಲ್ಯ ಸ್ನೇಹಿತ ವಿಪ್ರದಾಸ ಅಲ್ಲ. ನಾನು ದ್ವಿಜದಾಸ ''

ಶಶಧರನ ನಗು ಮಾಯವಾಯಿತು. ಭಯಂಕರವಾದ ಗಂಭೀರದ ದನಿಯಲ್ಲಿ ಕೇಳಿದ—ನಿನ್ನ ಮಾತಿಗೆ ಏನರ್ಥ. ಸ್ವಲ್ಪ ಸ್ಪಷ್ಟವಾಗಿ ಹೇಳು ”

ಅಣ್ಣನ ಗೆಳೆಯನಾದುದರಿಂದ ಶಶಧರನು ‘ ನೀನು’ ಎಂದು ದ್ವಿಜದಾಸನನ್ನು ಮಾತಾಡಿಸಿದರೂ ದ್ವಿಜದಾಸ ಮಾತ್ರ ಅವನನ್ನು ‘ ತಾವು’ ಎಂದೇ ಮಾತನಾಡುತ್ತಿದ್ದ. ಹೇಳಿದ—“ ತಮ್ಮ ಮಾತು ಒಪ್ಪಿದೆ. ಈ ದಿನ ನನ್ನ ಮಾತು ಸ್ಪಷ್ಟವಾಗಲೇ ಬೇಕು. ಸತ್ಯಕ್ಕಾಗಿ ಸರ್ವಸ್ವವನ್ನೂ ಬಲಿ ಕೊಡಬಲ್ಲ, ಆಶ್ರಿತರ ಹಿತರಕ್ಷಣೆಗಾಗಿ ತಮ್ಮ ದೇಹದ ಮಾಂಸವನ್ನಾ

ದರೂ ಕೊಡಬಲ್ಲಂತಹ ಜನರಲ್ಲಿ ನಮ್ಮ ಅಣ್ಣನೂ ಒಬ್ಬರು. ಏನೋ ಆ ಜನಗಳ ಆದರ್ಶವಂತೆ; ಅದಕ್ಕಾಗಿ ಅವರು ಮಾಡದ ತ್ಯಾಗವೇ ಇಲ್ಲ. ಅವರೂ ಒಂದು ಬಗೆಯ ಹುಚ್ಚರು. ಆದುದರಿಂದಲೇ ಅವರಿಗೆ ಈ ದುರ್ಗತಿ ಬಂದಿತು. ಆದರೆ ನಾನು ಕೇವಲ ಸಾಧಾರಣ ಮನುಷ್ಯ. ನಮಗೂ ನಿಮಗೂ ಹೆಚ್ಚು ಭೇದವೇನೂ ಇಲ್ಲ. ತಮಗಿರುವಂತೆ ನನಗೂ ಅಸೂಯೆ, ಪ್ರತೀಕಾರ ಮಾಡುವ ಕೆಟ್ಟ ಬುದ್ಧಿ ಎಲ್ಲವೂ ಇವೆ. ತಾವು ಕಪಟದಿಂದ ಒಂದುಪಕ್ಷ ಅಣ್ಣನಿಗೆ ಮೋಸಮಾಡಿ ಎಲ್ಲವನ್ನೂ ಅಪಹರಿಸಿದರೆ ನಾನೂ ತಮಗೆ ಸೇರಿದುದನ್ನು ಅಪಹರಿಸಬಲ್ಲೆ. ತಾವು ಏನಾದರೂ ಅಣ್ಣನ ವಿಷಯದಲ್ಲಿ ಷಡ್ಯಂತ್ರವನ್ನು ರಚಿಸಿದ್ದರೆ ಅನಾಯಾಸವಾಗಿ ತಮಗೆ ಬೇಡಿ ತೊಡಿಸದೆ ಸುಮ್ಮನೆ ಬಿಡುವುದಿಲ್ಲ—ಕಡೆಯ ಪಕ್ಷ ಪ್ರಯತ್ನ ಮಾಡುವುದಕ್ಕಂತೂ ಹಿಂಜರಿಯುವುದಿಲ್ಲ. ಎರಡು ಪಕ್ಷದವರೂ ಭಿಕ್ಷ ಬೇಡುವಂತಾದರೂ ಸರಿಯೆ. ಇದರಿಂದ ಕೊನೆಗೆ ದೊರೆಯುವ ಫಲ ಅದೇ ಎಂದು ತಿಳಿದವರು ಹೇಳುತ್ತಾರೆ. ಸರಿ ಈಗ ಅದೇ ಆಗಲಿ."

ಶಶಧರ ದಯಾಮಯಿಯನ್ನು ಸಂಬೋಧಿಸಿ "ಕೇಳಿದಿರಾ ದ್ವಿಜೂನ ಮಾತುಗಳನ್ನು. ಅವನು ಮನಸ್ಸಿಗೆ ಬಂದಂತೆ ಆಡುತ್ತಿದ್ದಾನೆ. ಬೇಡ ಎಂದು ಹೇಳಿ" ಎಂದು ಅರಿಚಿದ.

"ಅಮ್ಮನ ಮುಂದೆ ಹೇಳಿಕೊಳ್ಳುವುದರಿಂದ ಏನೂ ಪ್ರಯೋಜನವಿಲ್ಲ. ಶಶಧರ ಬಾಬು"–ದ್ವಿಜದಾಸ ಮುಂದುವರಿಸಿದ –"ನಾನು ವಿಪಿನನಂತಲ್ಲವೆಂದು ಅವರಿಗೆ ಗೊತ್ತು. ಮಾತೃವಾಕ್ಯ ದ್ವಿಜದಾಸನಿಗೆ ವೇದವಾಕ್ಯವಲ್ಲ ದ್ವಿಜದಾಸನು ಆಟಕ್ಕಾಗಿ ತೊಡೆ ತಟ್ಟಿ ಸ್ಪರ್ಧಿಸಲು ಕರೆಯುತ್ತಿಲ್ಲವೆಂದು ಅವರಿಗೆ ಗೊತ್ತಿದೆ.''

ಯಾರ ಬಾಯಿಂದಲೂ ಮಾತು ಹೊರಡಲಿಲ್ಲ. ಇವರಿಬ್ಬರ ಈ ವಾದವಿವಾದ ಅನಿರೀಕ್ಷಿತವಾದುದು. ಆಶ್ಚರ್ಯ ಮತ್ತು ಆತಂಕದಿಂದ ಎಲ್ಲರೂ ಮೌನವಾಗಿದ್ದರು. ಇದು ತಮಾಷೆಯಲ್ಲ, ಕಠೋರ ಸಂಕಲ್ಪವೆಂದು ಶಶಧರ ಅರಿತ. ಉತ್ತರವನ್ನು ಕೊಡಲು ಮೊದಲಿನಂತೆ ಅವನಿಗೆ ಈಗ ಉಸಿರಿಲ್ಲ. ಆದರೂ ಸ್ವಲ್ಪ ಒತ್ತಿ ಹೇಳಿದ—"ಸರಿ ಇಲ್ಲಿಗೆ ಮುಗಿಯಿತು. ನಾನು ಇಲ್ಲಿ ಒಂದು ಹನಿ ನೀರು ಸಹ ಕುಡಿಯುವುದಿಲ್ಲ."

"ಶಶಧರ ಬಾಬು, ಇದುವರೆಗೂ ನೀವು ಹೇಗೆ ಕುಡಿಯುತ್ತಿದ್ದೀರೋ ಅದೇ ಆಶ್ಚರ್ಯ ! ''–ದ್ವಿಜದಾಸ ಹೇಳಿದ.

ಕಲ್ಯಾಣಿ ಅತ್ತುಬಿಟ್ಟಳು. '' ಅಣ್ಣ ಕೊನೆಗೆ ನಮ್ಮನ್ನು ಕೊಲ್ಲಲು ನಿಶ್ಚಯಿಸುವಿಯಾ ? ನಾವಿಬ್ಬರೂ ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರು. ನೀನೇ ನಮ್ಮನ್ನು ಹಾಳುಮಾಡಬೇಕೆಂದಿರುವೆಯಾ ? ''–ಎಂದು ದೈನ್ಯದಿಂದ ಕೇಳಿದಳು.

" ಅಲ್ಲ, ಕಣ್ಣೀರು ಸುರಿಸಿ ಹಾಳಾಗುವುದನ್ನು ಬಾರಿ ಬಾರಿಗೂ ತಪ್ಪಿಸಲು ಅಸಾಧ್ಯವೆಂದು ತಿಳಿ. ಇಲ್ಲಿ ಆ ವಿಚಾರ ನಡೆಯುವುದಿಲ್ಲ. ಈಗ ಅಣ್ಣ ಇಲ್ಲ ಒಪ್ಪಿಕೊಳ್ಳುತ್ತೇನೆ. ಆದರೂ ನಿನಗೆ ತಿನ್ನಲು ಗತಿ ಇಲ್ಲದಂತಾದಾಗ ನನ್ನ ಹತ್ತಿರ ಬಾ. ಆಗ ನಿನ್ನ ಗೋಳುಕೇಳುತ್ತೇನೆ—ಈಗಲ್ಲ."

ದಯಾಮಯಿ ಮಾತನಾಡದೆ ಇಷ್ಟು ಹೊತ್ತು ಸಹಿಸಿಕೊಂಡಿದ್ದಳು. ಈಗ ಸಹನೆ ಮೀರಿತು. ಅವಳು ಇದ್ದಕಿದ್ದಂತೆಯೇ ಗಟ್ಟಿಯಾಗಿ " ದ್ವಿಜು, ನೀನು ಇಲ್ಲಿಂದ ತೊಲಗು. ಈ ರೀತಿ ಅಂದು ಆಡಿಮಾಡಲು ವಿಪಿನ್ ಹೇಳಿಕೊಟ್ಟ ಅಂತ ಕಾಣುತ್ತೆ " ಎಂದಳು.

" ಯಾರು ಹೇಳಿಕೊಟ್ಟರು ಎಂದಿರಿ ? ಅಣ್ಣನೇ ?"

" ಹೌದು, ಅವನೇ. ಅವನೇ ಹೇಳಿಕೊಟ್ಟು ಹೋಗಿದ್ದಾನೆ.''

ದ್ವಿಜದಾಸನು ಕ್ಷಣಕಾಲ ರೋಷದಿಂದ ತುಟಿಯನ್ನು ಕಚ್ಚುತ್ತಿದ್ದ. ಅನಂತರ ಹೇಳಿದ–"ಇಗೋ ಹೊರಟೆ. ಆದರೆ ಅಮ್ಮ, ನೀನು ನಿನ್ನ ಗೌರವವನ್ನು ಎಂದೊ ಕಳೆದುಕೊಂಡಿದ್ದೀಯೆ. ಉಳಿದಿರುವ ಅಲ್ಪಸ್ವಲ್ಪವನ್ನೂ ಕಳೆದುಕೊಳ್ಳಬೇಡ"—ಎಂದು ಹೇಳುತ್ತ ಅವನು ಹೋದನು.

ದ್ವಿಜದಾಸ ಬಂದು ತನ್ನ ಕೋಣೆಯಲ್ಲಿ ಸುಮ್ಮನೆ ಕುಳಿತಿದ್ದ. ಸುಮಾರು ಎರಡು ಗಂಟೆಯ ನಂತರ ಮೈತ್ರೇಯಿ ಅಲ್ಲಿಗೆ ಬಂದಳು. ಅವಳು ಬಡಿಸಿದ ಹರಿವಾಣವನ್ನು ತಂದಿದ್ದಳು. "ಮತ್ತೆ ಅಡಿಗೆ ಮಾಡಿಕೊಂಡು ತಂದಿದ್ದೇನೆ. ಊಟಕ್ಕೆ ಏಳಿ. ಇಲ್ಲಿಯೇ ಮಣೆ ಹಾಕಲೆ " ಎಂದು ಕೇಳಿದಳು.

" ನಿಮಗೆ ಯಾರು ಹೇಳಿದರು ಇದನ್ನು ? "

" ಯಾರೂ ಇಲ್ಲ. ನಿನ್ನೆಯಿಂದ ತಾವು ಊಟಮಾಡಿಲ್ಲ. ನನಗದು ಗೊತ್ತಿಲ್ಲವೆ ? ''

" ಇಷ್ಟು ಜನ ಇರುವಾಗ ನೀವೇ ಹೇಗೆ ಅದನ್ನು ತಿಳಿದುಕೊಂಡಿರಿ ''
ಮೈತ್ರೇಯಿ ತಲೆ ತಗ್ಗಿಸಿಕೊಂಡು ಸುಮ್ಮನೆ ನಿಂತಿದ್ದಳು. ಉತ್ತರ ಬಾರದಿರುವುದನ್ನು ಕಂಡು ದ್ವಿಜದಾಸನೇ ಮತ್ತೆ ಹೇಳಿದ–" ಸರಿ. ಅಲ್ಲೇ ಇಡಿ. ಇನ್ನೂ ಹಸಿವೆಯಾಗಿಲ್ಲ. ಆದರೆ ಗೀದರೆ ಊಟಮಾಡುತ್ತೇನೆ."

ಒಂದು ಮೂಲೆಯಲ್ಲಿ ಮಣೆಹಾಕಿ ತಟ್ಟೆಯ ಮೇಲೆ ಸರಿಯಾಗಿ ಮುಚ್ಚಿಟ್ಟು ಅಲ್ಲಿಂದ ಹೊರಟುಹೋದಳು. ಅವಳು ಹೆಚ್ಚು ಒತ್ತಾಯ ಮಾಡಲಿಲ್ಲ. ಆರಿದರೆ ಊಟ ಸೇರುವುದಿಲ್ಲವೆಂದು ಸಹ ಹೇಳಲಿಲ್ಲ.

ರಾತ್ರಿ ಸುಮಾರು ಹನ್ನೆರಡುಗಂಟೆ ಇರಬಹುದು. ದ್ವಿಜದಾಸ ಕುರ್ಚಿಯನ್ನು ಬಿಟ್ಟೆದ್ದ. ಏನೋ ಸ್ವಲ್ಪ ತಿಂದು ಮಲಗೋಣ ಎಂದುಕೊಂಡು ಕೈ ಕಾಲುಗಳನ್ನು ತೊಳೆದುಕೊಳ್ಳಲು ಹೊರಕ್ಕೆ ಹೋದ. ಅಲ್ಲಿ ಬಾಗಿಲಹತ್ತಿರ ಯಾರೋ ನಿಂತಿದ್ದಾರೆ. ಜಗುಲಿಯ ಮೇಲೆ ಬಹಳ ಕಡಿಮೆ ಪ್ರಕಾಶವಿತ್ತು. ಗುರುತು ಹಿಡಿಯಲು ಸಾಧ್ಯವಾಗದ ಕಾರಣ" ಯಾರು? " ಎಂದು ಕೇಳಿದ.

" ನಾನು ಮೈತ್ರೇಯಿ ''

ದ್ವಿಜದಾಸನ ಆಶ್ಚರ್ಯಕ್ಕೆ ಪಾರವೇ ಇಲ್ಲ. " ಇಷ್ಟು ರಾತ್ರಿಯಲ್ಲಿ ನೀವು ಇಲ್ಲಿ ?''- ಅವನು ಪುನಃ ಪ್ರಶ್ನಿಸಿದ.

'' ಊಟಕ್ಕೆ ಕುಳಿತಾಗ ಏನಾದರೂ ಬೇಕಾದರೆ. ಅದಕ್ಕಾಗಿ ಕುಳಿತಿದ್ದೇನೆ."

'' ನೋಡಿ. ಇದೇ ವಿಪರೀತವಾಯಿತು. ಮೊದಲು ಏನೂ ಬೇಕೇ ಆಗುವುದಿಲ್ಲ. ಒಂದು ಪಕ್ಷ ಬೇಕಾದರೂ ಮನೆಯಲ್ಲಿ ಬೇರೆ ಯಾರೂ ಇಲ್ಲವೆ ? ''

" ಬಹಳ ದಿನದಿಂದ ಎಡೆಬಿಡದೆ ಕೆಲಸಮಾಡಿ ಎಲ್ಲರಿಗೂ ಆಯಾಸವಾಗಿದೆ. ಯಾರಿಗೂ ಎಚ್ಚರವಿಲ್ಲ. ಎಲ್ಲರೂ ಮಲಗಿ ನಿದ್ರಿಸುತ್ತಿದ್ದಾರೆ." ಮೈತ್ರೇಯಿ ಮೃದು ಕಂಠದಿಂದ ಹೇಳಿದಳು.

'' ತಾವೂ ಏನೂ ಕಡಿಮೆ ಕಷ್ಟಪಟ್ಟಿಲ್ಲ. ಅಂದ ಮೇಲೆ ತಾವೇಕೆ ಮಲಗಲಿಲ್ಲ ? ''

ಮೈತ್ರೇಯಿ ಉತ್ತರವನ್ನು ಕೊಡದೆ ಸುಮ್ಮನಿದ್ದಳು.

ಇದುವರೆಗೂ ದ್ವಿಜದಾಸ ಸ್ವಲ್ಪ ನಿಷ್ಠುರವಾಗಿಯೇ ಮಾತನಾಡು ತ್ತಿದ್ದ ಈಗ ಅವನ ದನಿ ಸ್ವಲ್ಪ ಮೃದುವಾಯಿತು. "ಹೀಗೆ ನೀವು ಇಲ್ಲಿ ಕೂಡುವುದು ಚೆನ್ನಾಗಿರುವುದಿಲ್ಲ. ಒಳಗೆ ಹೋಗಿ ಕುಳಿತುಕೊಳ್ಳಿ. ಊಟವಾಗುವವರೆಗೂ ನೋಡುತ್ತಿರಿ." ಇಷ್ಟು ಹೇಳಿ ಅವನು ಕೈ ಕಾಲು ಗಳನ್ನು ತೊಳೆದುಕೊಳ್ಳಲು ನೀರುಮನೆಕಡೆ ಹೊರಟುಹೋದನು.

ಇದಕ್ಕೆ ಮುಂಚೆ ದ್ವಿಜದಾಸನಿಗೂ ಮೈತ್ರೇಯಿಗೂ ಬಹಳ ಕಡಿಮೆ, ಮಾತುಕತೆ ನಡೆದಿತ್ತು. ಹೆಚ್ಚು ಮಾತನಾಡಬೇಕಾದ ಪ್ರಸಂಗವೂ ಇರ ಲಿಲ್ಲ. ಅಥವ ಮಾತನಾಡಬೇಕೆಂಬ ಅಭಿಲಾಷೆ ಕೂಡ ಅವನಲ್ಲಿರಲಿಲ್ಲ. ಈಗ ಏನು ಮಾಡಬೇಕೆಂದು ಯೋಚಿಸುತ್ತಾ ಕೋಣೆಯನ್ನು ಬಂದು ನೋಡಿದಾಗ ಅಲ್ಲಿ ಮೈತ್ರೇಯಿಯೂ ಇರಲಿಲ್ಲ, ಬಡಿಸಿಟ್ಟ ಹರಿವಾಣವೂ ಇರಲಿಲ್ಲ. ಇದೇನಾಯಿತು ಎಂದು ಊಹಾಪೋಹಗಳನ್ನು ಮಾಡು ವುದಕ್ಕೆ ಮೊದಲೇ ಮೈತ್ರೇಯಿ ಹಿಂತಿರುಗಿ ಬಂದುದು—"ಮುಚ್ಚಿದ್ದು ತೆರೆದು ನೋಡಿದೆ. ಎಲ್ಲ ಒಣಗಿ ಹೋಗಿದೆ. ಅದಕ್ಕೆ ಮತ್ತೆ ಹೊಸದಾಗಿ ತರೋಣ ಅಂತ ಹೋಗಿದ್ದೆ. ಕುಳಿತುಕೊಳ್ಳಿ" ಎಂದಳು.

"ಇದೇನು ಹೊಗೆ ಹೊರಡುತ್ತಿದೆ. ಇಷ್ಟು ರಾತ್ರಿ ಆಗಿದೆ. ಈಗ ನಿಮಗೆ ಬಿಸಿಬಿಸಿ ಪದಾರ್ಥ ಎಲ್ಲಿ ಸಿಕ್ಕವು ?" ದ್ವಿಜದಾಸ ಕೇಳಿದ.

ಎಲ್ಲ ಮಾಡಿ ಸಿದ್ಧವಾಗಿತ್ತು. ಇನ್ನು ಉಟಕ್ಕೇಳುವುದಕ್ಕೆ ಹೊತ್ತಾ ಗುತ್ತದೆ ಎಂದು ನೀವು ಹೇಳಿದಾಗಲೇ ಎಲ್ಲ ಸಿದ್ಧಮಾಡಿಟ್ಟುಕೊಳ್ಳದಿದ್ದರೆ ನೀವು ಸರಿಯಾಗಿ ಊಟಮಾಡುವುದಿಲ್ಲವೆಂದು ಯೋಚಿಸಿದೆ."

ದ್ವಿಜದಾಸ ಊಟಕ್ಕೆ ಕುಳಿತ. ಮೊದಲು ಅಡಿಗೆಯ ರುಚಿಯನ್ನು ನೋಡಿ ಅದರಲ್ಲಿ ಎಷ್ಟೋ ಪದಾರ್ಥವನ್ನು ಮೈತ್ರೇಯಿ ಸ್ವತಃ ತಯಾರಿಸಿರ ಬೇಕೆಂದು ನಿಶ್ಚಯಿಸಿದ. ಅವುಗಳನ್ನು ಮೈತ್ರೇಯಿ ಬಹಳ ಉಪಚಾರ ಮಾಡಿ ಅವನಿಗೆ ಬಡಿಸಿದಳು. ಈ ವಿದ್ಯೆಯಲ್ಲಿ ಅವಳದು ನುರಿತ ಕೈ. ಹೇಗೆ ಬಡಿಸಬೇಕೆಂದು ಅವಳಿಗೆ ಗೊತ್ತು.

ದ್ವಿಜದಾಸ ನಗುತ್ತ ಹೇಳಿದ—"ಇಷ್ಟು ಹೆಚ್ಚಾಗಿ ತಿಂದರೆ ಮೈಗೆ ಕೆಡುಕಲ್ಲವೆ ?"

"ಇಲ್ಲ. ಕೆಟ್ಟದೂ ಅಲ್ಲ ಸೊಟ್ಟದೂ ಅಲ್ಲ. ನಿನ್ನೆಯಿಂದ ಉಪವಾಸ

ವಿದ್ದೀರಿ. ಇದೇನು ಮಜಾ?"

"ಆದರೆ ನಾನೊಬ್ಬನೇ ಊಟ ಬಿಟ್ಟು ಕುಳಿತಿಲ್ಲವಲ್ಲ. ಇಲ್ಲಿ ಇನ್ನೂ ಎಷ್ಟೋ ಜನ ಅನ್ನ ನೀರೂ ಮುಟ್ಟದೆ ಇದ್ದಾರೆ."

"ಎಲ್ಲರ ಸಮಾಚಾರ ನನಗೆ ಗೊತ್ತಿಲ್ಲ. ಎಷ್ಟು ಕಷ್ಟಪಟ್ಟು ಅಮ್ಮನಿಗೆ ಒಂದು ತುತ್ತು ಊಟಮಾಡಿಸಿದೆ ಎಂಬುದು ನನಗೇ ಗೊತ್ತು. ನಾನಿಲ್ಲದಿದ್ದರೆ ಅವರು ಎಷ್ಟು ದಿನ ಹಾಗೇ ಬಾಗಿಲು ಹಾಕಿಕೊಂಡು ಒಳಗೆ ಕುಳಿತಿರುತ್ತಿದ್ದರೋ ಅದನ್ನು ಯೋಚಿಸಿದರೆ ಮೈಯೆಲ್ಲ ಜುಮ್ಮೆನ್ನುತ್ತದೆ. ಆದರೆ ನೀವು ನನ್ನನ್ನು 'ನೀವು' ಎಂದು ಮಾತನಾಡಿಸಬೇಡಿ. ತುಂಬಾ ನಾಚಿಕೆಯಾಗುತ್ತದೆ. ನಿಮಗಿಂತ ನಾನು ಎಷ್ಟು ಕಿರಿಯವಳು."

"ಸರಿ ಸರಿ. ಇನ್ನು ಮೇಲೆ ನಿನ್ನನ್ನು 'ನೀವು' ಎನ್ನುವುದಿಲ್ಲ. ಅನ್ನದ ಎಲ್ಲಿ, ಏನು ಸಮಾಚಾರ ಅಂತ ವಿಚಾರಿಸಿದೆಯಾ"

"ಅವಳಿಗೇನಾಯಿತು ಮತ್ತೆ? ಏನು ಅವಳು ಊಟಮಾಡದೇ ಇದ್ದಾಳೆಯೆ?"—ಮೈತ್ರೇಯಿ ಕೇಳಿದಳು.

ಇಲ್ಲಿಯವರೆಗೆ ಮೈತ್ರೇಯಿಯ ಮಾತು ಅವನಿಗೆ ರುಚಿಸುತ್ತಿದ್ದಿತು. ಇಷ್ಟು ದುಃಖದ ಮಧ್ಯೆ ಅವನ ಮನಸ್ಸು ಎಲ್ಲೊ ಕೊಂಚ ಪ್ರಸನ್ನವಾದಂತೆ ತೋರುತ್ತಿತ್ತು. ಆದರೆ ಅವಳ ಈ ಕಡೆಯ ಮಾತು ಅವನ ಮನಸ್ಸನ್ನು ಕಲಕಿ ಬಿಟ್ಟಿತು. ಹೇಳಿದ. "ಅನ್ನದಳ ವಿಚಾರವಾಗಿ ಈ ರೀತಿ ಮಾತಾಡುವುದು ಉಚಿತವಲ್ಲ. ಬಹುಶಃ ಅವಳು ನಮ್ಮ ಮನೆಯ ದಾಸಿ ಎಂದು ನೀನು ಕೇಳಿರಬೇಕು. ಆದರೆ ಈ ಮನೆಯಲ್ಲಿ ಅವಳಿಗಿಂತಲೂ ಹೆಚ್ಚಿನವರು ನನಗೆ ಮತ್ತೆ ಯಾರೂ ಇಲ್ಲ. ನಮ್ಮನ್ನು ಸಾಕಿ ಸಲಹಿ ದೊಡ್ಡವರನ್ನಾಗಿ ಮಾಡಿದವಳು ಅವಳೇ."

"ಇದೇನೋ ಕೇಳಿದ್ದೇನೆ. ಹಾಗೆ ಎಷ್ಟೋ ಮಂದಿ ದಾಸಿಯರು ಮಕ್ಕಳು ಮರಿಗಳನ್ನು ಸಾಕಿ ಸಲಹುತ್ತಾರೆ. ಇದರಲ್ಲೇನೂ ಹೊಸದಿಲ್ಲವಲ್ಲ. ಆಗಲಿ ನಿಮ್ಮ ಊಟವಾದ ಮೇಲೆ ಅವಳನ್ನು ವಿಚಾರಿಸಿಕೊಳ್ಳುತ್ತೇನೆ" ಎಂದು ಮೈತ್ರೇಯಿ ಹೇಳಿದಳು.

ದ್ವಿಜದಾಸ ಉತ್ತರವನ್ನೂ ಕೊಡದೆ ಅವಳ ಮುಖದಕಡೆ ನೋಡುತ್ತಿದ್ದ. ಅವಳು ಹೇಳುತ್ತಿರುವುದು ಸಹಜ. ಒಳಗಿನ ಸಮಾಚಾರ

ವನ್ನರಿಯದ ಜನಗಳಿಗೆ ಹೊರಗಿನ ಈ ವ್ಯಾಪಾರದಲ್ಲಿ ಏನೂ ವಿಶೇಷ ಸಂಗತಿ ತೋರಿಬರುವುದಿಲ್ಲ. ಆದರಲ್ಲೇನಾಶ್ಚರ್ಯ? ಅವನ ಕಠೋರ ವಿಚಾರಧಾರೆ ಸ್ವಲ್ಪ ಕೋಮಲವಾಯಿತು. "ಅನ್ನದ ಉಪವಾಸವೇ ಇದ್ದರೂ ಇಷ್ಟು ರಾತ್ರಿಯಲ್ಲಿ ಊಟಮಾಡುವುದಿಲ್ಲ. ಅವಳಿಗೋಸ್ಕರ ಈಗೇನೂ ಯೋಚನೆಬೇಡ" ಎಂದು ಹೇಳಿದನು.

ಅನಂತರ ಕೆಲವು ನಿಮಿಷದವರೆಗೆ ಒಂದು ಮಾತೂ ಆಡಲಿಲ್ಲ. "ಇಷ್ಟು ಚೆನ್ನಾಗಿ ಪರರ ಸೇವೆಯನ್ನು ಮಾಡಲು ನೀನು ಯಾರಿಂದ ಕಲಿತೆ? ನಿಮ್ಮ ತಾಯಿಯನ್ನು ನೋಡಿಯೆ?" ದ್ವಿಜದಾಸ ಕೇಳಿದ.

"ಇಲ್ಲ. ನನ್ನ ಅಕ್ಕನನ್ನು ನೋಡಿ. ಅವರಷ್ಟು ಚೆನ್ನಾಗಿ ಪತಿಸೇವೆ ಮಾಡುವವರನ್ನು ನಾನು ನೋಡಿಲ್ಲ."

ದ್ವಿಜದಾಸ ನಕ್ಕು ಹೇಳಿದ—"ಪತಿ ಪರರ ಗುಂಪಿನಲ್ಲಿ ಸೇರುತ್ತಾನೆಯೇ? ಪರರ ಸೇವೆಯ ವಿಚಾರ ನಾನು ಕೇಳಿದ್ದು."

"ಓಹೋ........ಪರರ?"—ಎಂದು ಕೂಡಲೆ ಹೇಳಿ ನಾಚಿಕೆಯಿಂದ ಮುಖವನ್ನು ತಗ್ಗಿಸಿದಳು.

ದ್ವಿಜದಾಸ ಹೇಳಿದ—"ಸರಿ ಇದಿರಲಿ, ನಿನ್ನ ಅಕ್ಕನ ವಿಚಾರವನ್ನೇ ಹೇಳು."

"ಅಕ್ಕ ಈಗಿಲ್ಲ"—ಮೈತ್ರೇಯಿ ಪ್ರಾರಂಭಿಸಿದಳು—"ಮೂರು ವರ್ಷ ಆಯಿತು ಒಬ್ಬ ಹುಡುಗ ಮತ್ತು ಇಬ್ಬರು ಹುಡುಗಿಯರನ್ನು ಬಿಟ್ಟು ಸತ್ತು ಹೋದಳು. ಚೌಧುರೀಯವರು ಒಂದು ವರ್ಷ ಕೂಡ ತಡೆಯಲಿಲ್ಲ. ಪುನಃ ಮದುವೆ ಮಾಡಿಕೊಂಡರು. ಎಂಥ ಅನ್ಯಾಯ ನೀವೆ ಹೇಳಿ!

"ಗಂಡಸರು ಹಾಗೆಯೇ. ಇದು ಅನ್ಯಾಯವೆಂದು ಅವರು ಯೋಚನೆ ಸಹ ಮಾಡುವುದಿಲ್ಲ."

"ನೀವೂ ಹಾಗೆ ಮಾಡುತ್ತೀರೊ?"

"ಮೊದಲು ಒಂದಂತು ಮಾಡಿಕೊಳ್ಳೋಣ. ಆಮೇಲೆ ತಾನೆ ಎರಡನೆಯದರ ಯೋಚನೆ."

"ಹಾಗೆ ಹೇಳಿದರೆ ಹೇಗಾಗುತ್ತೆ. ಆಗ ನಿಮ್ಮ ಅತ್ತಿಗೆ ಇದ್ದರು. ಈಗ ಅವರು ಇಲ್ಲಿಲ್ಲ. ಅಮ್ಮನ ಸೇವೆಯನ್ನು ಮಾಡಲು ಯಾರಿದ್ದಾರೆ.

"ಯಾರಿದ್ದಾರೊ ಅದು ನನಗೆ ಗೊತ್ತಿಲ್ಲ ಮೈತ್ರೇಯಿ. ಆದರೆ ಮಗಳು ಅಳಿಯ ಇದ್ದಾರಲ್ಲ. ಅಥವ ಮತ್ತೆ ಯಾರಾದರೂ ಬಂದು ಈ ಹೊರೆಯನ್ನು ಹೊತ್ತುಕೊಳ್ಳುತ್ತಾರೆ,—ಈ ಜಗತ್ತಿನಲ್ಲಿ ಆಗಬಾರದ್ದೆಲ್ಲ ಆಗಿ ಹೋಗುತ್ತದೆ. ನಮ್ಮ ವಿಚಾರ ಬೇಡ. ಈಗ ನಿನ್ನ ವಿಚಾರ ಹೇಳು.

"ನನ್ನ ವಿಚಾರ ಏನೂ ಇಲ್ಲವಲ್ಲ."

"ಏನೂ ಇಲ್ಲವೆ? ಏನೇನೂ ಇಲ್ಲವೆ?"

ಮೈತ್ರೇಯಿಗೆ ಮೊದಲು ಬಹಳ ಸಂಕೋಚವಾಯಿತು. ಅನಂತರ ಸ್ವಲ್ಪ ನಕ್ಕು "ಓಹೋ ಈಗ ಗೊತ್ತಾಯಿತು. ಬಹುಶಃ ಚೌಧುರಿಯವರ ವಿಚಾರ ಯಾರಿಂದಲೋ ಕೇಳಿರಬೇಕು. ಛಿ! ಛಿ! ಎಂಥ ಭಂಡಜನ. ಅಕ್ಕ ಸತ್ತದ್ದೇತಡ ನನ್ನನ್ನು ಮದುವೆ ಮಾಡಿಕೊಳ್ಳಲು ಸಿದ್ಧನಿರುವೆನೆಂದು ಹೇಳಿ ಕಳಿಸಿದರು"

"ಆಮೇಲೆ?"

"ಅವರ ಹತ್ತಿರ ಬೇಕಾದಷ್ಟು ಹಣ ಇತ್ತಲ್ಲ. ತಂದೆ ತಾಯಿ ಇಬ್ಬರೂ ಅದಕ್ಕೆ ಒಪ್ಪಿದರು ಮತ್ತೇನಿಲ್ಲದಿದ್ದರೂ ಲೀಲಾ ಮಕ್ಕಳು ಸುಖವಾಗಿರುತ್ತಾರಲ್ಲಾ ಅಂತ. ಅಲ್ಲ ಅಕ್ಕನ ಮಕ್ಕಳನ್ನು ಸಾಕಿ ಸಲಹುವುದಕ್ಕಿಂತ ಬೇರೆ ಉತ್ತಮವಾದ ಕೆಲಸ ನನಗೆ ಇಲ್ಲವೇಇಲ್ಲ ಅನ್ನುವಂತೆ! ನಾಹೇಳಿದೆ. ಅಂಥಮಾತು ಮತ್ತೆ ಆಡಿಗೀಡೀರಿ. ಉರುಲು ಹಾಕಿಕೊಂಡು ಸತ್ತುಹೋಗುತ್ತೇನೆ ಅಂತ."

"ಏಕೆ. ಇದರಲ್ಲೇನು ಅಂಥ ತೊಂದರೆ ಇದ್ದದ್ದು?"

"ತೊಂದರೆ ಇಲ್ಲವೆ? ಇದಕ್ಕಿಂತಲೂ ಹೆಚ್ಚು ಜಂಜಾಟದ ವಿಷಯ ಈ ಪ್ರಪಂಚದಲ್ಲಿ ಮತ್ತೇನಿದೆ ಹೇಳಿ."

"ನಿನ್ನ ಈ ಮಾತು ಸರಿಯಲ್ಲ. ಪ್ರಪಂಚದಲ್ಲಿ ಎಲ್ಲಕಡೆಯಲ್ಲೂ ಜಂಜಾಟ ಬರುವುದಿಲ್ಲ. ನನ್ನ ಅಮ್ಮನೇ ಅಣ್ಣನನ್ನು ಸಾಕಿದಳು. ಆದರೆ ಕೊನೆಗೆ ಆದದ್ದು? ಇವತ್ತಿನಂಥ ದುಃಖ ಹಿಂದೆಂದಾದರೂ ಈ ಮನೆಗೆ ಒದಗಿತ್ತೆ?"

ದ್ವಿಜದಾಸ ತಣ್ಣಗಾದ. ಇಷ್ಟು ಹೇಳಿ ಒಂದೆರಡು ನಿಮಿಷ ಮಂಕು ಹಿಡಿದವನಂತೆ ಕುಳಿತುಬಿಟ್ಟ. ಅಕಸ್ಮಾತ್ತಾಗಿ ಅವನಿಗೆ ಪ್ರಜ್ಞೆ ಬಂದಂತಾ

ಯಿತು. ಆಗ ಹೇಳಿದ—“ ಮೈತ್ರೇಯಿ ನಾನು ಪ್ರತಿವಾದಮಾಡುವುದಿಲ್ಲ. ಈ ಪರಿವಾದಕ್ಕೆ ದೊಡ್ಡ ದುಃಖ ಬಂದೊದಗಿದೆ ನಿಜ. ಆದರೆ ನಿನ್ನ ಈ ಮಾತುಗಳು ಕೇವಲ ಸಾಮಾನ್ಯ ಸ್ತ್ರೀಯರ ಲೋಕರೀತಿಯ ಮಾತೇ ವಿನಃ ಮತ್ತೇನೂ ಅಲ್ಲ” ಎಂದು ಹೇಳಿ ಅವನು ಎದ್ದುನಿಂತ. ಅವನ ಊಟ ಮುಗಿದಿತ್ತು.

ಮರುದಿನ ಮಧ್ಯಾಹ್ನದವರೆಗೆ ಅವನು ಮನೆಯಲ್ಲಿರಲಿಲ್ಲ. ಯಾವ ಕೆಲಸಕ್ಕೆ ಎಲ್ಲಿಗೆ ಹೋಗಿದ್ದನೋ ಅವನೊಬ್ಬನೇ ಬಲ್ಲ. ಸಂಜೆಯ ಕತ್ತಲಲ್ಲಿ ಮನೆಗೆ ಬಂದವನು ನೇರವಾಗಿ ವಂದನಳ ಕೋಣೆಯ ಹತ್ತಿರ ಹೋಗಿ ನಿಂತು ಕೂಗಿದ—” ಒಳಗೆ ಬರಬಹುದೋ ?”

“ ಯಾರು? ದ್ವಿಜಬಾಬೂ ? ಬನ್ನಿ ಬನ್ನಿ.”

ದ್ವಿಜದಾಸ ಒಳಗೆ ಹೋಗಿ ನೋಡುತ್ತಾನೆ ಪೆಟ್ಟಿಗೆಗಿಟ್ಟಿಗೆ ಎಲ್ಲ ಸಿದ್ಧವಾಗಿದೆ. ಪ್ರಯಾಣದ ಮುಕ್ಕಾಲುಮೂರು ವೀಸೆಪಾಲು ಏರ್ಪಾಟು ಮುಗಿದಿದೆ. “ ಏನು ಹೊರಟೇ ಬಿಟ್ಟಿರ? ಒಂದು ದಿನ ಸಹ ನಿಲ್ಲಿಸಿಕೊಳ್ಳಲು ಯಾರಿಗೂ ಆಗಲಿಲ್ಲವೆ ?” ದ್ವಿಜದಾಸ ಅಂದುಕೊಂಡ.

ಅವನ ಮುಖನೋಡಿದ ವಂದನಳಿಗೆ ಏನೂ ಉತ್ತರಕೊಡಬೇಕು. ಅನ್ನಿಸಲಿಲ್ಲ. ಆದರೂ ಉತ್ತರ ಕೊಡಬೇಕಾಗಿಬಂತು.—“ ಎಂದಾದರೂ ಹೋಗುವುದೇ ಆದಮೇಲೆ ಒಂದೆರಡುದಿನ ನಿಲ್ಲಿಸಿಕೊಂಡುದರಿಂದ ಏನು ಲಾಭ ?”

“ ಲಾಭ ನಷ್ಟದ ವಿಚಾರ ನಾನು ಯೋಚಿಸಿಯೇ ಇಲ್ಲ. ಎಲ್ಲರೂ ಹೊರಟು ಹೋಗುತ್ತಿದ್ದಾರೆ. ಈ ಮನೆಯಲ್ಲಿ ನನ್ನ ಆತ್ಮೀಯರು ಯಾರೂ ಉಳಿಯಲ್ಲಿಲ್ಲ ಎಂತ ಯೋಚಿಸುತ್ತಿದ್ದೆ ಅಷ್ಟೆ.”

ವಂದನ.—“ ಹಳಬರು ಹೋಗುತ್ತಾರೆ ಹೊಸಗೆಳೆಯರು ಬರುತ್ತಾರೆ.—ದ್ವಿಜಬಾಬು ಇದೇತಾನೆ ಲೋಕರೂಢಿ. ಅದೇ ಆಶೆಯನಿಟ್ಟುಕೊಂಡು ಬದುಕಬೇಕಾಗುತ್ತದೆ.—ಸುಮ್ಮನೆ ಕಳವಳಪಟ್ಟುಕೊಂಡರೆ ಕೆಲಸ ನಡೆಯಬೇಕಲ್ಲ.”

ದ್ವಿಜದಾಸ ಉತ್ತರಕೊಡಲಿಲ್ಲ. ಸುಮ್ಮನಿದ್ದ.

ವಂದನ ಮುಂದುವರಿಸಿದಳು—“ ಹೆಚ್ಚು ಪುರಸತ್ತಿಲ್ಲ. ಒಂದೆರಡು

ಮುಖ್ಯ ವಿಷಯ ಹೇಳಬೇಕೆಂದಿದ್ದೆ. ಶಶಿಧರಬಾಬು ಕಲ್ಯಾಣಿಯನ್ನು ಕರೆದು ಕೊಂಡು ಹೊರಟುಹೋದರು. ಗೊತ್ತಿದೆಯೆ ? ''

" ಇಲ್ಲ. ಕೇಳಿಲ್ಲ. ಆದರೆ ಊಹಿಸಿದ್ದೆ."

ಹೋಗುವಾಗ ಅವರಿಗೆ ಒಂದು ಗುಟುಕು ನೀರುಸಹ ಆಗಿರಲಿಲ್ಲ. ಇಬ್ಬರೂ ಬಂದು ಅಮ್ಮನಿಗೆ ನಮಸ್ಕಾರ ಮಾಡಿ ಹೇಳಿದರು 'ನಾವು ಹೊರಟುಹೋಗುತ್ತೇವೆ" ಅಂತ. ಅಮ್ಮ 'ಹೋಗಿ' ಎಂದು ಬೇರೆಕಡೆ ಮುಖ ತಿರುವಿಕೊಂಡರು.' 'ಇಷ್ಟು ಹೇಳಿ ವಂದನ ಸುಮ್ಮನಾದಳು. ಏತಕ್ಕೋಸ್ಕರ ಅವರು ಹೊರಟು ಹೋದರು, ನಿನ್ನೆ ರಾತ್ರಿ ದ್ವಿಜದಾಸನು ತನ್ನ ಅಮ್ಮ ನೆದುರಿಗೆ ಅವನಾಡಿದ ಮಾತುಗಳೇನು ಎಂಬುದನ್ನು ಸಹ ಉಲ್ಲೇಖಿಸಲಿಲ್ಲ.

ಸ್ವಲ್ಪಹೊತ್ತು ಬಿಟ್ಟು ಪುನಃ ಹೇಳಲು ಪ್ರಾರಂಭಿಸಿದಳು—" ಅಮ್ಮಾ ಬಹಳ ಕಂದಿಹೋಗಿದ್ದಾರೆ. ನೋಡಿದರೆ ಅಯ್ಯೋ ಅನ್ನಿಸುತ್ತದೆ. ನಾಚಿಕೆ ಯಿಂದ ಅವರು ಇನ್ನೊಬ್ಬರಿಗೆ ಮುಖ ಸಹ ತೋರಿಸಲಾರರು. ಮೈತ್ರೇಯಿ ಅವರನ್ನು ಉಪಚರಿಸುವಷ್ಟು ಅವರ ಮಗಳೂ ಕೂಡ ಉಪಚರಿಸಲಾರಳು. ಅಮ್ಮ ಏನಾದರೂ ಪುನಃ ಚೇತರಿಸಿಕೊಂಡು ಮೇಲೆದ್ದರೆ ಅದು ಅವಳ ಸೇವೆ ಶುಶ್ರೂಷೆಯಿಂದ. ಹುಡುಗಿ ಬಹಳ ಯೋಗ್ಯಳು. ಕೆಲವು ದಿನವಾದರೂ ಅವಳನ್ನು ಇಲ್ಲಿ ಉಳಿಸಿಕೊಳ್ಳಲು ಪ್ರಯತ್ನಪಡಿ. ಇದೇ ನಾನು ಒತ್ತಿ ಹೇಳ ಬೇಕೆಂದಿದ್ದುದು.

" ಹಾಗೇ ಆಗಲಿ."—ದ್ವಿಜದಾಸ ಹೇಳಿದ.

" ಹೋಗುವುದಕ್ಕೆ ಮುಂಚೆ ಇದೊಂದು ಮಾತು ಹೇಳಬೇಕೆಂದಿ ದ್ದೇನೆ."

" ಹೇಳಿ "

" ನೀವು ಮದುವೆ ಮಾಡಿಕೊಳ್ಳಲೇ ಬೇಕು."

" ಏಕೆ ? "

" ಇಲ್ಲದಿದ್ದರೆ. ಈ ವಿಶಾಲ ಪರಿವಾರವು ಹೇಗೆಯೋ ಛಿನ್ನ ಛಿನ್ನ ವಾಗಿ ಹೋಗುವುದು."—ವಂದನ ವಿವರಿಸಿದಳು—" ನಿಮಗೆ ಮಿತಿಮೀರಿ ನಷ್ಟವಾಗಿದೆ ಎಂದು ನಾನು ಬಲ್ಲೆ. ಆದರೆ ಉಳಿದಿರುವುದೂ ಯಥೇಷ್ಟ ವಾಗಿದೆ. ನಿಮ್ಮಿಂದ ಎಷ್ಟು ದಾನ ಧರ್ಮನಡೆಯುತ್ತಿದೆ, ಎಷ್ಟು

ಸತ್ಕಾರ್ಯಗಳು ಸಾಗುತ್ತಿವೆ, ಎಷ್ಟು ಜನ ಆಶ್ರಿತರಿದ್ದಾರೆ, ಆದೆಷ್ಟು ದೀನ ದರಿದ್ರರಿಗೆ ನೀವು ಸಹಾಯಕರಾಗಿದ್ದೀರಿ—ಅದೂ ಇಂದಿನಿಂದಲೇ? ಎಷ್ಟು ಹಿಂದಿನಿಂದ ಈ ಪ್ರವಾಹ ಹರಿದು ಬರುತ್ತಿದೆ! ನಿಮ್ಮ ಪರಿವಾರದಲ್ಲಿ—ಎಂದೂ ನಿಲ್ಲದೆ ಅವಿಚ್ಛಿನ್ನವಾಗಿ. ಏಕೆ, ಈಗ ಅದು ಕಡಿದು ಹೋಗಬೇಕೆ? ಅಣ್ಣನವರು ಪ್ರಮಾದವಶಾತ್ ಹೋಗಿರುವುದು ಇಲ್ಲವೆ ನಿಮಗೆ ಹೆಚ್ಚಾಗಿದ್ದಾಗಬೇಕು ಅಥವ ಅದರಿಂದೇನೂ ಪ್ರಯೋಜನವಿಲ್ಲವೆನಬೇಕು. ಹೊರಟುಹೋದರು. ಅದನ್ನು ಮರೆತುಬಿಡಿ. ಅವರು ಬಿಟ್ಟು ಹೋಗಿರುವುದನ್ನೇ ಯಥೇಷ್ಟವೆಂದು ತಿಳಿದು ಸುಖವಾಗಿರಿ. ಉಳಿದಿರುವುದೇ ನಿಮಗೆ ಅಕ್ಷಯವಾಗಲಿ. ನಿಮ್ಮ ಪ್ರತಿದಿನದ ಅವಶ್ಯಕತೆಗೆ ಕೊರತೆ ಇಲ್ಲದಂತೆ ದೇವರು ಕೊಡಲಿ. ಇಂದು ನಿಮ್ಮನ್ನು ಬಿಟ್ಟು ಹೋಗುತ್ತಿರುವಾಗ ದೇವರಲ್ಲಿ ಇಷ್ಟು ಮಾತ್ರ ಬೇಡಿಕೊಳ್ಳುತ್ತೇನೆ."

ದ್ವಿಜದಾಸನ ಕಣ್ಣಿನಲ್ಲಿ ಕಣ್ಣೀರು ಉಕ್ಕಿಬಂದಿತು.

ವಂದನ ಮುಂದುವರಿಸಿದಳು—"ನಿಮ್ಮ ತಂದೆ ಪೂರ್ಣ ವಿಶ್ವಾಸದಿಂದ ನಿಮ್ಮ ಅಣ್ಣನ ವಶಕ್ಕೆ ತಮ್ಮ ಸರ್ವಸ್ವವನ್ನೂ ಒಪ್ಪಿಸಿಕೊಟ್ಟರು. ಆದರೆ ಅದು ಉಳಿಯಲಿಲ್ಲ. ತಂದೆಯ ಎದುರಿನಲ್ಲಿ ಅವರು ತಪ್ಪಿತಸ್ಥರು, ಆದರೆ ಆ ಸಣ್ಣ ಪ್ರಮಾದವು ಕಂಗಾಲರನ್ನಾಗಿಮಾಡಿ ಅವರ ಪುಣ್ಯಕರ್ಮವನ್ನು ಹಾಳುಮಾಡಿದರೆ ಎಂದೆಂದಿಗೂ ಮುಖರ್ಜಿಯವರು ಸಮಾಧಾನ ತಂದುಕೊಳ್ಳಲಾರರು. ಈ ಸಂಕಟ ಮತ್ತು ಕಳವಳದಿಂದ ಅವರನ್ನು ನೀವು ರಕ್ಷಿಸಲೇಬೇಕು."

ದ್ವಿಜದಾಸನು ಬಲಾತ್ಕಾರವಾಗಿ ದುಃಖವನ್ನು ನುಂಗಿಕೊಂಡು ಹೇಳಿದ—ಅಣ್ಣನ ವಿಚಾರವಾಗಿ ಯಾರೂ ಈ ರೀತಿ ಯೋಚಿಸಲಿಲ್ಲ. ವಂದನ ನಾನುಕೂಡ ಯೋಚಿಸಿರಲಿಲ್ಲ. ಎಂಥ ಆಶ್ಚರ್ಯ!"

ದೀಪಸ್ತಂಭದ ನೆರಳು ವಂದನಳ ಮುಖದ ಮೇಲೆ ಬಿದ್ದಿದ್ದ ಕಾರಣ ಆವಳ ಮುಖಚರ್ಯೆ ಕಂಡುಬರಲಿಲ್ಲ. ಅವನು ಹೇಳಿದ—"ಅಣ್ಣನಿಗಾಗಿ ನಾನು ಏನು ಬೇಕಾದರೂ ಕಷ್ಟ ಸಹಿಸಬಲ್ಲೆ. ಆದರೆ ಅವರ ಕಾರ್ಯದ ಹೊರೆಯನ್ನು ಹೇಗೆ ನಿರ್ವಹಿಸಲಿ? ಧೈರ್ಯಬರುವುದಿಲ್ಲ. ಅದನ್ನು ನೋಡಬೇಕೆಂದೇ ನಾನು ಹೊರಗೆ ಹೋಗಿದ್ದೆ. ಅವರ ಸ್ಕೂಲು,

ವಿದ್ಯಾಲಯ, ಸಂಸ್ಕೃತ ಪಾಠಶಾಲೆ, ಮುಸಲ್ಮಾನರಿಗಾಗಿ ಕಟ್ಟಿಸಿರುವ ಸಣ್ಣ ದೊಡ್ಡ ಸ್ಕೂಲುಗಳು—ಅವೂ ಒಂದೇ ಎರಡೇ? ಅನಂತವಾಗಿವೆ. ರೈತಾಪಿ ಜನಗಳಿಗೆ ನೀರನ್ನೊದಗಿಸಲು ಒಂದು ನಾಲೆಯನ್ನು ತೋಡಿಸುತ್ತಿದ್ದಾರೆ. ಅದಕ್ಕೆ ಇನ್ನೂ ಎಷ್ಟೋದಿನದವರೆಗೆ ಹಣ ಒದಗಿಸುತ್ತಿರಬೇಕು. ಕಾಗದ ಪತ್ರಗಳಲ್ಲಿ ಒಂದು ಪಟ್ಟಿ ಸಿಕ್ಕಿದೆ.—ಅದರಲ್ಲಿ ದಾನಧರ್ಮದ ಅಂಕಿ ಅಂಶ ಗಳಿವೆ. ಅವರು ಕೇಳಲು ಬಂದರೆ ನಾನು ಏನೆಂದು ತಾನೇ ಉತ್ತರ ಕೊಡಲಿ. ಒಂದೂ ತಿಳಿಯುವುದಿಲ್ಲ"

"ಸಿಗುತ್ತೆ ಎಂದು ಹೇಳಿ. ಹುಡುಕಿ ಕೊಡಲೇ ಬೇಕು. ಆದರೆ ಒಂದು ಮಾತು, ಇವುಗಳ ವಿಷಯವಾಗಿ ಅವರು ಯಾರಮುಂದೆಯೂ ಏನೂ ಹೇಳಲಿಲ್ಲವೆ?

"ಇಲ್ಲ".

"ಕಾರಣ?"

"ಸುಕೃತಸೋಪಾನಕ್ಕೆ ಎಂದಲ್ಲ. ಆದರೆ ಯಾರಮುಂದೆ ಹೇಳ ಬೇಕು? ಪ್ರಪಂಚದಲ್ಲಿ ಅವರಿಗೆ ಆತ್ಮೀಯರಾದವರು ಒಬ್ಬರೂ ಇರಲಿಲ್ಲ. ಕಷ್ಟ ಬಂದಾಗ ಒಬ್ಬರೇ ಸಹಿಸಿದ್ದಾರೆ: ಸುಖಬಂದಾಗಲೂ ಒಬ್ಬರೇ ಅನು ಭವಿಸಿದ್ದಾರೆ. ಅಥವ ಒಂದು ಪಕ್ಷ ಹೇಳಿದರೂ ಅವರ ಏಕಮಾತ್ರ ಬಂಧು ವಿಗೆ ಮಾತ್ರ''—ಎಂದು ಹೇಳುತ್ತ ಮೇಲಕ್ಕೆ ಕೈತೋರಿಸಿ ಪುನಃ ಹೇಳಿದ—ಆ ಮಾತು ಅಕ್ಕಪಕ್ಕದಲ್ಲಿದ್ದ ಸ್ವಜನರಿಗೆ ಗೊತ್ತಾಗುವುದು ಹೇಗೆ? ಅವ ರಿಗೆ ಮತ್ತು ಅವರ ಅಂತರ್ಯಾಮಿಗೆ—ಇಬ್ಬರಿಗೆ ಮಾತ್ರ ಗೊತ್ತಿದೆ.''

ವಂದಳನ ಉತ್ಸುಕತೆ ಇಮ್ಮಡಿಯಾಯಿತು. "ದ್ವಿಜುಬಾಬೂ" ಅವಳು ಕೇಳಿದಳು–" ಮುಖರ್ಜಿಯವರು ಇದುವರೆಗೆ ಯಾರನ್ನೂ ಪ್ರೀತಿ ಸಿಲ್ಲವೆಂದು ನಿಮಗನಿಸುತ್ತದೆಯೆ? ಯಾರನ್ನೂ?

"ಇಲ್ಲ"—ದ್ವಿಜದಾಸ ಉತ್ತರಕೊಟ್ಟ—"ಇದು ಅವರ ಪ್ರಕೃತಿಗೆ ವಿರುದ್ಧವಾದುದು. ಈ ಮಾನವ ಸಮಾಜದಲ್ಲಿ ಅವರಷ್ಟು ನಿಸ್ಸಂಗರೂ ಒಬ್ಬಂಟಿಗರೂ ಮತ್ತೆ ಯಾರೂ ಇರಲಾರರು.''

ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಿದ್ದರು.

ವಂದನ ಕಷ್ಟಪಟ್ಟು ಏನೊ ಹೊರೆಯನ್ನಿಳಿಸಿದವಳಂತೆ ಹೇಳಿದಳು–

"ಅದನ್ನು ಬಿಟ್ಟುಬಿಡಿ, ಆ ಎಲ್ಲಾ ಭಾರವನ್ನೂ ನೀವು ವಹಿಸಿಕೊಳ್ಳಲೇ ಬೇಕು. ಒಂದನ್ನೂ ಬಿಡಕೂಡದು.

" ಆದರೆ ನಾನು ' ಅಣ್ಣ ' ಅಲ್ಲವಲ್ಲ. ಒಬ್ಬನೇ ಹೇಗೆ ನಿರ್ವಹಿಸಲಿ ವಂದನ ? "

" ಒಬ್ಬರೇ ಏಕೆ ? ಇಬ್ಬರೂ ಸೇರಿ ನಿರ್ವಹಿಸಿ. ಆದುದರಿಂದಲೇ ತಾನೆ ನಿಮಗೆ ಮದುವೆ ಮಾಡಿಕೊಳ್ಳಿರೆಂದು ಹೇಳಿದುದು."

" ಪ್ರೇಮವಿಲ್ಲದ ಮದುವೆ ಮಾಡಿಕೊಳ್ಳುವುದು ಹೇಗೆ ? "

ವಂದನ ಆಶ್ಚರ್ಯದಿಂದ ಅವನ ಮುಖವನ್ನು ನೋಡಿದಳು— " ಇದೇನು ನೀವು ಹೇಳುತ್ತಿರುವುದು ? ಅವಳು ಹೇಳಿದಳು—" ದ್ವಿಜಬಾಬು ಈ ಮಾತು ಕೇವಲ ನಮ್ಮ ಸಮಾಜದಲ್ಲಿ ನಾವುಗಳು ಮಾತ್ರ ಆಡುತ್ತೇವೆ. ಅದಿರಲಿ ನಮ್ಮ ಪರಿವಾರದಲ್ಲಿ ತಾನೆ ಯಾರು ಸ್ವತಃ ಪ್ರೀತಿಸಿ ಯಾರನ್ನು ಮದುವೆಯಾಗಿದ್ದಾರೆ ? ನೀವು ಈಗ ಪ್ರೀತಿ ಇಲ್ಲದೆ ಹೇಗೆ ಮದುವೆಯಾಗಲಿ ಎಂದು ಕೇಳುವುದಕ್ಕೆ ? ಈ ನೆಪ ಬಿಟ್ಟುಬಿಡಿ."

" ಸರಿ ಇದು ನಮ್ಮ ವಂಶದಲ್ಲಿ ಬಂದಿಲ್ಲವೆಂದೇ ಇಟ್ಟುಕೊಳ್ಳೋಣ. ಆದರೆ ಅದೇ ಸಂಪ್ರದಾಯವನ್ನು ಯಾವಾಗಲೂ ಪಾಲಿಸಿಕೊಂಡು ಬರ ಬೇಕೆ ? ಅದರಿಂದ ನನಗೆ ಸುಖಶಾಂತಿ ದೊರೆಯುವುದೆಂಬುದರಲ್ಲಿ ಎಳ್ಳಷ್ಟೂ ವಿಶ್ವಾಸವಿಲ್ಲ.

" ವಿಶ್ವಾಸದ ಎದುರಿನಲ್ಲಿ ತರ್ಕ ಏನೂ ನಡೆಯುವುದಿಲ್ಲ. ಮತ್ತು ಸುಖವೇ ಸಿಗುವುದೆಂದು ಭರವಸೆ ಕೊಡಲಾರೆ. ಏಕೆಂದರೆ ಆ ಸಂಪತ್ತು ಯಾರಿಗಿದೆಯೊ ನಾಕಾಣೆ. ಅವರ ವಿಚಾರ ಸರಣಿ ಅದ್ಭುತವಾದುದು. ಆ ತತ್ವ ವಿಚಾರ ಈಗ ಬೇಕಿಲ್ಲ. ಆದರೆ ಮದುವೆಗೆ ಮುಂಚೆ ನಡೆಯುವ ಪೂರ್ವಾನುರಾಗ, ನಯನಮನ ರಂಜನ ಉಪಾಯ—ಇವುಗಳನ್ನು ಬೇಕಾ ದಷ್ಟು ನೋಡಿದ್ದೇನೆ. ಆ ಅನುರಾಗವು ಒಮ್ಮೆ ಎಂತಹ ಗಹನವಾದ ಕಡೆ ಎಳೆದೊಯ್ದಿದ್ದಿತೆಂದು ಹೇಳಲು ಕುಳಿತರೆ ಅದೇ ಒಂದು ದೊಡ್ಡ ಕತೆ. ದ್ವಿಜ ಬಾಬು. ಆ ಬಲೆಗೆ ನೀವೂ ಸಿಕ್ಕಿ ನೋಡಬೇಕಾಗಿಲ್ಲ. ಸುವರ್ಣ ಮೃಗವು ಯಾವ ಕಾಡಿನಲ್ಲಿ ಬೇಕಾದರೂ ಮೇಯುತ್ತಿರಲಿ. ಈ ಮನೆಯಲ್ಲಿ ಅದಕ್ಕೆ ಔತಣ ಕೊಡುವ ಅಗತ್ಯವಿಲ್ಲ."

ದ್ವಿಜದಾಸನು ಮುಗುಳ್ನಗೆಯಿಂದ ಹೇಳಿದ—" ಅಂದರೆ ಸುಧೀರ ಚಂದ್ರನು ನಿಮ್ಮ ಮನಸ್ಸು ಬಹಳ ಕೆಡಿಸಿರಬೇಕೆಂದು ತೋರುತ್ತದೆ."

" ಹೌದು"—ವಂದನ ನಗುತ್ತಲೆ ಪ್ರತಿವಾದಿಸಿದಳು—" ಆಗ ಉಳಿ ದಿದ್ದ ಅಲ್ಪ ಸ್ವಲ್ಪ ಮನಸ್ಸನ್ನೂ ನೀವು ಕೆಡಿಸಿಬಿಟ್ಟಿರಿ. ಅನಂತರ ಅಶೋಕ ಬಂದ. ಈ ಹಾಳು ಅದೃಷ್ಟಕ್ಕೆ ಅವನಾದರೂ ಸ್ಥಿರವಾಗಿ ನಿಂತರೆ ಬದು ಕಿದೆ."

" ಯಾರು ಅಶೋಕ ? ಅವರ ವಿಚಾರವಾಗಿ ನಿಮಗೇನು ಹೆದರಿಕೆ?"

" ಹೆದರಿಕೆಯೇನಂದರೆ ಅವರೂ ಅಕಸ್ಮಾತ್ತಾಗಿ ಪ್ರೀತಿಸಲು ಶುರು ಮಾಡಿದ್ದಾರೆ."

" ಅಂದರೆ ನಿಮ್ಮ ಪ್ರೇಮ ಪ್ರೀತಿಯ ಹತ್ತಿರ ಒಬ್ಬರೂ ಸುಳಿಯ ಬಾರದೆಂದು ಅಭಿಪ್ರಾಯವೋ "

" ಹೌದು. ಇದೇ ನನ್ನ ಪ್ರತಿಜ್ಞೆ. ಒಂದು ವೇಳೆ ಮದುವೆ ಮಾಡಿಕೊಂಡರೆ ಬಹಳ ದೊಡ್ಡ ಸುಖ ದೊರೆಯುವುದೆಂಬ ಆಶೆಯಿಂದ ಯಾವುದಾದರೂ ಅಪಹಾಸ್ಯಕ್ಕೀಡಾಗುವುದಿಲ್ಲ. ಆದುದರಿಂದಲೇ ಅಶೋಕ ಬಾಬುವಿಗೆ ಮೊದಲೇ ತಿಳಿಸಿದ್ದೇನೆ. ನೀವು ಪ್ರೀತಿಸುವುದಾದರೆ ನಾನು ಓಡಿಹೋಗುತ್ತೇನೆ ಎಂದು."

" ಅದಕ್ಕೆ ಅವರೇನಂದರು ? "

" ಏನೂ ಹೇಳಲಿಲ್ಲ. ಸುಮ್ಮನೆ ನನ್ನ ಮುಖದ ಕಡೆ ನೋಡಿ ಸುಮ್ಮನಾದರು. ಅವರ ಅವಸ್ಥೆ ನೋಡಿ ನನಗೆ ಛೆ ಪಾಪ ಅನ್ನಿಸಿತು."

" ನಿಜವಾಗಿಯೂ ದುಃಖವಾಗಿದ್ದರೆ ಇನ್ನೂ ಸ್ವಲ್ಪ ಆಶೆ ಇದೆ. ಆದರೆ ನನಪಿರಲಿ. ಇದೆಲ್ಲ ನಿಮ್ಮ ಚಿಕ್ಕಮ್ಮನ ಮನೆಯಲ್ಲಿ ಕಂಡು ಕೇಳಿ ದುದರ ಪ್ರತಿಕ್ರಿಯೆ—ಕೇವಲ ಕ್ಷಣಿಕ. ಸ್ಥಿರವಾಗಿ ನಿಲ್ಲುವ ಮಾತಲ್ಲ."

" ಅದೂ ಸಂಭವವಲ್ಲ. ಆದರೂ ಆಗಿರಬಹುದು. ಆದರೆ ಬಹಳ ಕಲಿತಿದ್ದೇನೆ. ಕಲ್ಕತ್ತೆಗೆ ಬಂದದ್ದು ಒಳ್ಳೆಯದೇ ಆಯಿತೆಂದು ಯೋಚಿಸು ತ್ತೇನೆ. ಇಲ್ಲದಿದ್ದರೆ ಎಷ್ಟೋ ವಿಚಾರಗಳನ್ನು ತಿಳಿಯದೇ ಇರಬೇಕಾಗಿತ್ತು "

ದ್ವಿಜದಾಸ ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದ—" ಇನ್ನು ಹೆಚ್ಚು ಸಮಯವಿಲ್ಲ. ಕಡೆಯದಾಗಿ ಏನು ಹೇಳಬೇಕೆಂದಿರುವಿರೊ ಹೇಳಿ

ಮುಗಿಸಿ ನಾನು ಏನು ಮಾಡಬೇಕು ?"

ವಂದನ ಪರಿಹಾಸ್ಯ ಮಾಡುವವಳಂತೆ ಕತ್ತನ್ನೊ ಅತ್ತ ಅಲುಗಾಡಿ —"ಹೇಳಲೇ ಬೇಕೆ ? ಖಂಡಿತ ?" ಎಂದು ಕೇಳಿದಳು.

"ಹೌದು. ಹೇಳಲೇ ಬೇಕು. ನಾನೇನು 'ಅಣ್ಣ' ಅಲ್ಲ. ನನಗೆ ಆತ್ಮೀಯರೂ ಬೇಕು. ಮತ್ತು ಅವರ ಉಪದೇಶವೂ ಬೇಕು. ಮದುವೆ ಮಾಡಿಕೊಳ್ಳಲು ಹೇಳಿದಿರಿ. ಆಗಲಿ. ಮದುವೆಯಾಗುತ್ತೇನೆ. ಪ್ರೇಮ ವಂತೂ ಬೇಡ. ಆತ್ಮೀಯತೆಯೂ ಇಲ್ಲದೆ ಈ ಭಾರವನ್ನು ಹೊರಿಸಿ ಹೋದರೆ ಅದನ್ನು ಹೇಗೆ ನಿರ್ವಹಿಸಲಿ ?"

ದ್ವಿಜದಾಸನ ಮುಖದ ಮೇಲೆ ಪರಿಹಾಸ್ಯದ ಕುರುಹೂ ಸಹ ಇರಲಿಲ್ಲ. ಅವನ ದನಿಯು ವಂದನಳ ಮನಸ್ಸನ್ನು ಕರಗಿಸಿತು. "ಹೆದರ ಬೇಡಿ ದ್ವಿಜಬಾಬು"–ಅವಳು ಹೇಳಿದಳು—"ಆತ್ಮೀಯರು ಬೇಕೇ ಬೇಕಾದಲ್ಲಿ ದೇವರು ಮನೆಯ ಬಾಗಿಲುಗಳಿಗೆ ತಂದುಬಿಡುತ್ತಾನೆ. ಅಷ್ಟು ವಿಶ್ವಾಸವಿರಲಿ."

ಪ್ರತ್ಯುತ್ತರವಾಗಿ ದ್ವಿಜದಾಸನು ಏನೋ ಹೇಳಬೇಕೆಂದಿದ್ದನು. ಅಷ್ಟ ರಲ್ಲಿ "ದ್ವಿಜಬಾಬು ಒಳಗಿದ್ದಾರೆಯೇ ?" ಎಂದು ಮೈತ್ರೇಯಿ ಕೂಗಿ ಕೇಳಿದಳು.

ದ್ವಿಜದಾಸ ಎದ್ದು ನಿಂತು ಹೇಳಿದ—"ಹನ್ನೆರಡು ಗಂಟೆಗೆ ಸರಿಯಾಗಿ ರೈಲು ಹೊರಡುತ್ತದೆ. ಹನ್ನೊಂದುವರೆ ಗಂಟೆಯ ಹೊತ್ತಿಗೆ ಮನೆ ಬಿಟ್ಟು ಬಿಡಬೇಕು. ಆ ಹೊತ್ತಿಗೆ ಸರಿಯಾಗಿ ಬಂದು ಕೂಗುತ್ತೇನೆ ನೆನಪಿರಲಿ." —ಇಷ್ಟು ಹೇಳಿ ಅವಸರದಿಂದ ಹೊರಟುಹೋದನು.

## ೨೫

ಸುಖವಾಗಿ ಬೊಂಬಾಯಿಗೆ ತಲಿಪಿದ ಸಮಾಚಾರವನ್ನು ತಿಳಿಸಿ ವಂದನ ಬರೆದ ಎಷ್ಟೋ ದಿನಗಳನಂತರ ದ್ವಿಜದಾಸನಿಂದ ಉತ್ತರ ಬಂದಿತು. ನಾನಾ ಕಾರ್ಯಗಳಲ್ಲಿ ತೊಡಗಿರುವ ಕಾರಣ ಉತ್ತರ ಬರೆಯಲು ಅವಕಾಶ ದೊರೆಯಲಿಲ್ಲವೆಂದು ಬರೆದಿದ್ದನು. ವಂದನ ಅಲ್ಲಿದ್ದಾಗ ಹೇಗೆ ನಡೆಯು ತ್ತಿತ್ತೋ ಎಲ್ಲವೂ ಅದೇರೀತಿ ಸಾಗುತ್ತಿವೆ. ಬರೆದು ತಿಳಿಸುವಂಥ ವಿಶೇಷ ಸಮಾಚಾರ ಏನೂ ಇಲ್ಲ. ಮೈತ್ರೇಯಿಯ ತಂದೆ ಕಲ್ಕತ್ತೆಗೆ ವಾಪಸು

ಹೋಗಿದ್ದಾರೆ. ಅವಳು ಮಾತ್ರ ಇನ್ನೂ ಅಲ್ಲೇ ಇದ್ದಾಳೆ. ಅಮ್ಮನ ಸೇವೆ ಶುಶ್ರೂಷೆಯಲ್ಲಿ ಕೊಂಚವೂ ತಪ್ಪು ಕಂಡುಬರುವುದಿಲ್ಲ. ಸದ್ಯಕ್ಕೆ ಮನೆ ಆಡಳಿತವೆಲ್ಲ ಅವಳ ತಲೆಮೇಲೆ ಬಿದ್ದಿದೆ. ಸರಿಯಾಗಿ ನಡೆಯುತ್ತಿದೆ. ಮನೆಯವರೆಲ್ಲ ಅವಳ ವಿಷಯದಲ್ಲಿ ಸಂತುಷ್ಟರಾಗಿದ್ದಾರೆ. ಸ್ವತಃ ದ್ವಿಜ ದಾಸನೂ ಕೂಡ ಅವಳ ವಿಷಯವಾಗಿ ಏನೊಂದು ಮಾತು ಸಹ ಆಡಲು ಅವಕಾಶ ಸಿಕ್ಕಿಲ್ಲ. ಕೊನೆಯದಾಗಿ ವಂದನ ಮತ್ತು ಅವಳ ತಂದೆಗೆ ಯಥಾ ವಿಧಿ ನಮಸ್ಕಾರಗಳನ್ನು ಬರೆದು ಪತ್ರವನ್ನು ಮುಗಿಸಿದ್ದಾನೆ.

ಇದಾದ ಮೇಲೆ ಮೂರು ಮಾಸಗಳು ಉರುಳಿದವು. ಯಾರಿಂದಲೂ ಕಾಗದ ಪತ್ರವಿಲ್ಲ. ಅಕ್ಕ, ವಾಸು, ಮತ್ತು ವಿಪ್ರದಾಸರು ಇವರ ಸಮಾ ಚಾರವನ್ನು ತಿಳಿಯಬೇಕೆಂದು ವಂದನಳ ಮನಸ್ಸು ಆಗಾಗ್ಗೆ ಹಾತೊರೆಯು ತ್ತಿರುತ್ತದೆ. ಆದರೆ ತಿಳಿದುಕೊಳ್ಳುವ ಬಗೆ ಹೇಗೆಂದು ಹುಡುಕಿದರೂ ಗೊತ್ತಾಗಲಿಲ್ಲ ಅವರಿಂದ ಇದುವರೆಗೆ ಎಲ್ಲಿದ್ದಾರೆ, ಏನು ಮಾಡುತ್ತಿದ್ದಾರೆ ಎಂಬುದಕ್ಕೆ ಕಾಗದ ಬಂದಿಲ್ಲ. ಆ ವಿಷಯವನ್ನು ತಿಳಿಸಲು ದ್ವಿಜದಾಸನಿಗೆ ಪತ್ರ ಬರೆಯಬೇಕು. ಮನಸ್ಸಿನಲ್ಲಿ ನೂರಾರು ಸಲ ಇಚ್ಛಿಸಿದರೂ ಏನೋ ನಾಚಿಕೆಯಿಂದ ದ್ವಿಜದಾಸನಿಗೆ ಪತ್ರ ಬರೆಯಲು ಸಾಧ್ಯವಾಗಿಲ್ಲ. ಈಗ ಬಲರಾಮಪುರದ ನೆನಪು ಮಾಸಿ, ಅಲ್ಲಿನ ದುಃಖವೂ ಆರುತ್ತಾ ಇದೆ. ಆದಾಗ್ಯೂ ಅಲ್ಲಿಂದ ಬಂದಾಗ ಅವಳ ಅವಸ್ಥೆ ಬಹಳ ಶೋಚನೀಯವಾಗಿ ದ್ದಿತು. ಆದರೆ ಕ್ರಮೇಣ ಅವಳ ವಿಕ್ಷುಬ್ಧ ಮನಸ್ಸು ಶಾಂತವಾದಂತೆಲ್ಲ ಆ ಜನಗಳ ಜೊತೆಯಲ್ಲಿ ಅಷ್ಟು ಗಾಢಬಾಂಧವ್ಯವೇನೂ ಇಲ್ಲವೆಂದು ಅವ ಳಿಗನಿಸುತ್ತಿದೆ. ಒಟ್ಟಿಗೇ ಇದ್ದ ಕಾರಣದಿಂದ ಆ ಸುಖದುಃಖದಿಂದ ತುಂಬಿದ ದಿನಗಳು ಅವರೊಡನೆ ಎಷ್ಟು ಗಾಢವಾದ ಸಂಬಂಧವನ್ನು ಸ್ಥಾಪಿಸಿದ್ದರೂ ಅದು ಕೇವಲ ಕ್ಷಣಿಕ ಆಚಾರನಿಷ್ಠ ಮುಖರ್ಜಿ ಪರಿವಾರಕ್ಕೆ ಅವಳ ಆವಶ್ಯ ಕತೆ ಇಲ್ಲವೆಂದೂ ಅದು ಎಂದಿಗೂ ತನ್ನದಲ್ಲವೆಂದೂ ಅವಳು ಭಾವಿಸು ತ್ತಿದ್ದಳು. ಎರಡು ಸಮಾಜದ ಆಚಾರ ವಿಚಾರ, ಶಿಕ್ಷೆ, ದೀಕ್ಷೆ ಇವುಗಳಲ್ಲಿ ಎಷ್ಟು ಅಂತರವಿದೆ. ಅದು ಸತ್ಯ ಮತ್ತು ಕಠೋರ. ಅದನ್ನು ಹೋಗ ಲಾಡಿಸುವುದು ಅಸಾಧ್ಯ.

ಇಷ್ಟರಲ್ಲಿ ಪಂಜಾಬಿನಿಂದ ಅವಳ ಚಿಕ್ಕಮ್ಮ ಬಂದಳು. ಅವಳ

ಆರೋಗ್ಯ ಚೆನ್ನಾಗಿಲ್ಲವಂತೆ. ಪಂಜಾಬಿಗಿಂತ ಬೊಂಬಾಯಿಯ ವಾಯು ಗುಣ ಚೆನ್ನಾಗಿದೆ ಎಂದು ಯಾವ ಡಾಕ್ಟರನು ಸಲಹೆ ಕೊಟ್ಟನೋ ಏನೋ ಅವಳೊಬ್ಬಳಿಗೇ ಗೊತ್ತು. ಬಂದಿರುವುದು ಮಾತ್ರ ಆರೋಗ್ಯದ ನೆಪದಿಂದ. ಬೊಂಬಾಯಿಗೆ ಬರುವುದಕ್ಕೆ ಮುಂಚೆ ವಂದನ ಅವಳಿಗೆ ಹೇಳಿ ಬರಲಿಲ್ಲವೆಂಬ ದುಗುಡ ಮನಸ್ಸಿನಲ್ಲಿತ್ತು. ಆದರೆ ತಂಗಿಯ ಮಗಳ ಸ್ವಭಾವ ಎಂತಹುದೆಂಬುದರ ಅರಿವು ಅವಳಿಗೆ ಎಂದೋ ಉಂಟಾಗಿದೆ. ಆದುದರಿಂದ ತನ್ನ ತಂಗಿಯ ಗಂಡನ ಮುಂದೆ ಆ ವಿಚಾರ ಎತ್ತುವುದಕ್ಕೂ ಅವಳಿಗೆ ಧೈರ್ಯವಿಲ್ಲ. ಆದರೂ ಒಮ್ಮೆ ಅವರೆಲ್ಲರೂ ಒಟ್ಟಿಗೆ ಮೇಜಿನಸುತ್ತಲೂ ಊಟಕ್ಕೆ ಕುಳಿತಿದ್ದರು. ಆಗ ಕಾರಣಾಂತರವನ್ನು ತೋರುತ್ತ ಆ ವಿಚಾರವೆನ್ನೆತ್ತಿದಳು—ಮಿಸ್ಟರ್ ರೇ, ತಾವು ಒಂದು ವಿಷಯ ಗಮನಿಸಿದ್ದೀರೋ ಇಲ್ಲವೋ ಗೊತ್ತಿಲ್ಲ. ಆದರೆ ನಾನು ಅನೇಕ ಕಡೆ ನೋಡಿದ್ದೇನೆ. ತಂದೆ ತಾಯಿಗೆ ಒಬ್ಬನೇ ಹುಡುಗ ಅಥವಾ ಒಬ್ಬಳೇ ಮಗಳಿದ್ದರೆ ಅವರಷ್ಟು ಹಟವಾದಿಗಳು ಬೇರೆ ಯಾರೂ ಇರುವುದಿಲ್ಲ. ಅವರ ಸಂಗಡ ಹೆಣಗಾಡುವುದು ಕಷ್ಟ."

ಸಾಹೇಬರು ಆ ಮಾತನ್ನು ಕೂಡಲೆ ಒಪ್ಪಿಕೊಂಡರು. ಅದಲ್ಲದೆ ಪಕ್ಕದಲ್ಲಿಯೇ ಅದಕ್ಕೆ ದೃಷ್ಟಾಂತವಿದೆ. ಪರಮಾನಂದದಿಂದ ದೃಷ್ಟಾಂತವನ್ನು ತೋರಿಸುತ್ತ 'ಇಗೋ ಈ ಹುಚ್ಚು ಹುಡುಗಿ ಇಲ್ಲವೆ ಒಂದು ಸಲ 'ಒಲ್ಲೆ' ಎಂದಮೇಲೆ ಬ್ರಹ್ಮ ಅಲ್ಲ ಬ್ರಹ್ಮನ ಅಪ್ಪ ಬಂದರೂ ಪುನಃ ಒಪ್ಪಿಸಲು ಸಾಧ್ಯವಿಲ್ಲ. ಚಿಕ್ಕ ಹುಡುಗಿಯಾಗಿದ್ದಾಗಿನಿಂದಲೂ ನಾನೂ ನೋಡುತಿದ್ದೇನೆ............"

"ಬಹುಶಃ ಈ ಹಟಮಾರಿ ಮಗಳನ್ನು ನೀವು ಪ್ರೀತಿಸುವುದಿಲ್ಲವೆಂದೇ ಕಾಣುತ್ತೆ ಅಲ್ಲವೆ?" ವಂದನ ಕೇಳಿದಳು.

ಸಾಹೇಬರು ಪ್ರತಿವಾದಿಸುತ್ತ "ಏನು ನೀನು ನನ್ನ ಹಟಮಾರಿ ಹುಡುಗಿಯೆ? ಎಂದಿಗೂ ಅಲ್ಲ. ಯಾರೂ ಹಾಗೆ ಹೇಳಲಾರರು" ಎಂದರು.

ವಂದನ ಜೋರಾಗಿ ನಕ್ಕು ಹೇಳಿದಳು—"ಅಪ್ಪ, ಇದೇ ಈಗ ನೀವೇ ಹೇಳುತ್ತಿದ್ದಿರಲ್ಲ."

"ನಾನೆ ? ಎಂದಿಗೂ ಇಲ್ಲ."

ಕೇಳಿ ಚಿಕ್ಕಮ್ಮನಿಗೂ ನಗದೇ ಸುಮ್ಮನಿರಲು ಸಾಧ್ಯವಾಗಲಿಲ್ಲ. 'ಅಪ್ಪ ಆದಿರಲಿ ನಿಮ್ಮಂತೆ ಅಮ್ಮನಿಗೂ ನನ್ನನ್ನು ಕಂಡರಾಗುತ್ತಿರಲಿಲ್ಲ. ಅಲ್ಲವೆ ?' ವಂದನ ಕೇಳಿದಳು.

"ನಿನ್ನ ಅಮ್ಮನಿದ್ದಾಗ ಇದೇ ವಿಷಯವಾಗಿ ಎಷ್ಟೋಸಲ ನನಗೂ ಅವಳಿಗೂ ಜಗಳ ಸಹ ನಡೆದಿದೆ. ನೀನು ಚಿಕ್ಕ ಹುಡುಗಿಯಾಗಿದ್ದಾಗ ಒಮ್ಮೆ ನನ್ನ ವಾಚು ಒಡೆದು ಹಾಕಿದೆ. ಆಗ ಅವಳು ಸಿಟ್ಟುಮಾಡಿಕೊಂಡು ನಿನ್ನ ಕಿವಿ ಹಿಂಡಿದಳು. ನೀನು ಅಳುತ್ತ ನನ್ನ ಹತ್ತಿರ ಓಡಿಬಂದುಬಿಟ್ಟೆ. ನಾನು ನಿನ್ನನ್ನು ಎತ್ತಿ ಮುದ್ದಾಡಿದುದು ಮಾತ್ರವಲ್ಲದೆ ಆ ದಿನ ಎಲ್ಲ ಅವಳೊಡನೆ ಮಾತಾಡಲಿಲ್ಲ" ಎಂದು ಹೇಳುತ್ತಿರುವಾಗ ಏನೇನೋ ಜ್ಞಾಪಕಕ್ಕೆ ಬರಲು ಅವಳ ತಲೆಯನ್ನು ಎದೆಯಮೇಲಿಟ್ಟುಕೊಂಡು ಕೈಗಳಿಂದ ನೇವರಿಸ ತೊಡಗಿದರು.

"ಆಗ ನೀವು ಪ್ರೀತಿಸುತ್ತಿದ್ದರೆ ಈಗೇಕೆ ಪ್ರೀತಿಸುತ್ತಿಲ್ಲಪ್ಪ"

"ಕೇಳಿದಿರಾ ಮಿಸೆಸ್ ಘೋಷಾಲ್. ಈ ಹುಚ್ಚು ಹುಡುಗಿ ಮಾತು ಕೇಳಿದಿರಾ ?"

ವಂದನ—ಹಾಗಾದರೆ ಆಗಾಗ್ಗೆ ನೀವೇಕೆ ಹೇಳುತ್ತಿರುತ್ತೀರಿ—ಇವಳಿಗೆ ಮದವೆಮಾಡಿಬಿಟ್ಟರೆ ಸಾಕು ಒಂದು ದೊಡ್ಡ ಜಂಜಾಟದಿಂದ ಪಾರಾದೆ ಅಂತ. ನಾನು ನಿಮ್ಮ ಕಣ್ಣಿಗೆ ಒತ್ತುತ್ತೇನೆಯೆ ?"

ಸಾಹೇಬರು–"ಮಿಸಸ್ ಘೋಷಾಲ್ ಕೇಳಿಸಿತೆ ? ಹುಡುಗಿ ಮಾತು'

ಚಿಕ್ಕಮ್ಮ—"ನಿಜ ವಂದನ. ಮಗಳು ಬೆಳೆದು ದೊಡ್ಡವಳಾದಳೂ ಅಂದರೆ ತಂದೆ ತಾಯಿಗೆ ಎಷ್ಟು ಚಿಂತೆಗೆ ಕಾರಣವಾಗುತ್ತೆಂಬುದು ನಿನಗೆ ಮಗಳಾದಾಗ ಗೊತ್ತಾಗುತ್ತದೆ."

ವಂದನ—ಅದನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆ ನನಗಿಲ್ಲ.

ಚಿಕ್ಕಮ್ಮ—"ಆದರೂ ತಂದೆಯ ಕರ್ತವ್ಯವನ್ನು ಅವರು ಮಾಡಬೇಡವೆ ? ಯಾರ ತಂದೆ ತಾಯಿಯ ಜೀವಮಾನವೇನೂ ಶಾಶ್ವತವಲ್ಲ. ಮಕ್ಕಳು ಮರಿಯ ಭವಿಷ್ಯವನ್ನು ಕುರಿತು ಯೋಚಿಸದಿದ್ದರೆ ಅವರು ತಪ್ಪಿತಸ್ಥರಾಗುತ್ತಾರೆ. ನಿಮ್ಮ ತಂದೆಯ ಮನಸ್ಸಿಗೆ ಏಕೆ ಶಾಂತಿ ಇಲ್ಲ ಎಂಬು

ದನ್ನು ತಂದೆತಾಯಿಯಾದವರು ಮಾತ್ರ ತಿಳಿದುಕೊಳ್ಳಬಲ್ಲರು. ನಿನ್ನ ಅಕ್ಕ ಪ್ರಕೃತಿಯ ಮದುವೆ ಮಾಡುವವರೆವಿಗೆ ನನಗೆ ಉಂಡ ಅನ್ನ ಮೈಗೆ ಹತ್ತುತ್ತಿರಲಿಲ್ಲ. ಕಣ್ಣಿಗೆ ಕಣ್ಣು ಹಚ್ಚಿ ನಿದ್ರೆ ಮಾಡಲಾಗುತ್ತಿರಲಿಲ್ಲ. ಎಷ್ಟು ರಾತ್ರಿ ನಿದ್ರೆ ಇಲ್ಲದೆ ಕಳೆದಿದ್ದೇನೆಂಬುದು ನಿನಗೆ ಗೊತ್ತಾಗುವುದಿಲ್ಲ. ನಿನ್ನ ತಂದೆಗೆ ಗೊತ್ತು. ನಿಮ್ಮ ತಾಯಿ ಬದುಕಿದ್ದರೆ ಅವರಿಗೂ ನನ್ನ ಅವಸ್ಥೆಯೇ ಆಗುತ್ತಿತ್ತು.''

ರೇ ಸಾಹೇಬರು ತಲೆಯಲ್ಲಾಡಿಸುತ್ತ ಸಮರ್ಥಿಸಿದರು. "ನಿಜ ಮಿಸೆಸ್ ಘೋಷಾಲ್ ನೀವು ಹೇಳುವುದು ಹದಿನಾರಣೆ ನಿಜ. ಅವರ ಕಡೆ ತಿರುಗಿ ಚಿಕ್ಕಮ್ಮ ಪ್ರಾರಂಭಿಸಿದಳು—ಇವಳ ತಾಯಿ ಇವತ್ತು ಬದುಕಿದ್ದರೆ ವಂದನಳ ವಿಷಯದಲ್ಲಿ ನೀವು ಸುಮ್ಮನಿರಲು ಬಿಡುತ್ತಿರಲಿಲ್ಲ. ನಾನೇನು ಕಡಿಮೆ ಕಾಟಕೊಟ್ಟಿನೆ ಅವರಿಗೆ ? ಅದನ್ನು ನೆನಸಿಕೊಂಡರೆ ಸಾಕು ನಾಚಿಕೆಯಾಗುತ್ತದೆ."

ಸಾಹೇಬರು ಅವಳನ್ನು ಅನುಮೋದಿಸುತ್ತ ಹೇಳಿದರು.

'ಛೆ ಅದರಲ್ಲಿ ನಿಮ್ಮ ತಪ್ಪೇನಿದೆ. ಪ್ರಪಂಚದ ರೀತಿಯೇ ಹಾಗೆ.''

ಚಿಕ್ಕಮ್ಮ ಹೇಳತೊಡಗಿದಳು—'' ನಾನೂ ಹಾಗೇಂತ ತಿಳಿದು ಕೊಂಡಿದ್ದೆ. ಮಗಳ ಮದುವೆ ಎಂದಿಗಾಗುತ್ತೋ ಎಂಬ ಚಿಂತೆ-ನನಗೂ ವಯಸ್ಸಾಗುತ್ತಿದೆ. ಮನುಷ್ಯನ ಹುಟ್ಟು ಸಾವು ಯಾರಿಗೆ ತಾನೆ ಗೊತ್ತು ಬದುಕಿರುವಾಗಲೇ ಮಗಳನ್ನು ಯಾವುದಾದರೂ ಒಂದು ದಡ ಸೇರಿಸಲಿಲ್ಲ. ಅಕಸ್ಮಾತ್ತಾಗಿ ಏನಾದರೂ ಆಗಿ ಹೋದರೆ—ಹೀಗೆ ಯೋಚಿಸುತ್ತಿದ್ದೆ. ಅವರಂತೂ ಯೋಚನೆಯಿಂದ ಹೆದರಿ ಒಣಗಿಹೋಗಿದ್ದರು."

ವಂದನಳ ಸಹನೆ ಮಿತಿಮೀರಿತು. ಅವಳ ತಂದೆಯ ಮುಖವೂ ಬಾಡಿದೆ. ಊಟ ಸಹ ಸರಿಯಾಗಿ ಮಾಡಲಿಲ್ಲ. "ಚಿಕ್ಕಮ್ಮ, ವಿನಾ ಕಾರಣ ಈಗ ಇವರನ್ನು ಹೆದರಿಸುತ್ತಿದ್ದೀಯ. ಈಗ ಅಂಥಾದ್ದೇನಾಗಿದೆ ಹೇಳು ನೋಡೋಣ. ಅಪ್ಪ ಇನ್ನೂ ಅನೇಕ ವರ್ಷ ಬದುಕಿರುತ್ತಾರೆ. ಮಗಳ ಹಿತಕ್ಕಾಗಿ ಏನು ಮಾಡಬೇಕೋ ಅದನ್ನು ಮಾಡಲು ಇನ್ನೂ ಬೇಕಾದಷ್ಟು ಸಮಯ ಇದೆ. ಸುಳ್ಳು ಸುಳ್ಳೆ ನೀನು ಹೆದರಿಸಿ ಕಂಗಾಲ ಮಾಡಬೇಡ.

ಚಿಕ್ಕಮ್ಮ ಏನೂ ಸುಮ್ಮನೆ ಕೂತಿರುವ ಜೀವವಲ್ಲ. ರೇ ಸಾಹೇಬರು ಅವಳ ಮಾತುಗಳನ್ನೇ ಸಮರ್ಥಿಸುತ್ತ, "ನಿನ್ನ ಚಿಕ್ಕಮ್ಮ ಹೇಳಿದ್ದು ನಿಜ ಮಗು" ಎಂದು ಹೇಳಿ ಮಾತು ಮುಂದುವರಿಸಿ— "ವಾಸ್ತವವಾಗಿ ನನಗೆ ಆಗಾಗ್ಗೆ ಮೈ ಚೆನ್ನಾಗಿರುವುದಿಲ್ಲ. ಅದೂ ಅಲ್ಲದೆ ಈ ಶರೀರ ಏನು ಸ್ಥಿರ? ಇವರು ನಮಗೆ ಕೇವಲ ಬೇಕಾದವರು. ಇವರಲ್ಲದೆ ಮತ್ತೆ ಯಾರು ಬುದ್ಧಿ ಹೇಳಬೇಕು ಹೇಳು?" ಇಷ್ಟು ಹೇಳಿ ಅವರು ಇಬ್ಬರ ಮುಖವನ್ನೂ ನೋಡಿದರು. ಮಂದಳನ ಮುಖ ಕೊಂಚ ಮ್ಲಾನವಾಗುತ್ತಿದೆ ಎಂಬುದನ್ನು ಚಿಕ್ಕಮ್ಮ ಓರೆ ನೋಟದಿಂದಲೇ ತಿಳಿದುಕೊಂಡಳು. ರೇ ಸಾಹೇಬರ ಮಾತಿಗೆ ನಾಚಿ ಹೇಳಿದಳು—"ರೇ ಸಾಹೇಬ್, ನೀವು ಹಾಗೆ ಹೇಳಕೂಡದು ನಿಮಗೆ ನೂರಕ್ಕಿಂತಲೂ ಹೆಚ್ಚು ವರ್ಷ ಆಯುಸ್ಸನ್ನು ಭಗವಂತನು ಕರುಣಿಸಲಿ. ನಾವು ದೇವರನ್ನು ಪ್ರಾರ್ಥಿಸುವುದು ಇದೊಂದೆ. ನಾನು ಕೇವಲ ಇಷ್ಟು ಮಾತ್ರ ಹೇಳಬೇಕೆಂದಿದ್ದೆ....."

ಸಾಹೇಬರು ಮಧ್ಯದಲ್ಲಿಯೇ 'ಅಲ್ಲ ನೀವು ಹೇಳಿದುದು ಸರಿ.' ಎಂದು ಪ್ರಾರಂಭಿಸಿದರು "ನಿಜವಾಗಿಯೂ ನನ್ನ ದೇಹಸ್ಥಿತಿ ಕೆಟ್ಟು ಹೋಗುತ್ತಿರುವಾಗಲೇ ಎಚ್ಚತ್ತುಕೊಳ್ಳದೆ ಕರ್ತವ್ಯವನ್ನು ಉಪೇಕ್ಷಿಸುವುದು ಖಂಡಿತ ಅನುಚಿತ."

ಮಂದನ ತನ್ನ ಸಿಟ್ಟನ್ನು ತಾನೇ ನುಂಗಿಕೊಂಡು 'ಚಿಕ್ಕಮ್ಮ, ಇನ್ನು ನಮ್ಮ ತಂದೆಗೆ ಅನ್ನ ನೀರು ಸಹ ಸೇರುವಂತಿಲ್ಲ' ಎಂದು ಹೇಳಿದಳು.

ಆದಕ್ಕೆ ಚಿಕ್ಕಮ್ಮ "ರೇ ಸಾಹೇಬ್ ಊಟಮಾಡಿ. ನೀವು ಸರಿಯಾಗಿ ಊಟ ಮಾಡದಿದ್ದರೆ ನನಗೆ ತುಂಬಾ ವ್ಯಸನವಾಗುತ್ತದೆ." ಎಂದಳು.

ಸಾಹೇಬರಿಗೆ ಊಟ ಅಷ್ಟು ರುಚಿಸಲಿಲ್ಲ. ಆದಾಗ್ಯೂ ಒಂದು ತುಂಡು ಮಾಂಸವನ್ನು ಕತ್ತರಿಸಿ ಬಾಯಿಗೆ ಎಸೆದುಕೊಂಡರು. ಇದಾದ ಮೇಲೆ ಸ್ವಲ್ಪ ಹೊತ್ತಿನವರೆಗೆ ಮಾತಿಲ್ಲದೆ ಊಟ ಸಾಗುತ್ತಿತ್ತು.

"ಮಿಸೆಸ್ ಘೋಷಾಲ್, ಅಳಿಯಂದಿರ ಪ್ರಾಕ್ಟೀಸ್ ಹೇಗೆ ನಡೆಯುತ್ತಿದೆ" ರೇ ಸಾಹೇಬರು ಪ್ರಶ್ನಿಸಿದರು.

"ಇನ್ನೂ ಇದೇ ಪ್ರಾರಂಭ. ಅಷ್ಟೇನೂ ನಿರಾಶಾಜನಕವಾಗಿಲ್ಲ ಅಂತ ಕೇಳಿದೆ'—ಉತ್ತರ ಬಂದಿತು.

ಪುನಃ ಸ್ವಲ್ಪ ಹೊತ್ತು ಸದ್ದಿರಲಿಲ್ಲ ಚಿಕ್ಕಮ್ಮ ಬಾಯಲ್ಲಿದ್ದ ತುತ್ತನ್ನು ನುಂಗುತ್ತ ಹೇಳಿದಳು–"ನೋಡಿ ರೇ ಸಾಹಬ್, ಪ್ರಾಕ್ಟೀಸ್ ಹೇಗೇ ಇರಲಿ ನಾನು ಅದೊಂದೂ ಮುಖ್ಯ ಅಂತ ತಿಳಿದಿಲ್ಲ. ಅದಕ್ಕಿಂತಲೂ ಮುಖ್ಯ ವಾದುದು ಮನುಷ್ಯನ ನಡತೆ. ಅದೊಂದು ಸರಿಯಾಗಿಲ್ಲದಿದ್ದ ಪಕ್ಷಕ್ಕೆ ಹುಡುಗಿ ಎಂದಿಗೂ ಸುಖದಿಂದಿರಲಾರಳು."

" ಅದರಲ್ಲೇನು ಸಂದೇಹ."

ಚಿಕ್ಕಮ್ಮ ಮುಂದುವರಿಸಿದಳು—" ಒಂದು ದೊಡ್ಡ ತೊಂದರೆ ಏನೂ ಅಂತೀರೊ ನನ್ನಲ್ಲಿ ನಮ್ಮ ತೌರುಮನೆಯ ಸಂಸ್ಕಾರ ಇನ್ನೂ ಉಳಿದಿದೆ. ಅವರ ಆದರ್ಶ ನನ್ನ ಮನಸ್ಸಿನಲ್ಲಿ ಮನೆಮಾಡಿದೆ. ಅದಕ್ಕೆ ವಿರುದ್ಧವಾಗಿ ಸ್ವಲ್ಪ ಹೆಚ್ಚು ಕಡಿಮೆಯಾದರೂ ನಾನು ಸಹಿಸಲಾರೆ. ಅಶೋಕನನ್ನು ನೋಡಿದಾಗಲೆಲ್ಲ ನನಗೆ ನನ್ನ ಚಿಕ್ಕಂದಿನ ನೆನಪಾಗುತ್ತದೆ. ನನ್ನ ಅಪ್ಪ ಮತ್ತು ನನ್ನ ಅಣ್ಣ ಹೇಗಿದ್ದರೋ ಥೇಟ್ ಅದೇ ರೀತಿ ಇದಾನೆ ಈ ಅಶೋಕ. ಅಷ್ಟೇ ಸರಲ ಸ್ವಭಾವ. ಅಷ್ಟೇ ಸಚ್ಚರಿತ್ರ." ರೇ ಸಾಹೇಬರು ಎಲ್ಲವನ್ನೂ ಒಪ್ಪಿ ಬಿಟ್ಟರು.

" ಹೌದು ನನಗೂ ಹಾಗೆಯೇ ಅನಿಸುತ್ತಿತ್ತು. ಹುಡುಗ ನಿಜವಾಗಿಯೂ ಸಚ್ಚರಿತ್ರ. ಇಲ್ಲೂ ಐದಾರು ದಿನ ಇದ್ದ. ಅವನ ವ್ಯವಹಾರವನ್ನು ನೋಡಿ ನಾನು ಮುಗ್ಧನಾಗಿದ್ದೇನೆ." ಹೀಗೆ ಹೇಳಿ ತಮ್ಮ ಮಗಳನ್ನು ಸಾಕ್ಷಿಯಾಗಿಟ್ಟುಕೊಂಡು ಮತ್ತೆ ಹೇಳಿದರು–ಏನೆ ಹುಚ್ಚಿ ನಾನು ಹೇಳಿದ್ದು ಸರಿಯೆ? ಅಶೋಕ ಎಷ್ಟು ಒಳ್ಳೆಯವನು. ಅವನು ಇಲ್ಲಿಂದ ಹೊರಟು ಹೋದ ದಿನ ನನಗೆ ಹೇಗೆ ಹೇಗೊ ಆಯಿತು.'

ವಂದನ ಒಪ್ಪಿಕೊಳ್ಳುತ್ತ ಹೇಳಿದಳು—"ಹೌದು ಅಪ್ಪ. ಬಹಳ ಒಳ್ಳೇ ಜನ. ಎಷ್ಟು ವಿನಯಶೀಲರೊ ಅಷ್ಟೇ ಸಚ್ಚರಿತ್ರರು. ನಾನು ಹೇಳಿದುದಕ್ಕೆ ಒಂದು ದಿನಕ್ಕೆ ಪ್ರತಿಯಾಗಿ ಏನೂ ಹೇಳಲಿಲ್ಲ. ಬೊಂಬಾಯಿಗೆ ನನ್ನನ್ನು ಅವರು ಕರೆದುಕೊಂಡು ಬರದಿದ್ದರೆ ಎಷ್ಟು ತೊಂದರೆಯಾಗುತ್ತಿತ್ತು ಗೊತ್ತೇ?

" ವಂದನ, ಇನ್ನೊಂದು ವಿಷಯ ನೀನು ಗಮನಿಸಿರಬೇಕು. ಅವನಲ್ಲಿ ಈಗಿನ ಜನರಲ್ಲಿ ಕಂಡು ಬರುತ್ತದೆಯಲ್ಲ, ಹಾಗೆ ' ಸ್ನಾಬರಿ' ಇಲ್ಲವೇ ಇಲ್ಲ.

ನಮ್ಮಲ್ಲಿ ಅನೇಕರಲ್ಲಿ ಆ ದುರ್ಗುಣ ಇದೆ ಅಂತ ಒಪ್ಪಿಕೊಳ್ಳಲೇಬೇಕು."
–ಚಿಕ್ಕಮ್ಮ ಹೇಳಿದಳು.

ವಂದನ ನಗುತ್ತ "ಚಿಕ್ಕಮ್ಮ, ಆದರೆ ನಿಮ್ಮ ಮನೆಯಲ್ಲಿ ಒಂದು ದಿನಕ್ಕೆ 'ಸ್ನಾಬ್' ನೋಡಲಿಲ್ಲ" ಎಂದಳು.

"ಏಕೆ ನೋಡಲಿಲ್ಲ"—ಚಿಕ್ಕಮ್ಮ ಪ್ರತಿವಾದಿಸಿದಳು. "ನೀನು ಬುದ್ಧಿವಂತ. ನಿನಗೆ ಅವರು ಮೋಸ ಮಾಡುವುದಾದರೂ ಹೇಗೆ?"

ಇದು ಕೇಳಿ ರೇ ಸಾಹೇಬರೂ ನಕ್ಕರು. ಈ ಮಾತು ಅವರಿಗೆ ತುಂಬ ರುಚಿಸಿತು, 'ಮಿಸೆಸ್ ಘೋಷಾಲ್' ಸಾಧಾರಣವಾಗಿ ಇಷ್ಟು ಬುದ್ಧಿ ಮತ್ತೆ ಯಾರಲ್ಲೂ ಕಂಡು ಬರುವುದಿಲ್ಲ. ತಂದೆಯೇ ಈ ಮಾತು ಹೇಳಿದರೆ ಅಷ್ಟು ಚೆನ್ನಾಗಿರುವುದಿಲ್ಲ. ಏನು ಹೆಮ್ಮೆಯಪ್ಪ ಮಗಳ ವಿಷಯದಲ್ಲಿ ಅನ್ನುತ್ತಾರೆ. ಆದರೂ ಹೇಳಲೇ ಬೇಕಾಗುತ್ತದೆ." ಎಂದರು.

"ಪ್ರಶಂಸೆ ಇಲ್ಲಿಗೆ ಸಾಕುಮಾಡು ಚಿಕ್ಕಮ್ಮ,"—ವಂದನ ಹೇಳಿದಳು—"ಇಲ್ಲವಾದರೆ ನೋಡಿ ನಮ್ಮ ಅಪ್ಪನನ್ನು ಹಿಡಿಯುವುದೇ ಕಷ್ಟವಾಗುತ್ತದೆ. ನೀನು ಏಕ ಮಾತ್ರ ಪುತ್ರಿಯರನ್ನು ಮಾತ್ರ ನೋಡಿರಬೇಕು. ಅವರ ತಂದೆಗೆ ಇರುವಷ್ಟು ಜಂಭ ಮತ್ತೆ ಯಾರಲ್ಲಾದರೂ ಸಿಗುವುದೊ, ಇಲ್ಲವೊ ಅದನ್ನು ನೋಡಿರಲಿಲ್ಲ. ನಮ್ಮ ತಂದೆಯ ವಿಚಾರದಲ್ಲಿ ಅವರ ಮಗಳಂಥ ಹುಡುಗಿ ಈ ಪ್ರಪಂಚದಲ್ಲೇ ಇಲ್ಲ."

"ವಂದನ, ಅವರ ಆ ವಿಚಾರವನ್ನು ನಾನೂ ಅನುಮೋದಿಸುತ್ತೇನೆ. ಇದಕ್ಕೆ ಶಿಕ್ಷೆಯನ್ನು ವಿಧಿಸುವುದಾದರೆ ನನಗೂ ವಿಧಿಸಬೇಕು."–ಚಿಕ್ಕಮ್ಮ ಹೇಳಿದಳು.

ತಂದೆಯ ಮುಖದ ಮೇಲೆ ಅನಿರ್ವಚನೀಯ ಆನಂದವು ನಗುವಿನ ರೂಪದಲ್ಲಿ ಕಂಡುಬರುತ್ತಿದ್ದಿತು—'ನನಗೆ ಜಂಭ ಇದೆಯೊ ಇಲ್ಲವೊ ನನಗಂತೂ ಗೊತ್ತಿಲ್ಲ. ಆದರೆ ಕನ್ಯಾರತ್ನವನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಚಾರಿಸಿದರೆ ನನ್ನಷ್ಟು ಭಾಗ್ಯಶಾಲಿ ಮತ್ತೊಬ್ಬರಿಲ್ಲ. ಇಂಥ ಮಗಳಿರುವುದು ಬಹು ಅಪರೂಪ' ಎಂದರು.

"ಅಪ್ಪ, ಇದೇನು ಒಂದು 'ಸಂದೇಶ' ವನ್ನಾದರೂ ತಿಂದಿಲ್ಲ. ಬಹುಶಃ ಚೆನ್ನಾಗಿಲ್ಲಾಂತ ಕಾಣುತ್ತೆ."

ಸಾಹೇಬ್ ಅರ್ಧ ಸಂದೇಶವನ್ನು ಮುರಿದು ಬಾಯಿಗೆ ಹಾಕಿಕೊಳ್ಳುತ್ತ ಹೇಳಿದರು—ಎಲ್ಲವನ್ನು ಇವಳೇ ಮಾಡಿದ್ದಾಳೆ. ಈ ಸಲ ಕಲ್ಕತ್ತೆಯಿಂದ ಬಂದ ಮೇಲೆ ಇಡಿ ಊಟವನ್ನೇ ಬದಲಾಯಿಸಿಬಿಟ್ಟಿದ್ದಾಳೆ. ರಸ, ಪಲ್ಯ, ಹುಳಿ, ಮೀನಿನ ಝೋಲ ಅಧಿಪ ಶೋರಭ-ಮೊಸರು ಸಂದೇಶ —ಇವೇ ಮುಂತಾದ ಏನೇನೋ ಅಡಿಗೆಯನ್ನು ಮಾಡುತ್ತಾಳೆ. ಯಾರಿಂದ ಕಲಿತು ಬಂದಿದ್ದಾಳೋ ಏನೋ ವ ಸೆಯಲ್ಲಿ ಮಾಂಸ ತರಲು ಬಿಡುವುದಿಲ್ಲ. ಅದರಿಂದ ನನ್ನ ಆರೋಗ್ಯ ಕೆಟ್ಟುಹೋಗುತ್ತದೆ ಎನ್ನುತ್ತಾಳೆ. ಈ ಬಂಗಾಲಿ ಅಡಿಗೆ ತಿಂದು ತಿಂದು ಈ ಮುದಿವಯಸ್ಸಿನಲ್ಲಿಯೂ ನಾನು ಆರೋಗ್ಯವಾಗಿರುವಂತೆ ತೋರುತ್ತಿದೆ. ಮಿಸೆಸ್ ಘೋಸಲ್, ಇತ್ತೀಚೆಗೆ ಕೊಂಚ ಹಸಿವು ಸಹ ಆಗುತ್ತದೆ."

"ಚಿಕ್ಕಮ್ಮನಿಗೆ ಅಭ್ಯಾಸವಿಲ್ಲವೆಂತ ಕಾಣುತ್ತೆ. ಬಹಳ ತೊಂದರೆಯಾಗಿರಬೇಕು"—ವಂದನ ಹೇಳಿದಳು.

ಚಿಕ್ಕಮ್ಮನಿಗೆ ಈ ಗೂಢವ್ಯಂಗ್ಯ ಗೊತ್ತಾಗಲಿಲ್ಲವೋ ಏನೋ ಅಂತೂ ಇಂತು ಆ ಕಡೆ ಗಮನಕೊಡದೆ—"ಇಲ್ಲ ಇಲ್ಲ. ತೊಂದರೆ ಏಕೆ? ನನಗಿದು ಬಹು ಚೆನ್ನಾಗಿದೆ. ಕೇವಲ ಹವ ಬದಲಾಯಿಸಿದ ಮಾತ್ರಕ್ಕೆ ಆಯಿತೇ ಡಯಟ್ನೂ ಛೇಂಜ್ ಆಗಬೇಕು. ಆದುದರಿಂದಲೇ ಅಂತ ಕಾಣುತ್ತೆ ನಾನು ಇಷ್ಟು ಜಾಗ್ರತೆ ಗುಣ ಹೊಂದಿದೆ" ಎಂದು ಉತ್ತರವಿತ್ತಳು.

"ಗುಣಹೊಂದುತ್ತಿದ್ದೀಯಲ್ಲವೆ ಚಿಕ್ಕಮ್ಮ?"

"ಖಂಡಿತ. ಇದರಲ್ಲೇನು ಸಂದೇಹ."

"ಹಾಗಾದರೆ ಇನ್ನೂ ಕೆಲವು ದಿನ ಇಲ್ಲಿದ್ದರೆ ಪೂರ್ಣ ಗುಣ ಹೊಂದುತ್ತೀಯೆ."

ಆದರೆ ಹೆಚ್ಚು ದಿನ ಇರುವುದು ಸಾಧ್ಯವಿಲ್ಲ ವಂದನ. ಈ ತಿಂಗಳ ಕೊನೆಯಲ್ಲಿ ಛೇಂಜ್‌ಗೋಸ್ಕರ ಅಶೋಕ ಪಂಜಾಬಿಗೆ ಬರುತ್ತಾನಂತೆ. ಅವನು ಬರುವುದಕ್ಕೆ ಮುಂಚಿತವಾಗಿಯೇ ನಾನು ಅಲ್ಲಿಗೆ ಹೋಗಬೇಕು."

ಭೋಜನಕಾಂಡ ಮುಗಿಯುವುದರಲ್ಲಿತ್ತು. ಸಾಹೇಬರು ಏಳಬೇಕೆಂದಿದ್ದರು. ಇತ್ತ ಚಿಕ್ಕಮ್ಮನ ಮನಸ್ಸು ಕಳವಳಗೊಂಡಿತು. ಆ ಪ್ರಸ್ತಾಪವನ್ನೆತ್ತುವುದಕ್ಕೆ ಬೇಕಾದ ವಾತಾವರಣವನ್ನು ಕಲ್ಪಿಸಿಕೊಂಡಿದ್ದಳು.

ಅದನ್ನು ಈಗ ಕಣ್ಣೆದುರಿನಲ್ಲಿಯೇ ನಷ್ಟಪಡಿಸಿದರೆ ಪುನಃ ಅಂತಹ ಸನ್ನಿವೇಶವನ್ನು ಕಲ್ಪಿಸುವುದು ಕಷ್ಟಸಾಧ್ಯ. ಹೀಗೆಂದು ಯೋಚಿಸಿ ಸಂಕೋಚವನ್ನು ಕಿತ್ತೆಸೆದು " ಮಿಸ್ಟರ್ ರೇ, ಒಂದು ಮಾತು ಹೇಳಬೇಕಾಗಿತ್ತು. ಇನ್ನೂ ಹೊತ್ತಿದ್ದರೆ...." ಎಂದು ಪ್ರಾರಂಭಿಸಿದಳು.

ಆ ಕ್ಷಣ ಸಾಹೇಬರು ಕುಳಿತುಕೊಂಡು ' ಇಲ್ಲ ಇಲ್ಲ. ಬೇಕಾದಷ್ಟು ಹೊತ್ತಿದೆ. ಏನೂ ಹೇಳಬೇಕೋ ಹೇಳಿ ' ಎಂದರು. ಚಿಕ್ಕಮ್ಮ—"ವಂದನ ಕೂಡ ಒಲ್ಲೆ ಎಂದು ಹೇಳಿದಳೆಂದು ಕೇಳಿದೆ. ಅಶೋಕ ಅಷ್ಟು ಐಶ್ವರ್ಯವಂತನಲ್ಲ. ಆದರೂ ತನ್ನ ವಿದ್ಯಾ ಬುದ್ಧಿ ಮತ್ತು ಸಚ್ಚರಿತ್ರದಿಂದ ಸ್ಟ್ರಗಲ್ ಮಾಡಿ ಇಂದಲ್ಲ ನಾಳೆಯಾದರೂ ಉನ್ನತಿಯನ್ನು ಪಡೆಯುತ್ತಾನೆಂದು ನಾನು ನಂಬಿದ್ದೇನೆ. ಒಂದು ಪಕ್ಷ ಅವನು ನಿಮ್ಮ ಮಗಳಿಗೆ ಅಯೋಗ್ಯನಲ್ಲವೆಂದು ತಿಳಿದರೆ...." " ಅದು ಹೇಗೆ ಸಾಧ್ಯ, ಮಿಸೆಸ್ ಘೋಷಾಲ್ " ಸಾಹೇಬರು ಆಶ್ಚರ್ಯದಿಂದ ಹೇಳಿದರು. "ಅಶೋಕ ನಿಮ್ಮ ಸೋದರಳಿಯ. ಅಂದರೆ ಸಂಬಂಧದಲ್ಲಿ ಅವನು ವಂದನಳಿಗೆ ಸೋದರಮಾವನಾದ ".*

" ಅದು ಸುಮ್ಮನೆ ಹೇಳಿಕೊಳ್ಳುವುದಕ್ಕೆ. ಅದು ಬಹಳ ದೂರದ ಸಂಬಂಧ. ನನ್ನಜ್ಜಿ ಮತ್ತು ವಂದಳನ ಅಜ್ಜಿ ಇಬ್ಬರೂ ಅಕ್ಕ ತಂಗಿಯರು. ಆ ಸಂಬಂಧದಿಂದಲೇ ನಾನು ವಂದನಳಿಗೆ ಚಿಕ್ಕಮ್ಮ ಆಗಬೇಕು. ಆದುದರಿಂದ ಈ ಮದುವೆ ಎಂದಿಗೂ ನಿಷಿದ್ಧವಲ್ಲ ಮಿಸ್ಟರ್ ರೇ.

ಸಾಹೇಬರು ಸ್ವಲ್ಪ ಹೊತ್ತು ಸುಮ್ಮನಿದ್ದರು. ಬಹುಶಃ ಮನಸ್ಸಿನಲ್ಲಿ ಏನೋ ಗುಣಕಾರ ಹಾಕುತ್ತಿರಬೇಕು. ಅನಂತರ ಹೇಳಿದರು—"ನಾನು ನೋಡಿದ ಮಟ್ಟಿಗೆ ಮತ್ತು ವಂದನಳ ಬಾಯಿಂದ ಅವನ ವಿಚಾರವಾಗಿ ಕೇಳಿದ್ದನ್ನು ಗಮನಿಸಿದರೆ ಅಶೋಕ ಅಯೋಗ್ಯವರ ಎಂದು ನಾನು ಹೇಳಲಾರೆ. ಹುಡುಗಿಯ ಮದುವೆಯನ್ನು ಇಂದಲ್ಲ ಒಂದು ದಿನ ಮಾಡಲೇಬೇಕು. ಆದರೆ ಅವಳಿಷ್ಟವೇನೆಂದು ತಿಳಿದುಕೊಳ್ಳಬೇಕಲ್ಲ."

ಚಿಕ್ಕಮ್ಮ ಬಹಳ ಪ್ರೀತಿಯಿಂದ ವಂದನಳನ್ನು ಪ್ರೋತ್ಸಾಹಿಸಿದಳು. –" ಮಗು ಈಗ ನಾಚಿಕೆ ಪಡಬೇಡ. ನಿಮ್ಮ ತಂದೆಯ ಮುಂದೆ ಹೇಳಿ

---

* ಬಂಗಾಲಿಗಳಲ್ಲಿ ಸೋದರಮಾವನೊಂದಿಗೆ ಮದುವೆಯಾಗುವುದು ನಿಷಿದ್ಧ.

ಬಿಡು. ಏನು ನಿನ್ನ ಇಚ್ಛೆ ? ”

ವಂದನಳ ಮುಖ ಸ್ವಲ್ಪ ಕೆಂಪೇರಿತು. ಆದರೆ ಮರುಕ್ಷಣದಲ್ಲಿಯೇ ಅವಳು ಖಚಿತವಾಗಿ ಹೇಳಿಬಿಟ್ಟಳು—“ ಚಿಕ್ಕಮ್ಮ, ನನ್ನ ಇಚ್ಛೆ ಅಪೇಕ್ಷೆ ಇವುಗಳನ್ನು ಬಿಟ್ಟುಬಿಟ್ಟಿದ್ದೇನೆ. ಅದನ್ನು ಪುನಃ ಹುಡುಕಬೇಕಾದ್ದಿಲ್ಲ.”

“ ಅಂದರೆ ? ” ಸಾಹೇಬರು ಹೆದರುತ್ತ ಕೇಳಿದರು.

“ ಇದರ ಅರ್ಥವನ್ನು ನಾನು ಸ್ಪಷ್ಟವಾಗಿ ಒಡೆದು ಹೇಳಲಾರೆ. ಅಪ್ಪ, ಅಂದರೆ ಇದರಿಂದ ನಾನು ಅಡ್ಡಿ ಮಾಡುತ್ತಿರುವೆನೆಂದು ಮಾತ್ರ ತಿಳಿಯಬೇಡಿ.”—ಸ್ವಲ್ಪ ಸುಮ್ಮನಿದ್ದು ಹೇಳಿದಳು—“ ನನ್ನ ಅಕ್ಕ ಸತಿಯ ವಿವಾಹವಾದುದು ಅವಳು ಇನ್ನೂ ಒಂಬತ್ತು ವರ್ಷದ ಹುಡುಗಿಯಾಗಿದ್ದಾಗ. ತಂದೆ ತಾಯಿಗಳು ಯಾರಿಗೆ ಅವಳನ್ನು ಒಪ್ಪಿಸಿದರೊ ಅವರನ್ನೇ ಅವಳು ಅಂಗೀಕರಿಸಿದಳು. ತನ್ನ ಬುದ್ಧಿಯಿಂದೇನೂ ಆರಿಸಿಕೊಳ್ಳಲಿಲ್ಲ. ಆದಾಗ್ಯೂ ಅದೃಷ್ಟವಶಾತ್ ಅವಳಿಗೆ ಪ್ರಪಂಚದಲ್ಲೇ ಅತಿ ದುರ್ಲಭನಾದ ಗಂಡ ಸಿಕ್ಕಿದ್ದಾನೆ. ಅಪ್ಪ ನಾನೂ ಅದೇ ಅದೃಷ್ಟವನ್ನು ನಂಬುತ್ತೇನೆ. ವಿಪ್ರದಾಸ ಬಾಬು ಬಹಳ ಯೋಗ್ಯರು, ಸತ್‌ಪುರುಷರು ನಾನು ಇಲ್ಲಿಗೆ ಬರುವಾಗ ಆಶೀರ್ವಾದಮಾಡಿ ಅವರು ಹೇಳಿದ್ದಾರೆ. ಎಲ್ಲಿ ಸೇರುವುದರಿಂದ ನಿನಗೆ ಕಲ್ಯಾಣವಾಗುವುದೊ ಭಗವಂತನು ಅಲ್ಲಿಗೇ ನಿನ್ನನ್ನು ಸೇರಿಸುತ್ತಾನೆ ಅಂತ. ಅವರ ಆ ಮಾತು ಎಂದಿಗೂ ಸುಳ್ಳಾಗಲಾರದು. ನೀವು ನನಗೆ ಏನು ಹೇಳಿದರೆ ಅದಕ್ಕೆ ನಾನು ಒಪ್ಪಿಕೊಳ್ಳುತ್ತೇನೆ. ಮನಸ್ಸಿನಲ್ಲಿ ಎಳ್ಳಷ್ಟೂ ಸಂಶಯವನ್ನಿಟ್ಟುಕೊಳ್ಳುವುದಿಲ್ಲ. ನನಗೆ ಕೊಂಚವೂ ಭಯವಿಲ್ಲ.”

ಸಾಹೇಬರು ಆಶ್ಚರ್ಯದಿಂದ ದಂಗುಬಡಿದು ಕುಳಿತು ಅವಳ ಮುಖವನ್ನೇ ನೋಡುತ್ತಿದ್ದರು. ಬಾಯಿಂದ ಮಾತೇ ಹೊರಡಲಿಲ್ಲ.

“ ಮದುವೆಯಾದಾಗ ನಿನ್ನ ಅಕ್ಕ ಸತಿ ಇನ್ನೂ ಹುಡುಗಿ. ಆದುದರಿಂದ ಅವಳನ್ನು ಕೇಳಿಮಾಡಿ ಮಾಡುವ ಪ್ರಶ್ನೆಯೇ ಏಳಲಿಲ್ಲ. ಆದರೆ ನೀನೇನೂ ಹುಡುಗಿಯಲ್ಲ. ದೊಡ್ಡವಳಾಗಿದ್ದೀಯೆ ನಿನ್ನ ಒಳ್ಳೆಯದು ಕೆಟ್ಟದ್ದು—ಇದರ ಜವಾಬ್ದಾರಿ ನಿನ್ನ ಮೇಲಿದೆ. ಹೀಗೆ ಕಣ್ಣುಮುಚ್ಚಿಕೊಂಡು ಹಣೆಯಲ್ಲಿ ಬರೆದದ್ದಾಗಲೆಂದು ಕುಳಿತುಕೊಳ್ಳುವುದು ಯೋಗ್ಯವಲ್ಲ” ಎಂದು ಚಿಕ್ಕಮ್ಮ ಸಲಹೆ ಇತ್ತಳು.

" ಚಿಕ್ಕಮ್ಮ, ಯೋಗ್ಯವೋ ಅಯೋಗ್ಯವೋ ನನಗೊಂದೂ ಗೊತ್ತಿಲ್ಲ. ಆದರೆ ಅವಳಂತೆ ನಾನೂ ಅದೃಷ್ಟವನ್ನು ಸಂತೋಷದಿಂದ ಒಪ್ಪಿಕೊಳ್ಳುತ್ತಾನೆ.''

" ಹೀಗೆ ಉದಾಶೀನಳಾಗಿ ನೀನು ಮಾತನಾಡಿದರೆ ನಿಮ್ಮ ತಂದೆ ಹೇಗೆ ನೆಮ್ಮದಿಯಿಂದಿದ್ದಾರು ಹೇಳು."

' ನನ್ನ ಅಕ್ಕ ಸತಿಯ ವಿಷಯದಲ್ಲಿ ಅವರ ಅಣ್ಣ ಹೇಗಿದ್ದರೊ ಹಾಗೆ. ಇವರ ಹಿಂದಿನವರು ತಮ್ಮ ಹೆಣ್ಣುಮಕ್ಕಳ ಮದುವೆ ಮಾಡುವಾಗ ಹೇಗೆ ನಿಶ್ಚಿಂತೆಯಿಂದಿದ್ದರೊ, ಹಾಗೇ ಇವರು ನೆಮ್ಮದಿಯಾಗಿರಲಿ.'

" ನೀನು ಸ್ವತಃ ನೋಡುವುದಿಲ್ಲವೆ? ಏನೂ ಯೋಚಿಸುವುದಿಲ್ಲವೆ?"

' ಯೋಚಿಸಿ ಗೀಚಸಿ, ನೋಡಿಮಾಡಿದ್ದು ಬೇಕಾದಷ್ಟಾಯಿತು. ಚಿಕ್ಕಮ್ಮ, ಅದು ಇನ್ನು ಸಾಕು. ಇನ್ನು ತಂದೆಯ ಆಶೀರ್ವಾದದ ಮೇಲೆ ಮತ್ತು ಇದುವರೆಗೂ ಯಾರೂ ಕಾಣದ ಅದೃಷ್ಟದಮೇಲೆ ಭರವಸೆಯನ್ನಿಟ್ಟು ನೆಮ್ಮದಿಯಾಗಿರುತ್ತಾನೆ."

ಚಿಕ್ಕಮ್ಮ ಹತಾಶಳಾಗಿ ಸ್ವಲ್ಪ ಕಹಿಯಾಗಿಯೇ ಹೇಳಿದಳು "ಅದೃಷ್ಟವನ್ನು ನಾವೂ ನಂಬುತ್ತೇವೆ. ಆದರೆ ಮುಖರ್ಜಿಯವರ ಈ ಕೆಲವು ದಿನಗಳ ಸಂಸರ್ಗವು ಆ ನಮ್ಮ ಸಮಾಜ, ಶಿಕ್ಷಣ, ಸಂಸ್ಕಾರ ಇವನ್ನೆಲ್ಲಾ ಮುಳುಗಿಸುವಷ್ಟು ನಿನ್ನ ಮೇಲೆ ಪ್ರಭಾವ ಬೀರುವುದೆಂದು ನಾನು ಯೋಚಿಸಿರಲಿಲ್ಲ. ಇವತ್ತಿನ ನಿನ್ನ ಮಾತು ಕೇಳಿದರೆ ನೀನು ಅದೇ ವಂದನ ಎಂದುನಂಬುವುದಕ್ಕಾಗುವುದಿಲ್ಲ. ನಮ್ಮಗಳಿಂದ ನೀನು ಬಹುದೂರವಾದಂತೆ ತೋರುತ್ತದೆ."

" ಇಲ್ಲ ಚಿಕ್ಕಮ್ಮ, ನಾನೇನು ದೂರವಾಗಿಲ್ಲ. ಅವರನ್ನು ಹೊಂದುವುದಕ್ಕಾಗಿ ನಾನು ಯಾರನ್ನೂ ದೂರ ಮಾಡಬೇಕಾಗಿಲ್ಲ. ಇದನ್ನು ಖಚಿತವಾಗಿ ತಿಳಿದೇ ಬಂದಿದ್ದೇನೆ. ನನ್ನ ವಿಷಯದಲ್ಲಿ ನಿಮಗೇನೂ ಹೆದರಿಕೆ ಬೇಡ."

" ಹಾಗಾದರೆ ಅಶೋಕನನ್ನು ಕರೆಸಲು ತಂತಿ ಕೊಡೋಣವೆ?'' ಚಿಕ್ಕಮ್ಮ ಪ್ರಶ್ನಿಸಿದಳು.

"ಕೊಡಿ. ನನ್ನದೇನೂ ಅಭ್ಯಂತರವಿಲ್ಲ."—ಇಷ್ಟು ಹೇಳಿ ವಂದನ ಅಲ್ಲಿಂದ ಎದ್ದು ಹೊರಟುಹೋದಳು.

"ಮಿಸ್ಟರ್‌ರೇ, ನಿಮ್ಮ ಹೆಸರಿನಲ್ಲಿಯೇ ತಂತಿ ಕೊಟ್ಟರಾಯಿತು" ಎಂದು ಹೇಳುತ್ತ ಮುಖ ಎತ್ತಿ ನೋಡಿದಾಗ ರೇ ಸಾಹೇಬರ ಕಣ್ಣುಗಳಲ್ಲಿ ನೀರು ತುಂಬಿ ಬಂದಿರುವುದನ್ನು ಕಂಡು ಆಶ್ಚರ್ಯವಾಯಿತು. ಅವಳಿಗೆ ಇದರ ಕಾರಣ ಗೊತ್ತಾಗಲಿಲ್ಲ. "ಇರಲಿ ಬಿಡಿ ಇವತ್ತು ಬೇಡ, ಮಿಸೆಸ್ ಘೋಷಾಲ್' ಎಂದು ಅವರು ಅಸ್ಪಷ್ಟ ದನಿಯಲ್ಲಿ ಹೇಳಿದಾಗಲೂ ಕೂಡ ಅರ್ಥವಾಗದೆ 'ಏಕೆ ? ಏಕೆ ಬೇಡ ಇವತ್ತು? ಎಂದರಚಿದಳು.

"ಬೇಡ ಇವತ್ತು ಅದು ಬೇಡ" ಎಂದಿಷ್ಟು ಹೇಳಿ ಅವರು ಸುಮ್ಮನಾದರು. ಅವರ ಆ ಮೌನ ಮತ್ತು ಕಣ್ಣೀರು ಚಿಕ್ಕಮ್ಮನನ್ನು ರೇಗಿಸಿದವು. ಸ್ಥಾನಮಾನವನ್ನು ಪಡೆದ ಸುಪ್ರತಿಷ್ಠನಾದ ವ್ಯಕ್ತಿಯ ಈ ಭಾವುಕತೆಯನ್ನು ಅವಳು ಸಹಿಸಲಾರದೆ ಹೋದಳು. ಆದರೆ ಹೆಚ್ಚು ಒತ್ತಾಯ ಪಡಿಸುವಷ್ಟು ಧೈರ್ಯ ಅವಳಿಗಿಲ್ಲ. ಒಂದೆರಡು ನಿಮಿಷಗಳ ತರುವಾಯ ರೇ ಸಾಹೇಬರೇ ಹೇಳಿದರು—"ಅವಳ ತಂದೆಯಾಗಿ ನಾನು ಮಾಡಬೇಕಾದ ಯೋಚನೆಯನ್ನು ಮಾಡಿದ್ದೇನೆ. ಆದರೆ ಅವಳಿಗೆ ತಾಯಿ ಇಲ್ಲ. ಅವಳ ಪರವಾಗಿಯೂ ನಾನೇ ಯೋಚಿಸಬೇಕಾಗಿದೆ. ಮಿಸೆಸ್ ಘೋಷಾಲ್, ಇದಕ್ಕೆ ಸ್ವಲ್ಪ ಅವಕಾಶಬೇಕು."

ಚಿಕ್ಕಮ್ಮ ಮನಸ್ಸಿನಲ್ಲಿಯೇ ಅಂದುಕೊಂಡಳು—ಇದು ಮತ್ತೊಂದು ಸ್ಟುಪಿಡ್ ಸೆಂಟಿಮೆಂಟಾಲಿಟಿ ಅಂತ. ಸಾಹೇಬರು ಇದನ್ನು ಅರಿತುಕೊಂಡರೋ ಇಲ್ಲವೋ ಗೊತ್ತಿಲ್ಲ. ಆದರೂ ಈಸಲ ಪ್ರಯತ್ನಪೂರ್ವಕವಾಗಿ ನಕ್ಕು ಹೇಳಿದರು—ಒಂದು ತೊಂದರೆ ಏನು ಅಂತೀರೊ ನಮಗೆ ಅವಳ ವಿಚಾರವೇ ಅರ್ಥವಾಗುವುದಿಲ್ಲ. ಕೇವಲ ಇಂದಿನ ಮಾತಲ್ಲ. ಅವಳು ಬಂಗಾಲದಿಂದ ಬಂದಾಗಿನಿಂದ ನಾನು ಅವಳನ್ನು ಸರಿಯಾಗಿ ತಿಳಿದುಕೊಳ್ಳಲಾಗಿಲ್ಲ. ಒಪ್ಪಿಗೆಯನ್ನೇನೋ ತೋರಿದ್ದಾಳೆ, ಆದರೆ ಅದು ಅವಳ ಮನಃಪೂರ್ವಕವಾಗಿ ಹೃದಯದಿಂದ ಬಂದುದೋ ಅಥವ ಅವಳ ಹೊಸ 'ರಿಲಿಜನ್'ನ ಪ್ರಭಾವವೊ ಸರಿಯಾಗಿ ಗೊತ್ತಾಗಲಿಲ್ಲ.

"ಹೊಸ ರಿಲಿಜನ್! ಹಾಗಂದರೆ?"

" ಹಾಗೇಂದರೇನೋ ನನಗೂ ಗೊತ್ತಿಲ್ಲ. ಬಂಗಾಲದಿಂದ ಅದು ಏನು ತಂದಿದ್ದಾಳೊ ಏನೋ ಅದನ್ನೇ ಹಗಲಿರಳೂ ಜಪಿಸುತ್ತಿರುತ್ತಾಳೆ. ಅವಳ ಊಟ ತಿಂಡಿ ಬದಲಾಯಿಸಿದೆ. ಮಾತುಕತೆಯಲ್ಲಿ ಪರಿವರ್ತನೆ ಕಂಡು ಬರುತ್ತಿದೆ. ನಡೆನುಡಿ ಸಹ ಮೊದಲಿನಂತಿಲ್ಲವೆಂದು ತೋರುತ್ತಿದೆ. ಬೆಳಿಗ್ಗೆ ಬಹಳ ಮುಂಚೆ ಎದ್ದು ಸ್ನಾನಮಾಡಿ ನನ್ನ ಕೋಣೆಗೆ ಬಂದು ಕಾಲು ಮುಟ್ಟಿ ನಮಸ್ಕರಿಸುತ್ತಾಳೆ. 'ಮಗು, ಮುಂಚೆ ನೀನು ಇದನ್ನೆಲ್ಲ ಮಾಡು ತ್ತಿರಲಿಲ್ಲವಲ್ಲ' ಎಂತ ಕೇಳಿದೆ. 'ಆಗ ಗೊತ್ತಿರಲಿಲ್ಲಪ್ಪ, ಈಗ ಬೆಳಿಗ್ಗೆ ಎದ್ದು ನಿನ್ನ ಪಾದಧೂಲಿಯನ್ನು ಹಣೆಗೆ ಹಚ್ಚಿಕೊಂಡರೆ ಸಾಕು. ನನ್ನನ್ನು ಅದು ರಕ್ಷಿಸುತ್ತದೆ ಎಂದು ಹೇಳಿದಳು,—ಎಂದು ಹೇಳುತ್ತಿರುವಾಗ ಅವರ ಕಣ್ಣು ಗಳು ಪುನಃ ಕಂಬನಿ ಸುರಿಸಿದವು.

ಚಿಕ್ಕಮ್ಮನಿಗೆ ಮನಸ್ಸಿನಲ್ಲಿ ತಡೆಯಲಾರದಷ್ಟು ಕೋಪಬಂದಿತು. 'ಅದೇ ಮುಖರ್ಜಿಯವರ ಮನೆಯಿಂದಲೇ ಇದನ್ನೆಲ್ಲ ಕಲಿತುಬಂದಿದ್ದಾಳೆ. ನಿಮಗೆ ಗೊತ್ತಿದೆ, ಅವರು ಎಷ್ಟು ಮುಚ್ಚುಮರೆಮಾಡುವ ವೈದಿಕ ಗೊಡ್ಡು ಗಳು ಅಂತ. ನೋಡಿ ಇದಕ್ಕೆ ' ರಿಲಿಜನ್ ' ಎನ್ನುವುದಿಲ್ಲ ಕುಸಂಸ್ಕಾರ ಎನ್ನುತ್ತಾರೆ. ಇವಳು ಪೂಜೆಗೀಜೆ ಮಾಡುತ್ತಾಳೊ?' ಎಂದು ಕೇಳಿದಳು.

ಸಾಹೇಬರು—" ಮಾಡುತ್ತಾಳೊ ಏನೊ ಗೊತ್ತಿಲ್ಲ ? ಬಹುಶಃ ಮಾಡುತ್ತಿಲ್ಲ. ಇದು ಕುಸಂಸ್ಕಾರ ಅಂತ ನನಗೂ ಅನ್ನಿಸುತ್ತದೆ. ಎಷ್ಟೋ ಸಲ ಬೇಡ, ಇದು ಸರಿಯಲ್ಲ ಎಂದು ಹೇಳಿದೆ. ಆದರೆ ಅವಳು ಈಗ ಹೆಚ್ಚು ಮಾತೇ ಆಡುವುದಿಲ್ಲ. ಕೇಳಿಕೊಂಡು ಸುಮ್ಮನೇ ಇದ್ದುಬಿಡುತ್ತಾಳೆ. ನನ್ನ ಬಾಯಿಯೂ ಕಟ್ಟಿಹೋಗುತ್ತದೆ ಏನೂ ಹೇಳಲೂ ಆಗುವುದಿಲ್ಲ "

ಚಿಕ್ಕಮ್ಮ :—" ಇದು ದೌರ್ಬಲ್ಯ. ಆದರೆ ಇದಕ್ಕೆ ರಿಲಿಜನ್ ಎಂದು ಖಂಡಿತ ಅನ್ನುವಂತಿಲ್ಲವೆಂದು ತಿಳಿಯಿರಿ. ಇದನ್ನೇ ' ಸೂಪರ್ ಸ್ಟಿಷನ್ '—ಅಂಧಶ್ರದ್ಧೆ ಎನ್ನುವುದು. ಇದನ್ನು ಬೆಳೆಯಗೊಡುವುದು ಅನ್ಯಾಯ, ಅಪರಾಧ."

" ಇರಬಹುದು," ಸಾಹೇಬರು ಸಂದಿಗ್ಧರಾಗಿ ಹೇಳಿದರು— " ರಿಲಿಜನ್ ಎನ್ನುವ ಪದವನ್ನು ಬಾಯಿಂದ ಹೇಳಿದೆ ಅಷ್ಟೆ. ಅದರ ವಿಚಾರವಾಗಿ ಇದುವರಿಗೂ ಚರ್ಚಿಸಿಲ್ಲ. ಅದರ ನೇಚರ್ರೇನು, ಅದರ

ಸ್ವರೂಪ ಎಂತಹದು—ಎಂಬುದೂ ನನಗೆ ಗೊತ್ತಿಲ್ಲ. ಆದರೆ ಹೀಗೆ ನನ್ನ ಮಗಳಲ್ಲಿ ಆಮೂಲಾಗ್ರವಾಗಿ ಪರಿವರ್ತನೆಯನ್ನುಂಟುಮಾಡಿದವರಾರೆಂದು ಯೋಚಿಸುತ್ತಿರುತ್ತೇನೆ. ಅವಳಲ್ಲಿ ಈಗ ಆ ನಗುವಿಲ್ಲ. ಆ ಚಂಚಲತೆಯೂ ಇಲ್ಲ. ಮಳೆಗಾಲದಲ್ಲರಳಿದ ಹೂವಿನ ಎಸಳಿನಂತೆ ಸದಾ ಒದ್ದೆಯಾಗಿರುತ್ತದೆ ಅವಳ ರೆಪ್ಪೆಗಳು. ನಾನು ಯಾವಾಗಲಾದರೂ ಕರೆದು ಹೇಳುತ್ತಿರುತ್ತೇನೆ 'ಅಯ್ಯೋ ಹುಚ್ಚಿ ನನ್ನ ಮುಂದೆ ಬಿಚ್ಚಿ ಹೇಳು. ಏನಾದರೂ ಕಾಹಿಲೆಯು ನಿನ್ನನ್ನು ಒಳಒಳಗೇ ಆವರಿಸಿದೆಯೆ' ಎಂದು. ಆಗ ತಲೆಯಲ್ಲಾಡಿಸಿ ಕೂಡಲೇ 'ಇಲ್ಲ ಅಪ್ಪ ನನಗೇನೂ ಕಾಹಿಲೆ ಇಲ್ಲ ನಾನು ಸುಖವಾಗಿದ್ದೇನೆ ಎಂದು ಹೇಳಿ ನಕ್ಕುಬಿಟ್ಟು ಮನೆಗೆಲಸವನ್ನು ಮಾಡಲು ಹೊರಟು ಹೋಗುತ್ತಾಳೆ. ಆದರೆ ನನಗೆ ಹೃದಯ ವಿದೀರ್ಣವಾದಂತಾಗುತ್ತದೆ. ಇರುವವಳು ಒಬ್ಬಳೇ ಮಗಳು. ಅಮ್ಮ ಬೇರೆ ಇಲ್ಲ. ನಾನೇ ಸಾಕಿ ಸಲಹಿ ಇಷ್ಟು ದೊಡ್ಡವಳನ್ನಾಗಿ ಮಾಡಿದ್ದೇನೆ. ಪುನಃ ಮೊದಲಿನ ವಂದನಳನ್ನು ಪಡೆಯಲು ನನ್ನ ಸರ್ವಸ್ವವನ್ನೂ ಕೊಡಲು ಸಿದ್ಧನಾಗಿದ್ದೇನೆ—"

ಚಿಕ್ಕಮ್ಮ ಸ್ವಲ್ಪ ಒತ್ತಿ ಹೇಳಿದಳು —"ಪಡೆಯುವಿರಿ. ನಾನು ಮಾತು ಕೊಡುತ್ತೇನೆ. ಖಂಡಿತ ತಾವು ಅವಳನ್ನು ಪಡೆಯುತ್ತೀರಿ. ಇದು ಕ್ಷಣಿಕ ದೌರ್ಬಲ್ಯ, ಅಥವಾ ಧರ್ಮದ ಹುಚ್ಚಿರಬಹುದು; ಏನೇ ಆಗಲಿ ಇದು ನಿಸ್ಸಾರವಾದುದು. ಕೇವಲ ಆ ಜನಗಳ ಸಹವಾಸದಿಂದ ಉಂಟಾಗಿರುವ ಕ್ಷಣಿಕ ಮನೋವಿಕಾರ. ಮದುವೆಮಾಡಿ, ಎರಡುದಿನದಲ್ಲಿ ಎಲ್ಲ ಸರಿಹೋಗುತ್ತದೆ. ಮಿಸ್ಟರ್‌ರೇ, ಶ್ವಾಶತವಾಗಿ ಉಳಿಯುವ ಶಿಕ್ಷಣವೇ ಬೇರೆ. ಈ ಹುಚ್ಚೆಲ್ಲ ಒಂದೆರಡು ದಿನ ಇದ್ದು ಹೊರಟುಹೋಗುತ್ತದೆ."

ಸಾಹೇಬರಿಗೆ ಕೊಂಚ ಸಮಾಧಾನವಾಯಿತು; ಆದರೆ ಸಂದೇಹ ದೂರವಾಗಲಿಲ್ಲ. "ಅವಳಿಗೆ ಎಲ್ಲಿಂದ ಆ ಪ್ರೇರಣೆ ಬಂದಿದೆಯೋ ದೇವರೇ ಬಲ್ಲ. ಯಾರು ಪ್ರೇರೇಪಿಸಿರುವರೋ ಅದೂ ಗೊತ್ತಿಲ್ಲ. ಆ ಪ್ರೇರಣೆ ಯಾರ ಮನಸ್ಸಿನಲ್ಲಿಯಾದರೂ ಸರಿಯೆ. ಒಮ್ಮೆ ಬಂದರೆ ಸಾಕು ಯಾರೂ ಅದನ್ನು ಹೋಗಲಾಡಿಸಲಾರರಂತೆ. ಮನುಷ್ಯನ ಚಿರಕಾಲದ ಅಭ್ಯಾಸವನ್ನು ಅದು ಕ್ಷಣಮಾತ್ರದಲ್ಲಿ ಬದಲಾಯಿಸುವುದಂತೆ. ಅದರ ಗುಂಗು ರಕ್ತಗತವಾಗಿ, ಜೀವನ ಪರ್ಯಂತ ಅದರ ಮತ್ತು ಉಳಿದಿರುವುದಂತೆ.

ಮಿಸೆಸ್ ಘೋಷಾಲ್, ನನಗೆ ವಂದನಳ ಬಗ್ಗೆ ತುಂಬಾ ಭಯವಾಗುತ್ತಿದೆ" ಎಂದು ಹೇಳಿದರು.

ಇದಕ್ಕೆ ಪ್ರತ್ಯುತ್ತರವಾಗಿ ಚಿಕ್ಕಮ್ಮ ಕೊಂಕುನಗೆಯೊನ್ನು ನಗುತ್ತ "ಶುದ್ಧ ಹುಚ್ಚು ಅಂದರೆ ಮಿಸ್ಟರ್‌ರೇ. ನಾಲ್ಕೈದು ದಿವಸ ಬಿಟ್ಟು ನೋಡಿ ಅದರ ಗಂಧ ಸಹ ಇರುವುದಿಲ್ಲ; ಇಂಥಾದ್ದು ನಾನೆಷ್ಟು ನೋಡಿದ್ದೇನೊ. ಆದರೂ ಇದನ್ನು ಹೆಚ್ಚು ಬೆಳೆಸುವುದೂ ಸರಿಯಲ್ಲ. ಇವತ್ತೇ ಅಶೋಕನಿಗೆ ತಂತಿ ಕಳಿಸುತ್ತೇನೆ. ಅವನು ಬೇಗ ಬರಲಿ" ಎಂದು ಹೇಳಿದಳು.

"ಇವತ್ತೇ ಕಳಿಸುವಿರಾ ?"

"ಹೌದು. ಇವತ್ತೇ ನಿಮ್ಮ ಹೆಸರಿನಲ್ಲಿ."

ಸಾಹೇಬರು ಮೃದು ದನಿಯಲ್ಲಿ ಸಮ್ಮತಿಯನ್ನು ಸೂಚಿಸುತ್ತಾ 'ನಿಮಗೆ ಹೇಗೆ ಸರಿ ಎಂದು ತೋರುತ್ತೋ ಹಾಗೆ ಮಾಡಿ' ಎಂದರು. ಪುನಃ ಮಾತನ್ನು ಮುಂದುವರಿಸಿ, 'ಅಶೋಕ್ ಬಹಳ ಒಳ್ಳೇ ಹುಡುಗ ಶೀಲವಂತ. ಅವನು ಸದಾಚಾರಿಯಲ್ಲದಿದ್ದರೆ ವಂದನ ಎಂದಿಗೂ ಅವನ ಸಂಗಡ ಬರಲು ಒಪ್ಪುತ್ತಿರಲಿಲ್ಲ' ಎಂದರು.

ಚಿಕ್ಕಮ್ಮ ಸ್ವಲ್ಪ ಉಪ್ಪುಕಾರ ಹಚ್ಚಿ ಇದನ್ನೇ ಹೇಳಬೇಕೆಂದಿದ್ದಳು. ಆದರೆ ಅಷ್ಟರಲ್ಲೇ ಒಂದು ವಿಘ್ನ ಬಂದೊದಗಿತು. ವಂದನ ಕೋಣೆಯೊಳಕ್ಕೆ ಪ್ರವೇಶಿಸಿ ತಂದೆಯನ್ನು ಕುರಿತು ಹೇಳಿದಳು—" ಇವತ್ತು ಹಾಜೀ ಸಾಹೇಬರ ಮನೆಯ ಹೆಂಗಸರು ನನ್ನನ್ನು ಪಾರ್ಟಿಗೆ ಬರಬೇಕೆಂದು ಕರೆದಿದ್ದಾರೆ. ಮಧ್ಯಾಹ್ನ ಹೋಗುತ್ತೇನೆ. ಸಾಯಂಕಾಲ ಆಫೀಸಿನಿಂದ ಬರುವಾಗ ನನ್ನನ್ನು ಕರೆದುಕೊಂಡು ಬರಬೇಕು."

"ಅವರ ಮನೆಯಲ್ಲಿ ನೀನೇನೂ ತಿನ್ನುವುದಿಲ್ಲ ಅಲ್ಲವೆ ವಂದನ ?" ಚಿಕ್ಕಮ್ಮ ಪ್ರಶ್ನಿಸಿದಳು.

"ಇಲ್ಲ"

"ಏಕೆ ?"

"ನನಗೆ ಮನಸ್ಸಿಲ್ಲ—ಅಪ್ಪ, ಮರೆಯುವುದಿಲ್ಲ ತಾನೆ ?"

"ಇಲ್ಲಮ್ಮ ನಿನ್ನನ್ನು ಕರೆದುಕೊಂಡು ಬರಲು ಮರೆಯುವೆನೆ ?

ಏಂದಾದರೂ ಹಾಗೆ ಆಗಿದೆಯೆ?"—ಎಂದು ಹೇಳುತ್ತ ಸಾಹೇಬರು ಕೊಂಚ ನಕ್ಕರು. ಅನಂತರ 'ನೋಡು, ಅಶೋಕ ಬರುತ್ತಾನೆ. ಅವನಿಗೆ ತಂತಿ ಕಳುಹಿಬಿಡುತ್ತೇನೆ' ಎಂದು ಹೇಳಿದರು.

"ಒಳ್ಳೆಯದು"

ಚಿಕ್ಕಮ್ಮ—"ನೋಡು ನಾನೇ ಒತ್ತಾಯ ಮಾಡಿ ಅವನನ್ನು ಕರೆಸುತ್ತಿದ್ದೇನೆ. ಕಡೆಗೆ ಅವನಿಗೆ ಅಗೌರವ ಮಾಡಕೂಡದು."

"ಹೆದರಬೇಡ ಚಿಕ್ಕಮ್ಮ. ನಮ್ಮ ಮನೆಯಲ್ಲಿ ಯಾರಿಗೂ ಅಪಮಾನವಾಗುವುದಿಲ್ಲ. ಅಶೋಕ ಬಾಬು ಸ್ವತಃ ಇದನ್ನರಿತಿದ್ದಾರೆ."

ಮಗಳ ಮಾತು ಕೇಳಿ ರಾಯ್ ಸಾಹೇಬರಿಗೆ ಬಹಳ ಆನಂದವಾಯಿತು—"ಮಗು, ಆಫೀಸಿಗೆ ಹೋಗುತ್ತ ತಂತಿ ಕೊಟ್ಟುಬಿಡುತ್ತೇನೆ. ಇವತ್ತು ಶುಕ್ರವಾರ. ಅಡ್ಡಿ ಆತಂಕವೇನೂ ಬಾರದಿದ್ದರೆ ಅವನು ಸೋಮವಾರ ಇಲ್ಲಿರುತ್ತಾನೆ' ಎಂದು ಹೇಳಿದರು.

ಇಷ್ಟರಲ್ಲಿ ಜವಾನ ಪೋಸ್ಟ್ ತೆಗೆದುಕೊಂಡು ಬಂದ. ವೃತ್ತಪತ್ರಿಕೆಗಳ ಕಂತೆ ಲೆಕ್ಕವಿಲ್ಲದಷ್ಟು. ಬೇರೆ ಬೇರೆ ಊರುಗಳಿಂದ ಬಂದಿರುವ ಪತ್ರಗಳಿಗೂ ಏನೂ ಕಡಿಮೆ ಇಲ್ಲ. ಇತ್ತೀಚೆಗೆ ಕೆಲವು ದಿನಗಳಿಂದ ಅಂಚೆಯ ವಿಚಾರದಲ್ಲಿ ವಂದನಳಿಗೆ ಅಷ್ಟು ಕುತೂಹಲವಿಲ್ಲ. ಪ್ರತಿನಿತ್ಯವೂ ಆಶೆಯಿಂದ ಅದಕ್ಕಾಗಿ ಕಾದು ಕುಳಿತಿರುವುದು ವ್ಯರ್ಥವೆಂದು ತಿಳಿದಿದ್ದಳು. ಅದೂಅಲ್ಲದೆ ಅವಳನ್ನು ಸ್ಮರಿಸಿಕೊಂಡು ಪತ್ರ ಬರೆಯುವವರಾದರೂ ಯಾರಿದ್ದಾರೆ. ಅವಳು ಕೋಣೆಯಿಂದ ಹೊರಟು ಹೋಗಬೇಕೆಂದಿದ್ದಳು. ಅಷ್ಟರಲ್ಲಿ ರಾಯ್ ಸಾಹೇಬರು ಅವಳನ್ನು ಕೂಗಿ ಕರೆದು 'ವಂದನ, ನಿನಗೂ ಎರಡು ಕಾಗದಬಂದಿದೆ.—ಮಿಸೆಸ್ ಘೋಷಾಲ್ ನಿಮಗೂ ಒಂದಿದೆ, ತೆಗೆದುಕೊಳ್ಳಿ' ಎಂದರು.

ತನ್ನ ಕಾಗದಕ್ಕಿಂತಲೂ ಇನ್ನೊಬ್ಬರ ಪತ್ರದ ವಿಚಾರದಲ್ಲಿ ಚಿಕ್ಕಮ್ಮನಿಗೆ ತುಂಬಾ ಕುತೂಹಲ. ಬಾಯಿಬಾಯಿಬಿಟ್ಟು ನೋಡುತ್ತ 'ಅಕ್ಷರ ನೋಡುವುದರಲ್ಲಿ ಒಂದೇನೋ ಅಶೋಕನದು ಎಂದು ತೋರುತ್ತೆ. ಇನ್ನೊಂದು ಯಾರದ್ದು?" ಎಂದು ಪ್ರಶ್ನಿಸಿದಳು.

ಈ ಪ್ರಶ್ನೆಗೆ ಏನೊಂದೂ ಉತ್ತರವನ್ನು ಕೊಡದೆ ವಂದನ ತನ್ನ

ಕೋಣೆಯ ಕಡೆ ಹೊರಟು ಹೋದಳು

"ಅಶೋಕನೊಂದಿಗೆ ಪತ್ರವ್ಯವಹಾರವಿಟ್ಟಿರುವಂತೆ ತೋರುತ್ತದೆ. ತಂತಿಕೊಡುತ್ತೇನೆ. ಅವನು ಬಂದುಬಿಡಲಿ. ಹುಡುಗ ಬಹಳ ಯೋಗ್ಯ. ಇಲ್ಲದಿದ್ದರೆ ವಂದನ ಅವನೊಂದಿಗೆ ಪತ್ರವ್ಯವಹಾರವನ್ನಿಟ್ಟುಕೊಳ್ಳುತ್ತಿರಲಿಲ್ಲ."

ನನಗೂ ಬಹಳ ಗೊತ್ತಿದೆ ಎಂದು ತೋರಿಸಿಕೊಳ್ಳುವವಳಂತೆ ಹೆಮ್ಮೆಯಿಂದ ಚಿಕ್ಕಮ್ಮ ನಕ್ಕಳು.

* * * *

ಸಾಯಂಕಾಲ ಆಫೀಸಿನಿಂದ ಹಿಂದಿರುಗುವಾಗ ಹಾಜೀ ಸಾಹೇಬರ ಮನೆಯ ಮೇಲೆ ಹಾದು ಒಬ್ಬರೇ ಮನೆಗೆ ಬಂದರು. ವಂದನ ಅಲ್ಲಿಗೆ ಹೋಗಿರಲಿಲ್ಲ. ಎದುರುಗೊಂಡ ಚಿಕ್ಕಮ್ಮ ಬಾಯಿ ತೆಗೆದಳು. "ನಿಮ್ಮ ವಂದನ ಆಗ ಆ ಎರಡೂ ಕಾಗದ ತೆಗೆದುಕೊಂಡುಹೋಗಿ ಕೋಣೆಯಲ್ಲಿ ಕುಳಿತವಳು ಇನ್ನೂ ಹೊರಕ್ಕೆ ಬಂದಿಲ್ಲ."

"ಊಟ ಸಹ ಮಾಡಿಲ್ಲವೆ?" ಸಾಹೇಬರು ಉದ್ವಿಗ್ನರಾಗಿ ಕೇಳಿದರು.

"ಇಲ್ಲ. ಬೆಳಿಗ್ಗೆ ಒಂದೆರಡು ಹಣ್ಣು ತಿಂದಿದ್ದಳು. ಆಮೇಲೆ ಏನೂ ತಿಂದಿಲ್ಲ."

ರಾಯ್‌ಸಾಹೇಬರು ಹೋಗಿ ವಂದನಳ ಕೋಣೆಯ ಬಾಗಿಲು ತಟ್ಟಿ 'ಮಗೂ' ಎಂದು ಕೂಗಿದರು.

ವಂದನ ಬಾಗಿಲು ತೆರೆದಳು. ಅವಳ ಮುಖ ನೋಡಿ ರಾಯ್ ಸಾಹೇಬರು ಖಿನ್ನರಾದರು. "ಏನಾಯಿತಮ್ಮ" ಎಂದು ಕೇಳಿದರು.

"ಅಪ್ಪ, ಇವತ್ತು ರಾತ್ರಿ ರೈಲಿನಲ್ಲಿ ನಾನು ಬಲರಾಮಪುರಕ್ಕೆ ಹೊರಡುತ್ತೇನೆ."

"ಬಲರಾಮ ಪುರಕ್ಕೇ? ಏಕೆ?"

'ದ್ವಿಜದಾಸಬಾಬು ಕಾಗದ ಬರೆದಿದ್ದಾರೆ ಓದಿ ನೋಡಿ."

"ನೀನೇ ಓದು. ನಾನು ಕೇಳುತ್ತೇನೆ." ಎಂದು ಹೇಳಿ ಒಂದು ಕುರ್ಚಿಯನ್ನೆಳೆದುಕೊಂಡು ಕುಳಿತರು. ವಂದನ ಕುರ್ಚಿ ಒರಗಿ ನಿಂತು

ಕಾಗದವನ್ನು ಓದಿ ಹೇಳಿದಳು. ಅದರಲ್ಲಿ ಈ ರೀತಿ ಬರೆದಿದ್ದಿತು.

ನೀವು ನಮ್ಮಲ್ಲಿಂದ ಹೊರಟುಹೋದ ದಿನದ ನೆನಪಾಗುತ್ತಿದೆ. ಅಂಗಳದಲ್ಲಿ ಕಾರು ನಿಂತಿದ್ದಿತು ; ನೀವು ಆಗಾಗ್ಗೆ ಪತ್ರವನ್ನು ಬರಿಯುತ್ತಿರಬೇಕೆಂದು ನನಗೆ ಹೇಳುತ್ತಿದ್ದಿರಿ. ಆಗ ನಾನು ಹೇಳಿದ್ದೆ :—'ನಾನು ಶುದ್ಧ ಸೋಮಾರಿ, ಕಾಗದಗೀಗದ ಬರೆಯುವ ಅಭ್ಯಾಸವಿಲ್ಲ. ಅಲ್ಲದೆ ಚೆನ್ನಾಗಿ ಬರೆಯುವುದಕ್ಕೂ ಬರುವುದಿಲ್ಲ. ಮತ್ತೆ ಯಾರಿಗಾದರೂ ಈ ಭಾರ ಒಪ್ಪಿಸಿ ಹೋಗಿ' ಎಂದು.

"ಅದನ್ನು ಕೇಳಿ ನೀವು ಖಿನ್ನರಾಗಿ ನನ್ನ ಮುಖದ ಕಡೆ ನೋಡಿದಿರಿ. ನಂತರ ಕಾರು ಹತ್ತಿ ಕುಳಿತುಬಿಟ್ಟಿರಿ. ಮತ್ತೊಮ್ಮೆ ನನಗೆ ಹೇಳಲಿಲ್ಲ. ಎಂತಹ ಅಸಭ್ಯನಿವನು, ಸ್ವಲ್ಪವಾದರೂ ಒಳ್ಳೆಯ ನಡೆನುಡಿ ಬೇಡವೆ? ಇಂತಹ ಹೊತ್ತಿನಲ್ಲೂ ಒಂದೆರಡು ಒಳ್ಳೆಯ ಮಾತನ್ನಾಡದ ಮನುಷ್ಯನಿಗೆ ಹೇಳುವುದಾದರೂ ಏನು ಅಂದುಕೊಂಡಿರಬೇಕು ನೀವು.

"ನಾನು ವಾಸ್ತವವಾಗಿ ಅಂಥ ಒರಟನೇ. ಆದರೂ ಒಂದು ಆಶೆ ಇತ್ತು. ಎಂದಾದರೂ ಕಾಗದವನ್ನು ಬರೆದರೆ ಅದು ಕೇವಲ ಕ್ಷೇಮ ಸಮಾಚಾರದ್ದಲ್ಲದೆ ಅದಕ್ಕಿಂತಲೂ ಮಹತ್ವಪೂರ್ಣವಾದ ವಿಷಯವನ್ನು ಕುರಿತದ್ದಾಗಿರಬೇಕೆಂದು. ಅದರಿಂದ ಅನಾಯಾಸವಾಗಿ ನನ್ನ ತಪ್ಪುಗಳಿಗೆಲ್ಲ ನಿಮ್ಮ ಕ್ಷಮೆ ಬೇಡಬಹುದೆಂದು ನಂಬಿದ್ದೆ.

ಮನುಷ್ಯನು ಯೋಚಿಸದೇ ಇರುವ ದುಃಖವು ಪ್ರಪಂಚದಲ್ಲಿರುವುದೇ ಎಂದು ಯೋಚಿಸುತ್ತಿದ್ದೆ. ಅಂತೆಯೇ ಅಪೇಕ್ಷಿತವಾದ ಸುಖವೂ ಇರುವುದಲ್ಲವೆ?

ಅಣ್ಣನು ಕಂಡಿರುವ ಆ ದೇವರು ಕಣ್ಣು ಮುಚ್ಚಿಕೊಂಡೇ ಕುಳಿತಿರುವನೆ? ಕಣ್ತೆರೆದು ಯಾವಾಗಲೂ ನೋಡುವುದಿಲ್ಲವೆ? ಆಗಬಾರದ್ದಾಗಿ ಹೋಯಿತಲ್ಲ ಅದೇ ಸ್ಥಿರವಾಗಿ ನಿಲ್ಲುವುದೇ. ಅದನ್ನು ಬದಲಾಯಿಸುವ ಶಕ್ತಿ ಈ ಪ್ರಪಂಚದಲ್ಲಿ ಯಾರಿಗೂ ಇಲ್ಲವೆ?

ಈಗ ಇಲ್ಲವೆಂದು ಗೊತ್ತಾಯಿತು. ಅಂತಹ ಶಕ್ತಿ ಯಾರಿಗೂ ಇಲ್ಲ. ದೇವರು ಜಗ್ಗಲಿಲ್ಲ. ಅವನ ಭಕ್ತನೂ ಹಿಂಜರಿಯಲಿಲ್ಲ. ಹೊಗೆ ಇಲ್ಲದ, ಅಲುಗಾಡದ ದೀಪಶಿಖೆಯು ಅಂತೆಯೇ ಇಂದಿಗೂ ಉರಿಯುತ್ತಿದೆ. ಪ್ರಕಾಶ

ಒಂದಿಷ್ಟೂ ಕಡಿಮೆಯಾಗಿಲ್ಲ.

ಈ ಪ್ರಸಂಗವನ್ನೇಕೆ ಎತ್ತಿದೆನೆಂದು ಹೇಳುತ್ತೇನೆ. ಅಣ್ಣ ಮನೆಗೆ ಬಂದು ಮೂರು ದಿನವಾಯಿತು. ಬೆಳಿಗ್ಗೆ ಅವರು ಗಾಡಿಯಿಂದ ಇಳಿದಾಗ ಹಿಂದಿನಿಂದ ವಾಸುವೂ ಇಳಿದ. ಅವನು ಬರಿಗಾಲಿನಲ್ಲಿದ್ದ. ಅವನ ಎದೆಯನ್ನು ಉತ್ತರೀಯವು ಬಿಗಿದಿತ್ತು. ಗಾಡಿ ಹಿಂತಿರುಗಿತು. ಮತ್ತೆ ಯಾರೂ ಇಳಿಯಲಿಲ್ಲ. ಬೆಳಿಗ್ಗೆ ಬಿಸಿಲು ಕಾಯುತ್ತ ಮಹಡಿಯ ಮೇಲೆ ನಿಂತಿದ್ದೆ. ಕಣ್ಣೆದುರಿಗೆ ಕತ್ತಲು ಕವಿದಂತಾಯಿತು. ಎರಡು ಮೂರು ನಿಮಿಷಗಳಲ್ಲಿ ಪುನಃ ಎಲ್ಲವೂ ಕಾಣಿಸಿದವು. ಆಮೇಲೆ ಎಲ್ಲವೂ ಸ್ಪಷ್ಟವಾಯಿತು ಹೀಗೆ ಆಗುವುದೆಂದು ನಾನು ಮೊದಲು ಯೋಚಿಸಿಯೇ ಇರಲಿಲ್ಲ.

ಕೆಳಕ್ಕಿಳಿದು ಬಂದೆ. ಅಣ್ಣ ಹೇಳಿದರು. 'ದ್ವಿಜು, ನಿನ್ನ ಅತ್ತಿಗೆ ತೀರಿಹೋದಳು. ಕೈಯಲ್ಲಿ ಹೆಚ್ಚು ದುಡ್ಡಿಲ್ಲ. ಅವಳ ಶ್ರಾದ್ಧಕ್ಕೆ ಸಾಮಾನ್ಯ ಏರ್ಪಾಟುಮಾಡು' ಎಂದು. ಅನಂತರ 'ಅಮ್ಮ ಎಲ್ಲಿ' ಅಂತ ಕೇಳಿದರು.

'ಡಾಕಾಕ್ಕೆ ಹೋಗಿದ್ದಾರೆ ಮಗಳ ಮನೆಗೆ' ಎಂದು ಉತ್ತರ ಕೊಟ್ಟೆ.

"ಡಾಕಾ?"—ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದರು—"ಬಹುಶಃ ಹಿಂತಿರುಗಿ ಬರಲಾರರು ಆದರೂ ವಾಸು ಮಾತೃದಾಯವೆಂದು ತಿಳಿದು ಒಂದು ಕಾಗದ ಬರಿ."

ವಾಸು ಓಡಿ ಬಂದ. ನನ್ನ ಕುತ್ತಿಗೆಯನ್ನು ಬಿಗಿದಪ್ಪಿ ತನ್ನ ಮುಖವನ್ನು ಮರೆಮಾಡಿಕೊಂಡು ಅಳಲು ಪ್ರಾರಂಭಿಸಿದ. ಆ ಅಳುವಿಗೆ ಹೇಗೆ ಮಾತು ತೋರುತ್ತಿರಲಿಲ್ಲವೋ ಹಾಗೆ ಅದನ್ನು ಬರೆಯಲೂ ಮಾತುಗಳು ಸಿಗುವುದಿಲ್ಲ. ಸಾಯುವುದಕ್ಕೆ ಮುಂಚೆ ಬೇಟೆಗಾರನಿಂದ ಹತವಾದ ಪ್ರಾಣಿ ಯಾವ ಭಾಷೆಯಲ್ಲಿ ತನ್ನ ಅಂತಿಮ ವೇದನೆಯನ್ನು ಹೇಳುವುದೋ ಅದೇ ಭಾಷೆಯಲ್ಲಿ ಎಂದು ತಿಳಿ. ಅವನನ್ನು ಎತ್ತಿಕೊಂಡು ನೆಟ್ಟಗೆ ನನ್ನ ಕೋಣೆಗೆ ಓಡಿ ಬಂದೆ. ನನ್ನ ಎದೆಯ ಮೇಲೆ ಮುಖವನ್ನಿಟ್ಟು ಅವನು ಹಾಗೆಯೇ ಅಳುತ್ತಿದ್ದ. ನಾನು ಮನಸ್ಸಿನಲ್ಲಿಯೇ ಅಂದುಕೊಂಡೆ 'ವಾಸು', ನಷ್ಟವನ್ನು ಕುರಿತು ವಿಚಾರಿಸಿದರೆ ನೀನಲ್ಲ ಹೆಚ್ಚು ಕಳೆದುಕೊಂಡಿರುವವನು. ನಿನಗಿಂತಲೂ ಹೆಚ್ಚು ನಷ್ಟಗೊಂಡ ಮನುಷ್ಯ ಇನ್ನೊಬ್ಬ ಇದ್ದಾನೆ. ನಿನಗೆ ಅಯ್ಯೋ ಅನ್ನುವವರಾದರೂ ಇದ್ದಾರೆ. ಆದರೆ ಅವನಿಗೆ ಯಾರೂ

ಇಲ್ಲ. ಆದರೂ ಒಂದು ಆಶೆ ಇದೆ.—ವಂದನ ಏನಾದರೂ ಇದನ್ನು ತಿಳಿದು ಕೊಂಡರೆ.

ಹೀಗೆ ಎಷ್ಟೋ ಹೊತ್ತಾಯಿತು. ಕೊನೆಗೆ ಅವನ ಕಣ್ಣುಗಳನ್ನು ಒರೆಸುತ್ತ ಹೇಳಿದೆ—ನೀನು ಎದೆಗುಂದಬೇಡ. ಅಪ್ಪ, ಅಮ್ಮ ಯಾರಿಲ್ಲ ದಿದ್ದರೂ ನಾನಿದ್ದೇನೆ. ಅವರ ಋಣ ನಾನು ತೀರಿಸಲಾರೆ. ಆದರೆ ಆ ಸಾಲ ಒಪ್ಪಿಕೊಳ್ಳದೇ ಇರಲಾರೆ. ಈ ದಿನ, ಇಷ್ಟು ಘೋರ ದುಃಖದ ದಿನ, ನೋಡು ನಿನ್ನ ಕಕ್ಕ ಶಪಥಮಾಡಿ ಹೇಳುತಿದ್ದಾನೆ.

ಆದರೆ ಇನ್ನು ಈ ವಿಷಯವನ್ನೇ ಕುರಿತು ಹೆಚ್ಚು ಬರೆಯುವುದಿಲ್ಲ. ಮಾತಿನಲ್ಲಿರುವುದಾದರೂ ಏನು ? ಹುಡುಗನಾಗಿದ್ದಾಗ ಅಪ್ಪ ನನ್ನನ್ನು ಗಮಾರ ಅನ್ನುತ್ತಿದ್ದರು. ಅಮ್ಮ ಕಾಡುಕಪಿ ಅನ್ನುತಿದ್ದಳು. ಅಣ್ಣ ಕೂಡ ಎಷ್ಟು ಸಲ ನನ್ನಮೇಲೆ ರೇಗಿದ್ದಾರೊ! ಅನಾದರ ಮತ್ತು ಅವಹೇಳನ ದಿಂದ ಈ ಮನೆ ಎಷ್ಟೋ ಸಲ ನರಕವೆಂದು ತೋರಿದೆ. ಆಗ ಅತ್ತಿಗೆ ನನ್ನ ಹತ್ತಿರ ಬರುತ್ತಿದ್ದಳು. 'ಲಾಲಾಜಿ, ನಿನಗೇನು ಬೇಕು ಹೇಳು' ಅನ್ನು ತ್ತಿದ್ದಳು. ಸಿಟ್ಟುಗೊಂಡು 'ಏನೂ ಬೇಡ ಅತ್ತಿಗೆ, ನಾನು ಈ ಮನೆ ಬಿಟ್ಟು ಹೊರಟು ಹೋಗುತ್ತೇನೆ' ಅನ್ನುತ್ತಿದ್ದೆ.

'ಯಾವಾಗ ?'

'ಇವತ್ತೇ'

ನಕ್ಕು ಹೇಳುತ್ತಿದ್ದಳು—ಈ ದಿನ ಅಪ್ಪಣೆ ಕೊಡಲಾಗುವುದಿಲ್ಲ. ನೋಡೋಣ ನನ್ನ ಮಾತು ಮೀರಿ ಹೋಗು.

ಪುನಃ ಹೋಗಲಾಗುತ್ತಿರಲಿಲ್ಲ. ಹೊರಟು ಹೋಗಬೇಕಾದ ದಿನ ಈಗ ನಿಜವಾಗಿಯೂ ಬಂದಿದೆ. ಆದರೆ ಅದಕ್ಕಿಂತ ಮುಂಚೆ ಅವಳೇ ಹೊರಟುಹೋಗಿದ್ದಾಳೆ. ಆ ಆಜ್ಞೆ ನನಗೆ ಮಾತ್ರ ಇತ್ತೇ ಅವಳಿಗೆ ಆಜ್ಞೆ ಮಾಡುವವರು ಯಾರೂ ಇರಲಿಲ್ಲವೆ ಎಂದು ಯೋಚಿಸುತ್ತೇನೆ."

'ಹೇಗೆ ಸತ್ತು ಹೋದಳು' ಎಂದು ಅಣ್ಣನನ್ನು ಕೇಳಿದೆ. ಅದಕ್ಕೆ ಅವರು ಹೇಳಿದರು 'ಕಲ್ಕತ್ತೆಯಲ್ಲಿಯೇ ಅವಳಿಗೆ ಮೈಯಲ್ಲಿ ಚೆನ್ನಾಗಿರ ಲಿಲ್ಲ. ಬಹುಶಃ ಮನೋರೋಗವಿರಬೇಕು. ಆಗ ಪಶ್ಚಿಮದ ಕಡೆ ಕರೆದು ಕೊಂಡು ಹೋದೆ. ಆದರೆ ಅನುಕೂಲವಾಗಲಿಲ್ಲ. ಕೊನೆಗೆ ಹರಿದ್ವಾರ

ದಲ್ಲಿ ಜ್ವರ ಬಂದಿತು. ಆಗ ಕಾಶಿಗೆ ಕರೆದುಕೊಂಡು ಬಂದೆ. ಅಲ್ಲಿ ಅವಳು ಸ್ವರ್ಗಸ್ಥಳಾದಳು."

"ಔಷದೋಪಚಾರಗಳು ನಡೆಯಲಿಲ್ಲವೆ?" ನಾನು ಪ್ರಶ್ನಿಸಿದೆ.

"ಯಥಾ ಸಂಭವ ನಡೆಯಿತು" ಎಂದು ಉತ್ತರ ಬಂದಿತು. ಆ 'ಯಥಾ' ಎಷ್ಟು ಎನ್ನುವುದು ಅಣ್ಣನ ಹೊರತು ಮತ್ತೆಯಾರೂ ಅರಿಯರು.

'ಅಂಥಾದ್ದೇನು ಮಾಡಿದ್ದೆ ನಾನು? ಏತಕ್ಕೋಸ್ಕರ ನನಗೆ ಇಂಥ ಕಠಿಣ ಶಿಕ್ಷೆಯನ್ನು ವಿಧಿಸಿದಿರಿ ಎಂದು ಕೇಳಬೇಕೆಂದಿದ್ದೆ; ಆದರೆ ಅಣ್ಣನ ಮುಖದ ಕಡೆ ನೋಡಿದಾಗ ಆ ಪ್ರಶ್ನೆಯನ್ನು ಎತ್ತಲು ಉಸುರು ಅಡಗಿ ಹೋಯಿತು.

"ಯಾರಿಗಾದರೂ ಏನಾದರೂ ಹೇಳಿದಳೆ?" ಎಂದೆ,

ಹಾಂ. ಸಾಯುವುದಕ್ಕೆ ಮುಂಚೆ ಎಂಟು ಹತ್ತು ಗಂಟೆಯವರೆಗೆ ಪ್ರಜ್ಞೆ ಇತ್ತು. ನಾನೇ ಕೇಳಿದೆ—'ಸತಿ, ಅಮ್ಮನಿಗೆ ಏನಾದರೂ ಹೇಳಬೇಕೆ?' ಎಂದು.

ಅವಳು—'ಇಲ್ಲ' ಎಂದಳು.

"ನನಗೆ?"

'ಇಲ್ಲ.'

'ದ್ವಿಜೂಗೆ?'

'ಹೂಂ. ಅವನಿಗೆ ನನ್ನ ಆಶೀರ್ವಾದವನ್ನು ತಿಳಿಸಿ ಎಂದಳು'.

ಈ ಉತ್ತರವನ್ನು ಕೇಳಿದೊಡನೆಯೇ ಅತ್ತಿಗೆಯ ಕೋಣೆಗೆ ಓಡಿ ಹೋದೆ. ಫೋಟೋ ತೆಗೆಸಿಕೊಳ್ಳುವುದೆಂದರೆ ಅವಳಿಗೆ ಬಹಳ ನಾಚಿಕೆ. ಕೇವಲ ಒಂದೇ ಒಂದು ಫೋಟೊ ಬೀರುವಿನಲ್ಲಿತ್ತು ಅದನ್ನು ನಾನೇ ತೆಗದಿದ್ದೆ. ಅದರ ಎದುರಿನಲ್ಲಿ ನಿಂತು ಅರಿಕೆ ಮಾಡಿದೆ—ಅತ್ತಿಗೆ ಸಾಕು. ನಾನೇ ಧನ್ಯ. ನಿನ್ನ ಅಪ್ಪಣೆ ಏನೆಂದು ಅರಿತೆ. ಇಷ್ಟು ಜಾಗ್ರತೆ ನಮ್ಮನ್ನು ಬಿಟ್ಟು ಹೋಗುವೆ ಎಂದು ನಂಬಿರಲಿಲ್ಲ. ನೀನು ಎಲ್ಲಿ ಬೇಕಾದರೂ ಇರು ನಾನು ನಿನ್ನ ಅಪ್ಪಣೆಯನ್ನುಲ್ಲಂಘಿಸುವುದಿಲ್ಲವೆಂಬುದನ್ನು ತಿಳಿ. ನಿನಗಾಗಿ ದೀನನಂತೆ ನಾನು ಕಣ್ಣೀರನ್ನು ಸುರಿಸಲಾರೆ. ನಿನ್ನ ಅಗಲುವಿಕೆಯಿಂದಾಗಿರುವ ದುಃಖವನ್ನು ನುಂಗಿಕೊಳ್ಳುವ ಸಾಮರ್ಥ್ಯ

ವನ್ನು ಕರುಣಿಸು. ಆದರೆ ಸಾಕು. ಇಲ್ಲಿಗೇ ಅವಳ ವಿಚಾರ ಸಾಕು.

ಇನ್ನು ನನ್ನ ವಿಚಾರ. ನೀವು ಹೊರಟು ಹೋಗುವಾಗ ಮದುವೆ ಮಾಡಿಕೊಳ್ಳಲು ಒತ್ತಿ ಒತ್ತಿ ಹೇಳಿದ್ದಿರಿ. ಕಾರಣ, ನಾನು ಇಷ್ಟು ಹೊರೆ ಯನ್ನು ಒಬ್ಬನೇ ಹೊರಲಾರೆ—ನನಗೆ ಸಹಾಯಕರ ಆವಶ್ಯಕತೆ ಅತ್ಯಗತ್ಯ ಎಂತ. ಮೈತ್ರೇಯಿ ನನ್ನ ಸಹಾಯಕಳೂ ಸಹಧರ್ಮಿಣಿಯೂ ಆಗುವು ಳೆಂದು ನಂಬಿದ್ದಿರಿ. ಅದಕ್ಕೆ ನನ್ನದೇನೂ ಅಭ್ಯಂತರವಿರಲಿಲ್ಲ. ಅಲ್ಲ, ಪ್ರಪಂಚದಲ್ಲಿನ ಹದಿನೈದಾಣೆಯಷ್ಟು ಆನಂದವೇ ಮಣ್ಣುಗೂಡಿರುವಾಗ ಒಂದಾಣೆಯ ಭಾಗಕ್ಕೆ ಹೆಣಗಾಡಿ ಪ್ರಯೋಜನವೇನೆಂದು ಯೋಚಿಸಿದ್ದೆ. ಅದೂ ಈಗ ಸಾಧ್ಯವಿಲ್ಲವೆಂದು ತೋರುತ್ತಿದೆ.—ಅತ್ತಿಗೆಯ ದೇಹಾವಸಾ ನವು ಇದಕ್ಕೆ ದೊಡ್ಡ ಅಡಚಣೆಯಾಗಿದೆ. ಅದನ್ನು ಹೋಗಲಾಡಿಸುವುದು ಅಸಾಧ್ಯ. ಅಂಥ ಅಡಚಣೆ ಏನು ಎಂದು ನೀವು ಕೇಳಬಹುದು. ಅವಳು ಕಾರ್ಯವನ್ನೇನೋ ನಿಭಾಯಿಸಬಲ್ಲಳು. ಆದರೆ ಹೊಣೆಹೊರಲಾರಳು. ಇದನ್ನು ನಾನು ಪತ್ತೆ ಹಚ್ಚಿದ್ದೇನೆ. ಆದರೆ ಈಗ ನನಗೆ ಆ ಹೊರೆಯೇ ದೊಡ್ಡ ಭಾರವಾಗಿ ಬಿಟ್ಟಿದೆ. ಆದರೂ ಅವಳು ಕಷ್ಟಕಾಲದಲ್ಲಿ ನಮಗೆ ಮಾಡಿದ ಸಹಾಯ ಅಷ್ಟಿಷ್ಟಲ್ಲವೆಂದು ಹೇಳುತ್ತೇನೆ. ಅದಕ್ಕಾಗಿ ನಾನು ಅವಳಿಗೆ ಚಿರಋಣಿಯಾಗಿರುತ್ತೇನೆ. ಅವಳು ಮಾಡಿದ ಉಪಕಾರವನ್ನು ಎಂದಿಗೂ ಮರೆಯುವುದಿಲ್ಲ.

ನಿನ್ನೆ ರಾತ್ರಿ ಬಹಳ ಹೊತ್ತಿನ ಮೇಲೆ ವಾಸು ಅಳತೊಡಗಿದ. ಅವ ನನ್ನು ಹೇಗೊ ಮಲಗಿಸಿ ಅಣ್ಣನ ಕೋಣೆಗೆ ಹೋದೆ. ಅವರು ಇನ್ನೂ ಪುಸ್ತಕವನ್ನೋದುತ್ತಿದ್ದರು. 'ಯಾವುದು ಅಣ್ಣ ಪುಸ್ತಕ' ಎಂದು ಕೇಳಿದೆ. ಅವರು ಪುಸ್ತಕವನ್ನು ಮಡಿಚಿಟ್ಟು 'ಏನು ಮಾಡಬೇಕು ಎಂದು ಬಂದಿದ್ದೀಯೆ' ಹೇಳು ಎಂದರು. ಅವರ ಮುಖದ ಕಡೆ ನೋಡಿ ಏನು ಹೇಳಬೇಕೆಂದು ಹೋಗಿದ್ದೆನೋ ಅದನ್ನು ಹೇಳಲಾರದೆ ಸುಮ್ಮನಾದೆ. ಮಲಗಿದಾಗ ನಿದ್ರೆಗಣ್ಣಿನಲ್ಲಿ ವಾಸು ಅತ್ತ: ಇದರಲ್ಲಿ ವಿಪ್ರದಾಸನ ತಪ್ಪೇ ನಿದೆ ಎಂದು ಯೋಚಿಸಿದೆ. ಆಗ ಬೇರೆ ಏನೋ ಹೊಳೆಯಿತು. ಕೇಳಿದೆ.

"ಶ್ರಾದ್ಧ ಮುಗಿದನಂತರ ನೀವು ಎಲ್ಲಿರುತ್ತೀರಿ ಅಣ್ಣ? ಕಲ್ಕತ್ತೆ ಯಲ್ಲಿಯೆ?"

" ತೀರ್ಥಯಾತ್ರೆಗೆ ಹೊರಡುತ್ತೇನೆ. "

" ಹಿಂತಿರುಗಿ ಬರುವುದು ? "

ಆಗ ಅಣ್ಣ ಸ್ವಲ್ಪ ನಕ್ಕು ಹೇಳಿದರು. " ಹಿಂದಕ್ಕೆ ಪುನಃ ಬರುವುದಿಲ್ಲ." ಸ್ತಬ್ಧಳಾಗಿ ಅವರ ಮುಖವನ್ನೇ ನೋಡುತ್ತ ಕುಳಿತುಬಿಟ್ಟೆ. ಅವರ ಸಂಕಲ್ಪವನ್ನು ಬದಲಿಸುವುದು ಸಾಧ್ಯವಿಲ್ಲವೆಂದು ಗೊತ್ತಾಯಿತು. ಅಣ್ಣ ಇನ್ನು ಗೃಹಸ್ಥಾಶ್ರಮವನ್ನು ತೊರೆದು ಬಿಟ್ಟರು.

ಆದರೆ ಅನುನಯ, ವಿನಯ, ಗೋಳುಕರೆ ಇವೆಲ್ಲ ಯಾರ ಮುಂದೆ ? ಈ ನಿಷ್ಠುರ ಸನ್ಯಾಸಿಯ ಮುಂದೆಯೆ ? ಇದಕ್ಕಿಂತ ಬೇರೆ ಅಪಮಾನದ ಕಾರ್ಯವುಂಟೆ ?

' ಆದರೆ ವಾಸು ? ' ಎಂದು ಕೇಳಿದೆ.

" ಹಿಮಾಲಯದ ತಪ್ಪಲಲ್ಲಿ ಒಂದು ಆಶ್ರಮವಿದೆ ಎಂದು ತಿಳಿದು ಬಂದಿತು. ಅಲ್ಲಿ ಅವರು ಸಣ್ಣ ಹುಡುಗರ ಭಾರವನ್ನು ವಹಿಸಿಕೊಳ್ಳುತ್ತಾರೆ. ಅವರೇ ಓದಿಸುತ್ತಾರೆ.''

' ಅವರಿಗೆ ಒಪ್ಪಿಸುವಿರಾ ಅವನನ್ನು ? ನಾನು ಅವನನ್ನು ಸಾಕಿ ಸಲಹಿ ದೊಡ್ಡವನನ್ನಾಗಿ ಮಾಡಲಾರೆನೇ ? ''

ಅನಂತರ ಎರಡು ಕಿವಿಗಳನ್ನು ಭದ್ರವಾಗಿ ಮುಚ್ಚಿಕೊಂಡು ಅಲ್ಲಿಂದ ಓಡಿ ಹೋದೆ. ಅವರು ಅದಕ್ಕೆ ಏನು ಉತ್ತರ ಕೊಟ್ಟರೊ ನನಗೆ ಗೊತ್ತಿಲ್ಲ ; ನಾನು ಅದನ್ನು ಕೇಳಲಿಲ್ಲ.

ವಾಸು ಹತ್ತಿರ ಕುಳಿತು ರಾತ್ರಿ ಎಲ್ಲ ಯೋಚಿಸುತ್ತಿದ್ದೆ. ಅವನ ಗತಿ ಏನೆಂದು ನನಗೆ ತಿಳಿಯದಂತಾಗಿದೆ. ಆಗ ನಿಮ್ಮ ನೆನಪಾಯ್ತು. ನಿಜವಾಗಿಯೂ ನಿಮಗೆ ಆತ್ಮೀಯರ ಅವಶ್ಯಕತೆ ಇದ್ದಲ್ಲಿ ದೇವರು ನಿಮ್ಮ ಮನೆಗೇ ಅವರನ್ನು ತಂದುಬಿಡುವನೆಂದು ನೀವು ಹೇಳಿದ ಮಾತು ನೆನಪಿಗೆ ಬಂತು. ಇದರ ಮೇಲೆ ಪೂರ್ಣ ವಿಶ್ವಾಸವನ್ನಿಡುವಂತೆ ನೀವೇ ಹೇಳಿದ್ದಿರಿ. ' ಯಾರು ಆತ್ಮೀಯರೋ ಯಾವಾಗ ಬರುತ್ತಾರೋ ಒಂದೂ ಗೊತ್ತಿಲ್ಲ. ಆದರೂ ಭರವಸೆಯಿಂದ ಎದುರು ನೋಡುತ್ತ ಕುಳಿತಿದ್ದೇನೆ- ಇಂಥ ವಿಪತ್ಕಾಲದಲ್ಲಿ ಖಂಡಿತ ಬಂದೇ ಬರುವರೆಂಬ ನಂಬಿಕೆ ಇದೆ."—

ದ್ವಿಜದಾಸ

ಓದಿ ಹೇಳಿದ ತರುವಾಯ ಕಣ್ಣೆತ್ತಿ ನೋಡುತ್ತಾಳೆ ರಾಯ್ ಸಾಹೇಬರ ಕಣ್ಣಿನಲ್ಲಿ ನೀರು ಉಕ್ಕಿ ಬರುತ್ತಿದೆ. ಅವರು ಕರವಸ್ತ್ರದಿಂದ ಕಣ್ಣನ್ನು ಒತ್ತಿಕೊಳ್ಳುತ್ತ 'ಮಗು ಇವತ್ತೇ ಹೊರಡು. ನಾನು ಅಡ್ಡಿ ಬರುವುದಿಲ್ಲ. ಜವಾನ ಮತ್ತು ನಿನ್ನ ಆ ಹೀಮೂ—ಮುದಕ ಜೊತೆಯಲ್ಲಿ ಹೊರಡಲಿ." ಎಂದು ಹೇಳಿದರು.

ವಂದನ ತಲೆಬಾಗಿ ಕಾಲು ಮುಟ್ಟಿ ತಂದೆಗೆ ನಮಸ್ಕರಿಸಿ 'ಹೊರಡಲು ಸಿದ್ಧತೆ ಮಾಡಿಕೊಳ್ಳುತ್ತೇನೆ. ಇಗೋ ಹೊರಟೇ' ಎಂದು ಹೇಳಿದಳು.

೨೬

ಮ್ಯಾನೇಜರ್ ವಿರಾಜದತ್ತ ಎಂಬುವರು ಸ್ಟೇಷನ್ನಿಗೆ ಕಾರು ತೆಗೆದುಕೊಂಡು ಬಂದಿದ್ದರು. ವಂದನಳನ್ನು ಸನ್ಮಾನಪೂರ್ವಕವಾಗಿ ಸ್ವಾಗತಿಸಿ ಅವಳನ್ನು ಕಾರಿನಲ್ಲಿ ಕೂಡಿಸಿದರು.

ವಂದನ—" ದತ್ತಜೀ, ಅಮ್ಮ ಇನ್ನೂ ಬಂದಿಲ್ಲವೆ ?"

ದತ್ತಜೀ – " ಇಲ್ಲಮ್ಮ."

" ಮೈತ್ರೇಯೀ "

" ಇಲ್ಲ. ಅವರನ್ನು ಕರೆಯಲು ಯಾರೂ ಹೋಗಿಲ್ಲ."

" ವಾಸು ಚೆನ್ನಾಗಿದ್ದಾನೆಯೇ ?''

" ಹೂಂ ''

" ಮುಖರ್ಜಿಯವರು ? ದ್ವಿಜಬಾಬು ?"

" ಮುಖರ್ಜಿಯುವರು ಚೆನ್ನಾಗಿದ್ದಾರೆ ಆದರೆ ದ್ವಿಜದಾಬು ನೋಡುವುದರಲ್ಲಿ ಚೆನ್ನಾಗಿರುವಂತೆ ತೋರುವುದಿಲ್ಲ.''

" ಜ್ವರ ಗಿರ ಏನೂ ಇಲ್ಲವಲ್ಲ ?''

" ಸರಿಯಾಗಿ ಗೊತ್ತಿಲ್ಲ ತಾಯಿ. ಆದರೆ ಕೆಲಸ ಕಾರ್ಯಗಳನ್ನೆಲ್ಲ ತಪ್ಪದೆ ಮಾಡುತ್ತಿದ್ದಾರೆ."

ವಂದನ ಸ್ವಲ್ಪ ಹೊತ್ತು ಸುಮ್ಮನಿದ್ದು 'ದತ್ತಜಿ, ಈ ದುಃಖದ ಮಧ್ಯೆ ಅಮ್ಮ ಇನ್ನು ಬರಲಾರಳೆಂದು ತೋರುತ್ತದೆ. ಆದರೆ ದುಃಖ ಎಷ್ಟೇ ಇರಲಿ ಶ್ರಾದ್ಧಕ್ಕೆ ತಕ್ಕ ಏರ್ಪಾಟುಮಾಡಲೇ ಬೇಕು' ಎಂದು ಹೇಳಿ,

'ಏನಾದರೂ ಏರ್ಪಾಡು ಸಾಗುತ್ತಿದೆಯೋ ?' ಎಂದು ಪ್ರಶ್ನಿಸಿದಳು.

'ಏಕೆ ನಡೆಯುತ್ತಿಲ್ಲ ತಾಯಿ ? ದೊಡ್ಡ ಬಾಬು ಸ್ವರ್ಗಸ್ಥರಾದಾಗ ಏನೇನು ಏರ್ಪಾಟಾಗಿತ್ತೋ ಹಾಗೇ ಈಗಲೂ ನಡೆಯುತ್ತಿದೆ.'

ಇದು ಸರಿಯಾಗಿ ಅರ್ಥವಾಗದ ಕಾರಣ ಅವಳು ಆಶ್ಚರ್ಯದಿಂದ "ಹೇಗೆ ಅಂದಿರಿ? ಮುಖರ್ಜಿ ಸಾಹೇಬರ ತಂದೆಯ ಶ್ರಾದ್ಧದಂತೆಯೇ? ಅಷ್ಟು ಜೋರಾಗಿ ನಡೆದಿದೆಯೆ ಏರ್ಪಾಟು?" ಎಂದು ಕೇಳಿದಳು.

"ಹೌದು ಹೆಚ್ಚೂ ಕಡಿಮೆ ಹಾಗೇ ಎನ್ನಬಹುದು. ಬೇಕಾದರೆ ಹೋಗಿ ನೋಡಿ. ಮುಖರ್ಜಿ ಸಾಹೇಬರು ದ್ವಿಜಬಾಬೂನ ಕರೆದು ಹೇಳಿದರು—ದ್ವಿಜೂ, ಹುಚ್ಚಾಟಮಾಡಬೇಡ ಪ್ರತಿಯೊಂದಕ್ಕೂ ಒಂದು ಗಡಿ ಮಿತಿ ಉಂಟು' ಎಂದು. ಆಗ ಆವೇಶಗೊಂಡ ದ್ವಿಜಬಾಬೂ ಅಂದರು 'ಸರಿ ಗಡಿಮಿತಿ ಇದೆ ಎಂದು ನನಗೆ ಗೊತ್ತು. ಆದರೆ ಅದರ ಜ್ಞಾನ ಎಲ್ಲರಿಗೂ ಒಂದೇ ಸಮ ಇರುವುದಿಲ್ಲವಲ್ಲ' ಎಂದು. ಆಗ ಅವರ ಅಣ್ಣ ನಕ್ಕು 'ನೋಡು ದ್ವಿಜೂ, ನೀನು ಹದ್ದು ಮೀರಿ ಹೋಗುತ್ತಿರುವೆ' ಎಂದರು. ಅದಕ್ಕೆ ದ್ವಿಜಬಾಬು ಇದ್ದವರು 'ಅಣ್ಣ, ಇದೊಂದು ಸಲಕ್ಕೆ ನನ್ನನ್ನು ಕ್ಷಮಿಸಿ' ಎಂದು ವಿನಯಪೂರ್ವಕವಾಗಿ ಕೇಳಿಕೊಂಡರು. 'ಎಲ್ಲ ಗಡಿಮಿತಿಯನ್ನೂ ಮೀರಬಹುದು ಆದರೆ ಅತ್ತಿಗೆಯ ಮರ್ಯಾದೆಗೆ ಭಂಗವನ್ನುಂಟು ಮಾಡಲಾರೆ' ಎಂದು ಸ್ಪಷ್ಟವಾಗಿ ನುಡಿದುಬಿಟ್ಟರು. ಇದಾದಮೇಲೆ ಯಾರೂ ಏನೂ ಮಾತಾಡಲಿಲ್ಲ. ಈಗ ನಿಮಗೇನಾದರೂ ಮಾಡಲು ಸಾಧ್ಯವಾದರೆ ಮಾಡಿ. ಸುಮಾರು ಇಪ್ಪತ್ತು ಇಪ್ಪತ್ತೈದು ಸಾವಿರಕ್ಕಿಂತ ಕಡಿಮೆ ಏನೂ ಖರ್ಚಾಗಲಾರದು.

'ಖರ್ಚೆಲ್ಲಾ ದ್ವಿಜಬಾಬೂದೇನೊ ?'

"ಹೌದು ಅವರೇ ಮಾಡುತ್ತಿದ್ದಾರೆ."

"ಇದೊಂದು ಅವರಿಗೆ ಬಹು ದೊಡ್ಡದು ಎಂದು ತೋರುತ್ತದೆಯೆ ದತ್ತಜೀ?" ವಂದನ ಕೇಳಿದಳು.

ಬಹಳ ದೊಡ್ಡದೇನೋ ಅಲ್ಲ—ಆದರೆ ಈ ನಡುವೆ ಅವರು ಬಹಳ ಹಣ ಕಳೆದಿದ್ದಾರೆ? ಈಗ ಸ್ವಲ್ಪ ಕೈಬಿಗಿಹಿಡಿದು ಖರ್ಚುವೆಚ್ಚ ಮಾಡಬೇಕು. ಇದಲ್ಲದೆ ಇನ್ನೂ ಹೊಸಹೊಸ ತೊಂದರೆ ಬರುವುದಕ್ಕೆ ಮೊದ

ಲಾಗಿದೆ.

" ಇನ್ನೇನು ಹೊಸ ತೊಂದರೆ ?"

ಕ್ಷಣಕಾಲ ಸುಮ್ಮನಿದ್ದು ದತ್ತಜೀಯವರು ಹೇಳಿದರು—' ನೀವು ಕೇಳಿಯೇ ಇಲ್ಲವೆ ? ಅಳಿಯ ಶಶಧರಬಾಬುವಿನ ಮೇಲೆ ಕೇಸು ಹಾಕಿದ್ದಾರೆ. ಕೋರ್ಟಿನ ಹಣೇಬರಹ ನಿಮಗೆ ಗೊತ್ತೇ ಇದೆ. ಯಾರು ಗೆಲ್ಲುತ್ತಾರೆ ಯಾರು ಸೋಲುತ್ತಾರೆ ಎಂದು ಹೇಳುವುದಕ್ಕಾಗುವುದಿಲ್ಲ."

" ಹಾಗಾದರೆ ಮೊದಲೇ ಏಕೆ ತಡೆಯಲಿಲ್ಲ ?"

" ತಡೆಯುವುದೆ ? ಇದು ಮುಖರ್ಜಿಯವರದಲ್ಲ, ತಾಯಿಯದು ಕೆಲಸ. ಇವಳನ್ನು ತಡೆಯಬಲ್ಲವಳು ಒಬ್ಬಳೇ ಒಬ್ಬಳಿದ್ದಳು. ಅವಳು ಈ ಲೋಕವನ್ನೇ ಬಿಟ್ಟು ಹೋಗಿದ್ದಾಳೆ" ಎಂದು ಹೇಳಿ ದತ್ತಜೀಯವರು ನಿಟ್ಟುಸಿರುಬಿಟ್ಟು ಸುಮ್ಮನಾದರು.

ವಂದನ ಮತ್ತೇನೂ ಪ್ರಶ್ನೆ ಮಾಡಲಿಲ್ಲ. ಮನೆ ಹತ್ತಿರ ಬಂದು ನೋಡಿದರೆ ಒಂದು ಕಡೆ ಬೈಲಿನಲ್ಲಿ ಕಟ್ಟಿಗೆಯನ್ನು ಕಡಿದು ರಾಶಿರಾಶಿ ಒಡ್ಡಿದ್ದಾರೆ ದಯಾಮಯಿಯ ಅನುಷ್ಠಾನ ಕಾಲದಲ್ಲಿ ಕಟ್ಟಿದ್ದ ಗುಡಿಸಲುಗಳನ್ನು ಪುನಃ ರಿಪೇರಿ ಮಾಡುತ್ತಿದ್ದಾರೆ. ಎದುರುಗಡೆ ಅಂಗಳದಲ್ಲಿ ದೊಡ್ಡ ಚಪ್ಪರವನ್ನು ಹಾಕುವ ಏರ್ಪಾಟು ನಡೆದಿದೆ. ನೂರಾರು ಜನ ಕೆಲಸಕಾರ್ಯದಲ್ಲಿ ತೊಡಗಿದ್ದಾರೆ. ಇವುಗಳನ್ನೆಲ್ಲಾ ಕಣ್ಣಾರೆ ಕಂಡಮೇಲೆ ವಿರಾಜದತ್ತ ಬಾಬುಗಳು ಏನೊಂದೂ ಉತ್ಪ್ರೇಕ್ಷೆಮಾಡಿಲ್ಲವೆಂದು ವಂದನಳಿಗೆ ಮನದಟ್ಟಾಯಿತು.

ಕಾರಿನಿಂದಿಳಿದ ಕೂಡಲೇ ಅವಳು ನೆಟ್ಟಗೆ ಮೇಲಕ್ಕೆ ದ್ವಿಜದಾಸನ ಕೋಣೆಗೆ ಹೋದಳು. ಒಂದು ದೊಡ್ಡ ದಿಂಬಿಗ ಒರಗಿ ಹಾಸಿಗೆಯ ಮೇಲೆ ಬಿದ್ದಿದ್ದ. ಪರದೆ ಸರಿದ ದನಿಯನ್ನು ಕೇಳಿ ಕಣ್ತೆರೆದು ಎದ್ದು ನೆಟ್ಟಗೆ ಕುಳಿತು ' ಓಹೋ ನನ್ನ ಆತ್ಮೀಯನು ತನ್ನಷ್ಟಕ್ಕೆ ತಾನೇ ನನ್ನ ಮನೆಯ ಬಾಗಿಲಿಗೆ ಬಂದ ' ಅಂತ ಹೇಳಿದ.

ವಂದನ ಉತ್ತರಕೊಟ್ಟಳು :—ಹೌದು ಬಂದಿದ್ದಾನೆ. ಇದೇನು ಮಲಗಿದ್ದೀರಿ ?"

"ಕಣ್ಮುಚ್ಚಿ ನಿನ್ನನ್ನೇ ಧ್ಯಾನಮಾಡುತ್ತಿದ್ದೆ. ಮತ್ತು ಮನಸ್ಸಿನಲ್ಲಿಯೇ

ವಂದನ, ನನ್ನ ದುಃಖಕ್ಕೆ ಪಾರವೇ ಇಲ್ಲ, ಶರೀರದಲ್ಲಿ ಬಲವಿಲ್ಲ, ಮನಸ್ಸಿನಲ್ಲಿ ವಿಶ್ವಾಸವಿಲ್ಲ. ಇನ್ನು ತಳ್ಳುವುದು ಅಸಾಧ್ಯ. ಸಮುದ್ರದಲ್ಲಿ ಸಂಸಾರನೌಕೆಯು ಮುಳಗಿತೆಂದೇ ತಿಳಿ. ಆ ತೀರವನ್ನು ಸೇರುವ ಭರವಸೆ ನನಗೆ ಇಲ್ಲ ಎಂದು ಹೇಳಿಕೊಳ್ಳುತ್ತಿದ್ದೆ."

"ಆ ದಡವನ್ನು ಸೇರಲೇಬೇಕು. ನಿನಗೆ ವಿಶ್ರಾಂತಿಯನ್ನು ಕೊಟ್ಟು ಆ ಭಾರವನ್ನು ನಾನು ವಹಿಸಿಕೊಳ್ಳುತ್ತೇನೆ"

"ಅದನ್ನು ವಹಿಸಿಕೊ, ಆದರೆ ಇನ್ನು ಸಿಟ್ಟುಮಾಡಿಕೊಂಡು ಹೊರಟು ಹೋಗಬೇಡ."

ವಂದನ ಅವನ ಹತ್ತಿರಬಂದು ಮೊಳಕಾಲೂರಿ ಅವನಿಗೆ ನಮಸ್ಕರಿಸಿ ಅವನ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಂಡು ಎದ್ದು ನಿಂತಾಗ ಇಬ್ಬರ ಕಣ್ಣಿನಲ್ಲಿಯೂ ಕಣ್ಣೀರು ಕೋಡಿ ಇಟ್ಟಿತು. ಅವಳು ಈ ರೀತಿ ಅವನಿಗೆ ನಮಸ್ಕರಿಸಿದುದು ಇದೇಮೊದಲು.

"ನಿನ್ನ ಕಣ್ಣಿನಲ್ಲಿಯೂ ನೀರು ಉಕ್ಕಿ ಹರಿಯುವುದೆಂದು ನಾನು ಮೊದಲು ನಂಬಿರಲಿಲ್ಲ" ಎಂದು ವಂದನ ಹೇಳಿದಳು.

"ನನಗೂ ಗೊತ್ತಿರಲಿಲ್ಲ."—ದ್ವಿಜದಾಸ ಪ್ರತ್ಯುತ್ತರವನ್ನು ಕೊಟ್ಟ. ಬಹುಶಃ ಇದುವರೆಗೂ ಅದಕ್ಕೆ ಹೊರಕ್ಕೆ ಹರಿದು ಬರಲು ಏನೋ ಅಡ್ಡಿ ಇದ್ದಿರಬೇಕು. ಮೊಟ್ಟಮೊದಲು ಮೈತ್ರೇಯಿಯನ್ನು ಕರೆಸಿ ಅವಳಿಗೆ ಮನೆಯ ಆಡಳಿತವನ್ನು ವಹಿಸಿಕೊಡುವಂತೆ ನನಗೆ ಹೇಳಿದೆಯಲ್ಲ ಆದಿನ ಇದ್ದ ಆತಂಕವು ದೂರವಾಗಿತ್ತು. ನಾನು ಮರೆಯಲ್ಲಿ ಕಣ್ಣೊರೆಸಿಕೊಂಡು, ನಗುನಗುತ್ತ, ಇಂಥ ಮರ್ಮವೇದನೆಯನ್ನುಂಟುಮಾಡುವ ನಿಷ್ಠುರಳೆದುರಿಗೆ ಕೈಚಾಚಿ ಬೇಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೆ. ಆದರೆ ಆ ನನ್ನ ಪ್ರತಿಜ್ಞೆ ನಡೆಯಲಿಲ್ಲ. ಅತ್ತಿಗೆ ಪರಲೋಕವನ್ನೈದಿದಳು, ಅಣ್ಣ ಸಂಸಾರವನ್ನೇ ತ್ಯಜಿಸಲು ಸಂಕಲ್ಪ ಮಾಡಿದ್ದಾರೆ. ಒಂದು ನಿಮಿಷದ ಭೂಕಂಪವು ಎಲ್ಲವನ್ನೂ ಮಣ್ಣುಪಾಲು ಮಾಡಿಬಿಟ್ಟಿತು.—ಆದರೆ ಎಲ್ಲವನ್ನೂ ಸಹಿಸಬಹುದಾಗಿತ್ತು. ಗೊತ್ತುಗುರಿಯಿಲ್ಲದೆ ಆಶ್ರಮಕ್ಕೆ ವಾಸು ಹೋಗುವನೆಂದು ಕೇಳಿದಾಗ ನನ್ನ ಸಹನೆ ಮಿತಿಮೀರಿತು. ನನ್ನ ಹತ್ತಿರ ಉಳಿದಿರುವುದನ್ನು ಕಲ್ಯಾಣಿಯ ಮಕ್ಕಳಿಗೆ ಹಂಚಿಕೊಟ್ಟು,

ನಾನೂ ಎಲ್ಲಿಯಾದರೂ ಹೋಗಿಬಿಡೋಣವೆಂದು ಒಮ್ಮೆ ಯೋಚಿಸಿದೆ. ಆ ಹೊತ್ತಿಗೆ ಸರಿಯಾಗಿ ನೀನು ಹೇಳಿ ಹೋಗಿದ್ದ ಮಾತುಗಳು ಜ್ಞಾಪಕಕ್ಕೆ ಬಂದವು—ನನ್ನ ಅತ್ಯಂತ ಕಷ್ಟಕಾಲದಲ್ಲಿ ಆತ್ಮೀಯ ವ್ಯಕ್ತಿಯು ತನ್ನಷ್ಟಕ್ಕೆ ತಾನೇ ಮನೆಗೆ ಬರುವನೆಂದೂ, ಆ ಮಾತಿನಲ್ಲಿ ಅಚಲಶ್ರದ್ಧೆಯನ್ನಿಡಬೇಕೆಂದೂ ಹೇಳಿದ್ದೆ. ಯೋಚಿಸಿದೆ ಇದೇ ತಾನೆ ನನಗೆ ಅತ್ಯಂತ ಕಠೋರವಾದ ದುಃಖದ ಸಮಯ. ಈಗಲ್ಲದೆ ಆತ್ಮೀಯರ ಆವಶ್ಯಕತೆ ಮತ್ತಿನ್ನಾವಾಗ! ಆಗ ನಿನಗೆ ಪತ್ರ ಬರೆದೆ. ಬರೆದರೂ ಮನಸ್ಸಿನಲ್ಲಿ ನೀನು ಬರುವುದಿಲ್ಲವೆಂದು ಸಂಶಯವಾಯಿತು. ಆದರೆ ಯತ್ನ ಪೂರ್ವಕವಾಗಿ ಅದನ್ನು ಮರೆಯುತ್ತಾ, ಇಲ್ಲ, ಆತ್ಮೀಯಳಾದುದರಿಂದ ಬಂದೇ ಬರುತ್ತಾಳೆಂದು ಸಮಾಧಾನ ಹೇಳುತಿದ್ದೆ. ಇಲ್ಲದಿದ್ದರೆ ಆಗ ಆಡಿದ ನಿನ್ನ ಮಾತು ಸುಳ್ಳಾಗುತ್ತದೆ; ಅತ್ತಿಗೆಯ ಅಂತಿಮ ಆಶೀರ್ವಾದವೂ ಸುಳ್ಳಾಗುತ್ತದೆ. ಇದಲ್ಲದೆ ನನ್ನ ಮೇಲೆ ಬಿದ್ದಿರುವ ಆ ಭಾರವನ್ನು ನಾನು ಹೊರವುದೆಂತು ?—ಹೀಗೆ ಹೇಳುತ್ತಿರುವಾಗ ಅವನ ಕಣ್ಣುಗಳಿಂದ ಎರಡು ತೊಟ್ಟು ಕಣ್ಣೀರು ಕೆಳಕ್ಕೆ ಉರುಳಿತು.

ವಂದನ—“ಯಾರು ಏನು ಹೇಳಿದರೂ ನೀವು ಕೇಳುತ್ತಿದ್ದಿಲ್ಲವಂತೆ; ನೀವು ಯಾರ ಮಾತನ್ನೂ ಲಕ್ಷಿಸದ ಉದ್ದಂಡರಂತೆ. ಅತ್ತಿಗೆಯೊಬ್ಬಳನ್ನು ಬಿಟ್ಟರೆ ಮೊದಲಿನಿಂದಲೂ ನೀವು ಯಾರ ಮಾತನ್ನೂ ಕೇಳಿಲ್ಲವಂತೆ ನಿಜವೆ ?”

ದ್ವಿಜದಾಸ :—“ಇದಕ್ಕಾಗಿ ನೀನು ಹೆದರುತ್ತಿದ್ದಿಯಾ ? ಏತಕ್ಕಾಗಿ ಯಾರ ಮಾತನ್ನೂ ಕೇಳುತ್ತಿರಲಿಲ್ಲವೆಂದು ಅತ್ತಿಗೆ ಬದುಕಿದ್ದರೆ ಹೇಳುತ್ತಿದ್ದಳು.”—ಇಷ್ಟು ಹೇಳಿ ಅವನು ಕಣ್ಣೊರೆಸಿಕೊಂಡನು.

ವಂದನ ಕೆಲವು ನಿಮಿಷ ಸುಮ್ಮನೆ ಅವನ ಮುಖವನ್ನು ದೃಷ್ಟಿಸಿ ನೋಡುತ್ತಿದ್ದಳು. ಅನಂತರ—‘ನನಗೆ ಉತ್ತರ ದೊರೆಯಿತು. ಇನ್ನು ನನ್ನ ಮನಸ್ಸಿನಲ್ಲಿ ಏನೊಂದೂ ಸಂಶಯವಿಲ್ಲ’ ಎಂದು ಹೇಳುತ್ತಾ ದ್ವಿಜದಾಸನ ಕೈಯನ್ನು ಹಿಡಿದುಕೊಂಡು ಸ್ವಲ್ಪಹೊತ್ತು ನಿಂತಿದ್ದು ಪುನಃ ಹೇಳಿದಳು—ಕೇವಲ ನಿಮ್ಮ ಸುತ್ತಲೂ ಭೂಕಂಪವಾಗಿದೆ ಎಂದು ನಂಬಬೇಡಿ. ನನ್ನ ಹೃದಯದಲ್ಲಿಯೂ ಅಂತಹ ಕಂಪವೆದ್ದಿದೆ. ಅದರ ಹೊಡೆತ

ವನ್ನು ತಡೆಯಲಾರದೆ ಅಳಿದುಹೋಗಬೇಕಾದುದು ಅಳಿದುಹೋದುವು. ಆದರೆ ಯಾವುದು ಶಾಶ್ವತವಾದುದೋ, ಯಾವುದು ಸ್ಥಿರವಾದುದೋ ಮತ್ತು ಅಖಂಡವಾದುದೋ ಅದನ್ನು ಈ ದಿನ ಪಡೆದಿದ್ದೇನೆ. ಈಗ ಭಾವ ನವರನ್ನು ನೋಡಲು ಹೋಗುತ್ತೇನೆ. ಇಲ್ಲಿಂದ ನಾನು ಹೊರಟುಹೋದ ದಿನ ಅವರು ಆಶೀರ್ವದಿಸುತ್ತ ಹೇಳಿದ್ದರು 'ವಂದನ, ಯಾವುದು ನಿಜ ವಾಗಿಯೂ ನಿನಗೆ ಇಷ್ಟವೋ ಅದನ್ನು ದೇವರು ನಿನಗೆ ಕರುಣಿಸಲಿ' ಎಂದು. ಸತ್ಪುರುಷರ ಮಾತಿನಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಅವರ ಆಶೀರ್ವಾದವು ಖಂಡಿತ ಫಲಿಸುವುದೆಂದು ನಂಬಿದ್ದೆ. ಆದರೆ ಆ ಆಶೀರ್ವಾದವು ಇಷ್ಟು ದುಃಖದ ಮಧ್ಯದಲ್ಲಿ ಫಲಿಸೀತೆಂದು ನಂಬಿರಲಿಲ್ಲ. ಹೋಗುತ್ತೇನೆ. ಅವರಿಗೆ ನಮಸ್ಕಾರಮಾಡಿ ಬರುತ್ತೇನೆ.

ಇಷ್ಟರಲ್ಲಿ "ದ್ವಿಜಬಾಬೂ, ವಂದನಮ್ಮನವರು ಬಂದರೇ?" ಎಂದು ಕೇಳುತ್ತ ಅನ್ನದ ಬಂದಳು.

"ಬಂದಳು" ಎಂದು ಹೇಳುತ್ತ ವಂದನ ಅವಳ ಕಡೆ ತಿರುಗಿದಳು. ಆಗ ಅನ್ನದಳ ಶೋಕಾಚ್ಛನ್ನವಾದ ಗಂಭೀರ ಮುಖವನ್ನು ನೋಡಿ ವಂದನ ನಡುಗಿದಳು. ಹತ್ತಿರ ಹೋಗಿ ಅವಳ ಎದೆಯಮೇಲೆ ಹಣೆಯನ್ನಿಟ್ಟು ಅಸ್ಫುಟ ಸ್ವರದಲ್ಲಿ 'ಅನ್ನದ, ಇದೇನು ನಿನ್ನ ಸ್ವರೂಪವೇ? ನಾನು ನಸಿ ನಲ್ಲಿಯೂ ಹೀಗೆಂದು ಯೋಚಿಸಿರಲಿಲ್ಲ. ಇಷ್ಟು ಹೇಳಿದ್ದೇ ತಡ ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಅನ್ನದ ಅಳುತ್ತ ಸ್ವಲ್ಪಹೊತ್ತಿನವರೆಗೆ ವಂದನಳ ಬೆನ್ನುಮೇಲೆ ಕೈಯಾಡಿಸುತ್ತಇದ್ದು ಅನಂತರ ಹೇಳಿದಳು— "ತಾಯಿ ಇನ್ನುಮೇಲೆ ಇದ್ದಕ್ಕಿದ್ದಂತೆಯೇ ಹೊರಟುಹೋಗಬೇಡ. ಕೆಲವು ದಿನವಾದರೂ ಇಲ್ಲಿರು. ಇದಕ್ಕಿಂತ ಹೆಚ್ಚೇನು ಹೇಳಲಿ?" ಅವಳ ದನಿಯಲ್ಲಿ ಸ್ನೇಹತುಂಬಿತ್ತು.

ವಂದನ ಏನೂ ಹೇಳದೆ ಹಾಗೆಯೇ ಎದೆಯಮೇಲಿದ್ದ ಮುಖವನ್ನು ಎತ್ತದೆ ಅಲ್ಲಾಡಿಸಿ ಒಪ್ಪಿಗೆಯನ್ನು ಸೂಚಿಸಿದಳು. ಹೀಗೆ ಬಹಳ ಹೊತ್ತು ಕಳೆಯಿತು. ಅನಂತರ ಮುಖ ಎತ್ತಿ ಸೆರಗಿನಿಂದ ಕಣ್ಣುಗಳನ್ನು ಒರೆಸಿ ಕೊಂಡು 'ಅನ್ನದ, ವಾಸು ಎಲ್ಲಿ?, ಎಂದು ಕೇಳಿದಳು.

"ಸ್ನಾನಮಾಡಲು ಜವಾನರು ಕೊಳಕ್ಕೆ ಕರೆದುಕೊಂಡು ಹೋಗಿ

ದ್ದಾರೆ."

"ಅವನಿಗೆ ಊಟ ತಿಂಡಿ ಯಾರು ಮಾಡಿಸುತ್ತಾರೆ?"

ಅನ್ನದ—"ದ್ವಿಜಬಾಬು ವಾಸು ಇಬ್ಬರೂ ಒಟ್ಟಿಗೇ ಊಟಮಾಡುತ್ತಾರೆ ಒಟ್ಟಿಗೇ ಮಲಗುತ್ತಾರೆ." ಎಂದು ಹೇಳುತ್ತಿರುವಾಗ ಅವಳ ಕಣ್ಣುಗಳಲ್ಲಿ ನೀರು ಉಕ್ಕಿ ಬಂದಿತು. ಅವಳು ಅಳುತ್ತಾ ಪುನಃ ಹೇಳಿದಳು—"ಕೇವಲ ವಾಸುವಿನ ಅಮ್ಮ ಸಾಯಲಿಲ್ಲ. ದ್ವಿಜಬಾಬುವಿನ ಅಮ್ಮನೂ ಸತ್ತು ಹೋದಳು."—ಪುನಃ ಕಣ್ಣೊರಸಿಕೊಂಡು ಮುಂದುವರಿಸಿದಳು—'ಬಹೂಗೆ ಒಳ್ಳೇ ಅಕಾಲಮರಣ ಸಂಭವಿಸಿತು—ಇನ್ನೂ ಚಿಕ್ಕ ವಯಸ್ಸು—ಚೆನ್ನಾಗಿ ಬಾಳಿ ಬದುಕಿ ಮಾಡುವ ವಯಸ್ಸು.—ಇಂಥ ಚಿಕ್ಕವರ ಶ್ರಾದ್ಧವನ್ನು ಮಾಡಲು ಇಷ್ಟು ಸಂಭ್ರಮವೆ ಎಂದು ಎಲ್ಲರೂ ಆಡಿಕೊಳ್ಳುತ್ತಿದ್ದಾರೆ. ಇವರಿಗೆಎಲ್ಲರೂ ಬಂದು ಬುದ್ಧಿ ಹೇಳಿದರು. ಈ ದುಂದುಗಾರಿಕೆಯನ್ನು ಕಂಡು ಎಲ್ಲರಿಗೂ ವ್ಯಥೆಯಾಗಿದೆ. ಎಲ್ಲರೂ ಇದು ಕೇವಲ ದುಂದುಗಾರಿಕೆಯೆಂದೂ, ಮಿತಿಮೀರಿದುದೆಂದೂ ಹೇಳುತ್ತಾರೆ. ಆದರೆ ಅವರು ಇವರ ಹಿಂದಿನ ಜನ್ಮದ ತಾಯಿಯಾಗಿದ್ದರೆಂಬುದು ಯಾರಿಗೂ ಗೊತ್ತಿಲ್ಲ. ಅವರ ಮರ್ಯಾದೆಗೆ ಕುಂದುಂಟಾದರೆ ದ್ವಿಜಬಾಬು ಹೇಗೆ ಸಹಿಸಿಯಾರು?"

ದ್ವಿಜದಾಸನು ಸನ್ನೆಮಾಡಿ ವಂದನಳನ್ನು ತೋರಿಸಿ ಹೇಳಿದ—ಅನ್ನದ, ಇನ್ನು ಹೆದರಿಕೆಗೆ ಕಾರಣವಿಲ್ಲ. ವಂದನ ಬಂದಿದ್ದಾಳೆ. ಎಲ್ಲ ಭಾರವನ್ನೂ ಅವಳ ಮೇಲೆ ಹಾಕಿ ನಾನು ಮರೆಯಾಗುತ್ತೇನೆ."

"ಪರರಮನೆ ಹೆಣ್ಣುಮಗಳು, ಅವಳೇಕೆ ಇಷ್ಟು ದೊಡ್ಡ ಭಾರವನ್ನು ಹೊರುವಳು!'' ಅನ್ನದ ಹೇಳಿದಳು.

"ಪರರ ಮನೆ ಹೆಣ್ಣು ಮಕ್ಕಳೇ ತಾನೆ ಹೊರೆಯನ್ನು ಹೊತ್ತುಕೊಳ್ಳುವವರು. ಇವಳನ್ನು ಕರೆಸಿ ಹೇಳಿದೆ ನೋಡು, ಇಷ್ಟು ದುಃಖವನ್ನು ನಾನು ಸಹಿಸಲಾರೆ. ಇದರ ಮೇಲೆ ವಾಸುವೂ ಹೊರಟು ಹೋದರೆ ಮುಗಿದೇ ಹೋಯಿತು. ಇಗೋ ಇದು ನಿಮ್ಮ ಬಲರಾಮಪುರದ ಮುಖರ್ಜಿಯವರ ಮನೆ—ಇಗೋ ನಿಮ್ಮ ಏಳೇಳು ಪೀಳಿಗೆಯ ಮಾನ ಸನ್ಮಾನದ ಮನೆ.—ಎಲ್ಲವನ್ನು ಶಶಧರನ ಮಕ್ಕಳಿಗೆಕೊಟ್ಟುಬಿಡುತ್ತೇನೆ.

ಮತ್ತು ಈ ಪ್ರಪಂಚದ ಹಾಳು ಹವ್ಯಾಸಕ್ಕೆ ರಾಜಿನಾಮೆ ಕೊಟ್ಟು ಹೊರಟು ಹೋಗುತ್ತೇನೆ. ಕೇವಲ ಅಣ್ಣ ಮಾತ್ರ ಎಲ್ಲವನ್ನೂ ತ್ಯಜಿಸ ಬಲ್ಲರು ಎನ್ನುತ್ತೀರೋ, ಈ ಬಡ ದ್ವಿಜದಾಸನೂ ಬಿಡಬಲ್ಲ. ಸನ್ಯಾಸ ವನ್ನು ತೆಗೆದುಕೊಳ್ಳಲಾರೆ—ಅದು ಏನೆಂದು ಸಹ ನನಗೆ ಗೊತ್ತಿಲ್ಲ. ಆದರೆ ಹಣಕಾಸಿನ ಹೊರೆಯನ್ನು ಅನಾಯಾಸವಾಗಿ ಕಿತ್ತೆಸೆದು ಹೊರಟು ಹೋಗಬಲ್ಲೆ" ಎಂದು ಅನ್ನದ ವಂದನಳ ಎರಡು ಕೈಗಳನ್ನು ಒತ್ತಿ ಹಿಡಿದು "ಇಲ್ಲಿ ನಿಲ್ಲುವುದಿಲ್ಲವೆ? ವಿಪ್ರದಾಸರು ತಮ್ಮ ಸಂಕಲ್ಪವನ್ನು ಬಿಡುವಂತೆ ಮಾಡಲಾರೆಯಾ? ವಾಸುವನ್ನು ಮನೆಯಲ್ಲಿಬಿಟ್ಟುಹೋಗು ವಂತೆ ಮಾಡಲು ಸಾಧ್ಯವಿಲ್ಲವೆ?" ಎಂದು ಕೇಳಿದಳು.

"ಸಾಧ್ಯವಿದೆ ಅನ್ನದ.''

"ಇನ್ನೊಂದು ವಿಚಾರ. ಈ ಮನೆಹಾಳು ಕೇಸು—ಅಳಿಯ ಶಶಿಧರ ಬಾಬುವಿನೊಂದಿಗೆ ನಡೆಯುತ್ತಿದೆಯಲ್ಲ—ಅದನ್ನು ನಿಲ್ಲಿಸಲಾರೆಯ?''

"ನಿಲ್ಲಿಸಬಲ್ಲೆ ಅದನ್ನೂ ಮಾಡುತ್ತೇನೆ"—ಕ್ಷಣಕಾಲ ಸುಮ್ಮನಿದ್ದು ಹೇಳಿದಳು—"ಇವರು ನನ್ನ ಮಾತು ಮೀರಿ ನಡೆಯುವುದಿಲ್ಲ. ಈ ರಾತ್ರಿಗೆ ಒಪ್ಪಿಗೆಯನ್ನು ಪಡೆದೇ ನಾನು ಇಲ್ಲಿ ಚಿಕ್ಕ ಸೊಸೆಯಾಗಿರಲು ಒಪ್ಪಿ ಬಂದಿದ್ದೇನೆ.''

ಈ ಮಾತು ಅನ್ನದಳಿಗೆ ಸರಿಯಾಗಿ ಅರ್ಥವಾಗಲಿಲ್ಲ. ಆದುದರಿಂದ ಬೆಪ್ಪಳಂತೆ ಅವಳ ಮುಖವನ್ನೇ ನೋಡುತ್ತ ನಿಂತುಬಿಟ್ಟಳು. ಆಗ ವಂದನ ಹೇಳಿದಳು—"ಹೋದದ್ದು ಹೋಯಿತು. ಮೇಲಾಗಿ ಜೊತೆಗೆ ಅಮ್ಮನನ್ನೂ ಕಳೆದುಕೊಳ್ಳಬೇಕೆ? ಕೇಸನ್ನು ವಾಪಸು ತೆಗೆದುಕೊಳ್ಳದೆಯೆ ಅಮ್ಮನನ್ನು ಕರೆಸಿಕೊಳ್ಳಲು ಸಾಧ್ಯವೆ?"

ದ್ವಿಜದಾಸನು ದಿಂಬಿನ ಕೆಳಗಿನಿಂದ ಬೀಗದ ಕೈ ಗೊಂಚಲನ್ನು ತೆಗೆದು ಅವಳ ಕಾಲುಕಡೆ ಎಸೆಯುತ್ತ 'ಇದನ್ನು ತೆಗೆದುಕೋ. ನೀನು ಹೇಳಿದು ದಕ್ಕೆ ಪ್ರತಿಯಾಗಿ ಬೇರೆ ಏನನ್ನೂ ಮಾಡುವುದಿಲ್ಲ. ನಿನ್ನ ಈ ಶರತ್ತನ್ನು ಇಂದಿನಿಂದಲೇ ಒಪ್ಪಿಕೊಳ್ಳುತ್ತೇನೆ' ಎಂದು ಹೇಳಿದನು.

ವಂದನ ಬೀಗದ ಕೈ ಗೊಂಚಲನ್ನು ಎತ್ತಿ ಸೆರಗಿನಲ್ಲಿ ಕಟ್ಟಿಕೊಂಡಳು.

ಅನ್ನದಳಿಗೆ ಎಲ್ಲವೂ ಅರ್ಥವಾಯಿತು. ವಂದನಳನ್ನು ಎದೆಗೆ ಬಿಗಿ

ದಪ್ಪಿ ಸುಮ್ಮನೇ ನಿಂತು ಬಿಟ್ಟಳು. ಅವಳ ಕಣ್ಣುಗಳಿಂದ ಪ್ರವಾಹ ಹರಿದು ಸೆರಗನ್ನು ನೆನಸುತ್ತಿದ್ದಿತು.

* * *

ವಂದನ ವಿಪ್ರದಾಸನ ಕೋಣೆಗೆ ಹೋಗಿ ನಮಸ್ಕರಿಸಿ "ಭಾವ, ಇಗೋ ಬಂದಿದ್ದೇನೆ" ಎಂದು ಹೇಳಿದಳು.

ಈ ಹೊಸ ರೀತಿಯ ಸಂಬೋಧನೆಯು ವಿಪ್ರದಾಸನಿಗೆ ವಿಚಿತ್ರವಾಗಿ ತೋರಿತು. ಆದರೆ ಅದರ ವಿಚಾರವಾಗಿ ಏನನ್ನೂ ಹೇಳದೆ "ನೀನು ಬರುವಳಿದ್ದೀಯೆಂದು ಕೇಳಿದ್ದೆ. ನಿಮ್ಮ ತಂದೆಯಿಂದ ತಂತಿ ಬಂದಿತ್ತು. ಮಾರ್ಗದಲ್ಲಿ ಏನೂ ತೊಂದರೆಯಾಗಲಿಲ್ಲತಾನೇ?" ಎಂದು ಪ್ರಶ್ನಿಸಿದನು.

"ಇಲ್ಲ"

"ಜೊತೆಯಲ್ಲಿ ಯಾರು ಬಂದಿದ್ದಾರೆ?"

"ನಮ್ಮ ಮನೆ ಜವಾನ ಮತ್ತು ಸೀವೂ ಮುದುಕ."

"ನಿಮ್ಮ ತಂದೆ ಚೆನ್ನಾಗಿದ್ದಾರೊ?"

"ಹೂಂ"

ವಿಪ್ರದಾಸ ಸ್ವಲ್ಪ ಹೊತ್ತು ಸುಮ್ಮನಿದ್ದು ಕೇಳಿದ—"ದ್ವಿಜು ಏನು ಹುಚ್ಚುಕೆಲಸ ಮಾಡುತ್ತಿದ್ದಾನೆ. ನೋಡಿದೆಯಾ?"

"ತಾವು ಶ್ರಾದ್ಧದ ವಿಚಾರವಾಗಿಯೋ ಹೇಳುತ್ತಿರುವುದು? ಆದರೆ ಅದು ಹೇಗೆ ಹುಚ್ಚು ಹೇಳಿ? ಇಷ್ಟು ದೊಡ್ಡ ಏರ್ಪಾಟು ಮಾಡಲೇ ಬೇಕಾ ಗಿತ್ತು ಇಲ್ಲದಿದ್ದರೆ ಅಕ್ಕನ ಮರ್ಯಾದೆಗೆ ಕುಂದನ್ನು ತರುವುದಿಲ್ಲವೆ?"

"ನಿಜ, ಆದರೆ ಅದನ್ನು ನಿರ್ವಹಿಸುವ ಚೈತನ್ಯ ಇರಬೇಕಲ್ಲ."

'ಅವರಿಂದ ಸಾಧ್ಯವಿಲ್ಲದಿದ್ದರೆ ನಾನು ನಿರ್ವಹಿಸಲು ಇರುವೆನಲ್ಲ?

ವಿಪ್ರದಾಸ ನಕ್ಕು ಹೇಳಿದ--"ನಿಜ ಆ ಸಾಮರ್ಥ್ಯ ನಿನ್ನಲ್ಲಿದೆ ಎಂದು ಒಪ್ಪಿಕೊಳ್ಳುತ್ತೇನೆ. ಆದರೆ ಸ್ವಲ್ಪ ಏರುಪೇರಾದರೂ ಕೆಟ್ಟೀತು ಕೆಲಸ. ನೀನೇನಾದರೂ ಸಿಟ್ಟುಮಾಡಿಕೊಂಡು ಓಡಿ ಹೋಗದಿದ್ದರೆ ಅವನು ಬದುಕಿದ ಅಂತ ತಿಳಿಯುತ್ತೇನೆ."

ವಂದನ:—ಆ ದಿನ ಹೊರಗಿನವಳಾಗಿ ಮನೆಗೆ ಬಂದಿದ್ದೆ. ತಲೆಯ ಮೇಲೆ ಏನೊಂದು ಹೊರೆಯೂ ಇರಲಿಲ್ಲ. ಆದರೆ ಇವತ್ತು ಮನೆಯ ಚಿಕ್ಕ

ಸೊಸೆಯಾಗಿ ಬಂದಿದ್ದೇನೆ. ರೇಗಿಸಿದರೆ ಸಿಟ್ಟು ಮಾಡಬಹುದು. ಆದರೆ ಈಗ ಹೊರಟು ಹೋಗುವುದು ಹೇಗೆಸಾಧ್ಯ ? ಆ ಮಾರ್ಗ ಇನ್ನು ನನಗಿಲ್ಲ "— ಹೀಗೆ ಹೇಳುತ್ತ ಬೀಗದ ಕೈ ಗೊಂಚಲನ್ನು ತೋರಿಸಿ—ಇಲ್ಲಿ ನೋಡಿ ಈ ಮನೆಯಲ್ಲಿರುವ ಮೇಜು, ಅಲ್‌ಮೈರಾ ಮತ್ತು ಪೆಟ್ಟಿಗೆಗಳ ಬೀಗದಕೈಗಳು. ನಾನೇ ಎತ್ತಿಕೊಂಡು ಸೆರಗಿನಲ್ಲಿ ಕಟ್ಟಿಕೊಂಡಿದ್ದೇನೆ." ಅಂದಳು.

ಆನಂದ ಮತ್ತು ಆಶ್ಚರ್ಯದಿಂದ ವಿಪ್ರದಾಸ ಬೆರಗಾಗಿ ನೋಡುತ್ತಿದ್ದ. ವಂದನ ಮಾತು ಮುಂದುವರಿಸಿದಳು:—" ನಿಮ್ಮೆದುರಿಗೆ ನಾಚಿಗೆ ಪಟ್ಟು, ಕದ್ದು ಮುಚ್ಚಿ ಏನನ್ನೂ ಹೇಳಬೇಕಾಗಿಲ್ಲ. ದೇವರೆದುರಿನಲ್ಲಿ ಮರೆಮಾಚಿ ಹೇಳುವಂಥ ವಿಷಯಗಳೂ ಇರುವುವೆ ? ಅಂತೆಯೇ ನಿಮ್ಮ ಮುಂದೆ ಮರೆಮಾಚಲು ಯೋಗ್ಯವಾದ ವಿಷಯಗಳೂ ಇಲ್ಲ. ಆ ದಿನ ನೀವು ಆಶೀರ್ವದಿಸಿ ಹೇಳಿದ್ದಿರಲ್ಲ ಜ್ಞಾಪಕವಿದೆಯೆ ? " ವಾಸ್ತವವಾಗಿ ಯಾವುದು ನಿನ್ನದೋ ಅದನ್ನು ಒಂದು ದಿನ ಇಲ್ಲ ಒಂದು ದಿನ ಖಂಡಿತ ನೀನು ಪಡೆಯುವೆ ಎಂದು. ನಾನು ಹೊರಟುಹೋಗುವಾಗ ಆದಿನ ಹೇಳಿರಲಿಲ್ಲವೆ ! ಆ ದಿನದಿಂದ ನನ್ನ ಮನಸ್ಸಿನ ಚಾಂಚಲ್ಯವು ದೂರ ವಾಯಿತು. ಜಿತೇಂದ್ರಿಯರೂ, ಸತ್ಯವಂತರೂ, ಸಾಧುಸತ್ಪುರುಷರೂ ಆದ ನಿಮ್ಮ ಆಶೀರ್ವಾದವಿರಲು ನನಗೇತರ ಭಯವೆಂದು ಅಂದಿನಿಂದ ನೆಮ್ಮದಿಯಾಗಿದ್ದೇನೆ. ಯಾರು ನನ್ನ ಪತಿಯಾಗಲು ಯೋಗ್ಯರೋ ಅವರು ಸಿಕ್ಕೇಸಿಗುತ್ತಾರೆ, ಇನ್ನು ಭಯವೇಕೆ ಎಂದು ಸಮಾಧಾನ ಮಾಡಿಕೊಂಡೆ''—ಎಂದು ಹೇಳುತ್ತಿರುವಾಗ ಅವಳ ಕಣ್ಣೀರು ತುಂಬಿ ಬಂದಿತು.

ವಿಪ್ರದಾಸ ಎದ್ದು ಬಂದು ಅವಳ ತಲೆಯಮೇಲೆ ಕೈಇಟ್ಟು ಮೌನವಾಗಿಯೇ ಆಶೀರ್ವದಿಸಿದನು. ವಂದನ ಬಹಳ ಹೊತ್ತಿನವರೆಗೆ ಅವನ ಕಾಲುಗಳ ಮೇಲೆ ತಲೆಯನ್ನಿಟ್ಟು ನಮಸ್ಕರಿಸುತ್ತಿದ್ದಳು. ಅವಳು ಎದ್ದು ನಿಂತಮೇಲೆ ವಿಪ್ರದಾಸ ಹೇಳಿದ—" ವಂದನ, ಈ ದಿನ ನೀನು ಪಡೆದಿರುವುದಕ್ಕಿಂತ ದುರ್ಲಭವಾದ ಧನವು ಬೇರೊಂದಿಲ್ಲವೆಂದು ನಂಬು ನನ್ನ ಈ ಮಾತನ್ನಾವಾಗಲೂ ನೆನಪಿನಲ್ಲಿಡು ''

'' ಮರೆಯುವುದಿಲ್ಲ. ಒಂದು ದಿನಕ್ಕೂ ಮರೆಯುವುದಿಲ್ಲ '' ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ ಅವಳು ಪ್ರಾರಂಭಿಸಿದಳು—'' ಒಂದು ದಿನ

ನೀವು ಕಾಹಿಲೆ ಮಲಗಿದ್ದಾಗ ನಿಮ್ಮ ಸೇವೆಯನ್ನು ಮಾಡಿದ್ದೆ. ನೀವು ಅದಕ್ಕೇನಾದರೂ ಪುರಸ್ಕಾರವನ್ನು ಕೊಡಬೇಕೆಂದಿದ್ದಿರಿ. ಆ ದಿನ ನಾನು ಏನನ್ನೂ ತೆಗೆದುಕೊಳ್ಳಲಿಲ್ಲ ಜ್ಞಾಪಕವಿದೆಯೆ ?''

'' ಇದೆ ''

" ಈ ದಿನ ಆ ಪುರಸ್ಕಾರವನ್ನು ಹೊಂದಲು ಬಯಸುತ್ತೇನೆ. ನನಗೆ ವಾಸುವನ್ನು ಒಪ್ಪಿಸಿ.''

ವಿಪ್ರದಾಸ ನಕ್ಕು ಒಪ್ಪಿಗೆಯನ್ನು ಕೊಡುತ್ತಾ ಹೇಳಿದ—

" ಆಗಲಿ ತೆಗೆದುಕೊ ''

" ನನ್ನನ್ನು 'ಅಮ್ಮ' ಎಂದು ಕರೆಯಲು ಅವನಿಗೆ ಕಲಿಸುತ್ತೇನೆ."

'' ಹಾಗೇ ಮಾಡು. ಅವನ ತಂದೆ ತಾಯಿ ಎಲ್ಲವೂ ನೀನೇ ಎಂದು ನಿನಗೆ ಒಪ್ಪಿಸಿ ತಿಳಿದು ಈ ಮುಖರ್ಜಿ ವಂಶದ ಮಾನಮರ್ಯಾದೆಯನ್ನು ನಿನ್ನ ಕೈಯಲ್ಲಿಟ್ಟು ಹೋಗುತ್ತೇನೆ."

ಈ ಭಾರವನ್ನು ವಹಿಸಿಕೊಳ್ಳುವವಳಂತೆ ಸ್ವಲ್ಪ ಹೊತ್ತು ಅವಳು ಸುಮ್ಮನೆ ತಲೆ ತಗ್ಗಿಸಿಕೊಂಡು ನಿಂತಿದ್ದಳು. " ಇನ್ನೊಂದು ಪ್ರಾರ್ಥನೆ'' ಎಂದು ಅವಳೇ ಮಾತು ಪ್ರಾರಂಭಿಸಿದಳು—" ತಮ್ಮನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗದೆ ಒಂದುದಿನ ನಿಮ್ಮೆದುರಿನಲ್ಲಿ ನಾನು ದೊಡ್ಡ ಅಪರಾಧ ಒಂದನ್ನು ಮಾಡಿದ್ದೆ. ಅದನ್ನು ಮರತೇ ಬಿಟ್ಟಿದ್ದೆ. ತಾವು ದಯವಿಟ್ಟು ನನ್ನನ್ನು ಕ್ಷಮಿಸಿ ''

" ವಂದನ, ಎಂದೋ ಕ್ಷಮಿಸಿಬಿಟ್ಟಿದ್ದೇನೆ. ನಿನ್ನ ಅಂತರಾತ್ಮವು ಏಕಾಗ್ರತೆಯಿಂದ ಯಾವುದನ್ನು ಬಯಸಿದೆಯೋ ಅದನ್ನು ಒಂದಲ್ಲ ಒಂದು ದಿನ ನೀನು ಪಡೆಯುವೆ ಎಂದು ನಾನು ನಂಬಿದ್ದೆ. ನನ್ನೆದುರಿನಲ್ಲಿ ನೀನು ನಾಚಬೇಕಾದುದಿಲ್ಲ."

ವಂದನಳಿಗೆ ಪುನಃ ಅಳು ಬರುವಂತಾಯಿತು. ಅವಳು ಅದನ್ನು ತಡೆದು ಹೇಳಿದಳು—ಇನ್ನೊಂದು ಬೇಡಿಕೆ ಇದೆ. ನಮ್ಮ ಸಂಸಾರದಲ್ಲಿ ತಾವು ಒಂದು ದಿನವೂ ಇರಲಾರಿರಾ? ಅಭಿಮಾನ ಮತ್ತು ಸಂತೋಷ ದಿಂದ ಒಂದು ದಿನವಾದರೂ ಮನಃಪೂರ್ತಿಯಾಗಿ ತಮ್ಮ ಸೇವೆಮಾಡಿಲ್ಲ. ಈಗ ಆ ಅಡ್ಡಿ ಅಡಚಣೆಗಳಿಲ್ಲ, ಈಗ ಏನೇನೂ ಸಂಕೋಚವಿಲ್ಲ. ನಮ್ಮೊಂದಿಗೆ

ಕೆಲವು ದಿನ ಇದ್ದುಬಿಡಿ. ನಾಲ್ಕಾರು ದಿನವಾದರೂ ನಿಮ್ಮ ಸೇವೆಯನ್ನು ಮಾಡುತ್ತೇನೆ'' ಎಂದು ಹೇಳಿ ಕಣ್ಣೀರು ಸುರಿಸುತ್ತಾ ಅವನನ್ನೇ ನೋಡುತ್ತಿದ್ದಳು. ಅಂತಃಕರಣವನ್ನು ಬೇಧಿಸಿಕೊಂಡು ಹೊರಬಿದ್ದಂತಿತ್ತು ಅವಳ ವ್ಯಾಕುಲ ಧ್ವನಿ.

ವಿಪ್ರದಾಸನು ಮೆಲುನಗೆ ನಗುತ್ತ ಸುಮ್ಮನಿದ್ದನು. ವಂದನ ಪುನಃ ಹೇಳತೊಡಗಿದಳು—“ನಿಮ್ಮ ಈ ಮೆಲುನಗೆಯು ಮೌನದಿಂದ ನನಗೆ ತುಂಬಾ ಭಯವಾಗುತ್ತದೆ. ನಿಮ್ಮ ಮನಸ್ಸು ಎಷ್ಟು ಕಠೋರವಾದುದು. ಅದನ್ನು ಕರಗಿಸುವುದಿರಲಿ ಅಲುಗಿಸಲೂ ಸಾಧ್ಯವಿಲ್ಲವೆಂದು ತೋರುತ್ತದೆ. ಉತ್ತರಕೊಡುವುದಿಲ್ಲವೆ?''

ಈ ಸಲವೂ ವಿಪ್ರದಾಸ ನಕ್ಕುಬಿಟ್ಟ. ಅವನ ನಗುವಿನಲ್ಲಿ ಸ್ನೇಹ ತುಂಬಿತ್ತು. ಮತ್ತು ಅದು ಅಷ್ಟೇ ನಿರ್ಮಲವೂ ಮತ್ತು ಸುಂದರವೂ ಆಗಿದ್ದಿತು. ಈ ರೀತಿ ಅವನು ನಕ್ಕುದನ್ನು ಅವಳು ಇದೇ ಮೊದಲು ನೋಡಿದ್ದು. ಹೇಳಿದಳು—“ನನಗೆ ಉತ್ತರ ದೊರೆಯಿತು. ಇನ್ನು ನಿಮ್ಮನ್ನು ಪೀಡಿಸುವುದಿಲ್ಲ. ಆದರೆ ಈ ಮನಸ್ಸನ್ನು ಹೇಗೆ ಸಮಾಧಾನಗೊಳಿಸಲಿ? ಆದಕ್ಕೇನಾದರೂ ಒಂದು ಉಪಾಯವನ್ನು ಸೂಚಿಸಿ.

“ವಂದನ, ಮನಸ್ಸು ತಾನೇ ಸಮಾಧಾನ ತಂದುಕೊಳ್ಳುತ್ತದೆ. ಅದೂ ಎಂದು ನೀನು ನಿಮ್ಮ ‘ಭಾವ’ ದುಃಖದಕಡಲಿನಲ್ಲಿ ಧುಮುಕಲು ಮನೆಮಠವನ್ನೆಲ್ಲ ಬಿಟ್ಟುಹೋಗುತ್ತಿಲ್ಲವೆಂದು ತಿಳಿದುಕೊಳ್ಳುವೆಯೋ ಅಂದ. ಅದಕ್ಕೆ ಮುಂಚೆ ಸಾಧ್ಯವಿಲ್ಲ.''

“ಅದನ್ನು ತಿಳಿದುಕೊಳ್ಳುವ ಬಗೆ ಹೇಗೆ?”

“ಕೇವಲ ನನ್ನ ಮೇಲೆ ವಿಶ್ವಾಸವಿಡು. ತಂಗಿ ನಾನು ಸುಳ್ಳು ಹೇಳುವವನಲ್ಲವೆಂದು ನಿನಗೆ ಗೊತ್ತಿದೆ ತಾನೆ?”

ವಂದನ ಅದಕ್ಕೇನೂ ಉತ್ತರ ಕೊಡಲಿಲ್ಲ. ಅನಂತರ ಒಮ್ಮೆ ನಿಟ್ಟುಸಿರು ಬಿಟ್ಟು—“ಹಾಗೇ ಆಗಲಿ. ಭಾವ ನಿಜವನ್ನು ಹೇಳಿದ್ದಾರೆ. ಅವರು ಸತ್ಯವಾದಿಗಳು, ನನಗೆ ಸುಳ್ಳು ಹೇಳಿ ಮೋಸಮಾಡಿಲ್ಲ. ಎಲ್ಲಿ

ಮನುಷ್ಯನ ಪರಮ ಶ್ರೇಯದೊರೆಯುವುದಿದೆಯೋ ಅಲ್ಲಿಗೆ ಅವರು ಹೋಗಿದ್ದಾರೆ ಎಂದು ಸಮಾಧಾನಪಟ್ಟುಕೊಳ್ಳುತ್ತೇನೆ.''

"ನಿಜ. ಭಾವನವರು ಯಾವುದು ಎಲ್ಲಕ್ಕಿಂತಲೂ ಪರಮ ಸುಂದರವಾದುದೋ, ಯಾವುದು ಚಿರಸತ್ಯವಾದುದೋ ಮತ್ತು ಎಲ್ಲಕ್ಕಿಂತಲೂ ಯಾವುದು ಮಧುರವಾದುದೋ ಅದನ್ನು ಹುಡುಕುತ್ತಾ ಹೋಗಿರುವರೆಂದು ಮನಸ್ಸಿಗೆ ಸಮಾಧಾನ ಹೇಳು. ಅಂಥವರ ಮಾರ್ಗದಲ್ಲಿ ಅಡ್ಡಿಯಾಗಬಾರದು. ಅವರನ್ನು ಭ್ರಾಂತರೆಂದು ತಿಳಿಯುವುದು ತಪ್ಪು. ಅವರಿಗಾಗಿ ವ್ಯಥೆಪಡಕೂಡದು ಎಂದು ತಿಳಿ.''

ವಂದನಳ ಕಣ್ಣೀರು ಪುನಃ ಉಕ್ಕಿಬಂದಿತು. ಅದನ್ನು ಜಾಗ್ರತೆ ಒರೆಸಿಕೊಂಡು ಹೇಳಿದಳು—ಹಾಗೆಯೇ ಆಗಲಿ. ಹಾಗೆಯೇ ಆಗಲಿ. ಈ ಜೀವನದಲ್ಲಿ ಪುನಃ ನಿಮ್ಮನ್ನು ನೋಡಲು ಸಾಧ್ಯವಾಗದಿದ್ದರೂ 'ತಾವು ಭ್ರಾಂತರಲ್ಲವೆಂದೂ, ತಮಗಾಗಿ ದುಃಖಪಡುವುದು ಮಹಾಪರಾಧವೆಂದೂ' ಅಂದುಕೊಳ್ಳುತ್ತೇನೆ.

ಪರದೆಯ ಸಂದಿನಿಂದ ಮುಖಹಾಕಿ ದತ್ತಜೀಯವರು 'ತಾಯಿ, ಒಂದು ಅನಿವಾರ್ಯ ಕಾರ್ಯವಿದೆ, ಸ್ವಲ್ಪ ಹೊರಕ್ಕೆ ಬರುತ್ತೀರಾ' ಎಂದು ಕೂಗಿದರು.

"ಇಗೋ ಬಂದೆ, ವಿರಾಜಬಾಬು . . . . ನಾನು ಹೋಗಿ ಬರುತ್ತೇನೆ' ಎಂದು ಹೇಳಿ ವಂದನ ಹೊರಟು ಹೋದಳು.

ಸತಿಯ ಶ್ರಾದ್ಧವು ಬಹಳ ಚೆನ್ನಾಗಿ ನಡೆಯಿತು. ಭಿಕ್ಷುಕರೂ, ದೀನದರಿದ್ರರೂ ಎಲ್ಲರೂ ಸತೀ ಸಾಧ್ವಿಯನ್ನು ಕೊಂಡಾಡುತ್ತಾ ಹೊರಟು ಹೋದರು. ಮುಖರ್ಜಿ ಪರಿವಾರದ ಕೆಲಸ ಕಾರ್ಯಗಳೆಲ್ಲವೂ ಹೀಗೇ ನಡೆದುಬಂದಿದೆ. ಅದರಲ್ಲಿ ಸಣ್ಣದು ದೊಡ್ಡದೆಂಬ ಭೇದವಿಲ್ಲವೆಂದು ಎಲ್ಲರೂ ಹೇಳಿದರು.

ಬೆಳ್ಳಿಗ್ಗೆ ಸ್ನಾನಮಾಡಿ, ಮಡಿಉಟ್ಟು, ವಿಪ್ರದಾಸನಿಗೆ ವಂದಿಸಲು ಅವನ ಕೋಣೆಗೆ ಹೋದಾಗ ವಂದನ ಅಲ್ಲಿನ ದೃಶ್ಯವನ್ನು ಕಂಡು ಆಶ್ಚರ್ಯ

ದಿಂದ ಬೇರೆಗಾಗಿ ನಿಂತುಬಿಟ್ಟಳು. ಅವನ ಪಕ್ಕದಲ್ಲಿ ದಯಾಮಯಿ ಕುಳಿತು ಕೊಂಡಿದ್ದಾಳೆ! ಬೆಳಿಗ್ಗೆ ರೈಲಿನಲ್ಲಿ ಬಂದಿದ್ದರೂ ಇದುವರೆಗೆ ಒಬ್ಬ ರಿಗೂ ಗೊತ್ತಿಲ್ಲ. ಅವಳ ಮುಖವನ್ನು ನೋಡಿದಾಗ ವಂದನಳಿಗೆ ಬಹಳ ದುಃಖವಾಯಿತು. ಚಿನ್ನದಂತೆ ಹೊಳೆಯುತ್ತಿದ್ದ ಮುಖ ಈಗ ಕಪ್ಪಾಗಿ ಹೋಗಿದೆ. ತಲೆಯಮೇಲಿನ ಕೂದಲು ಒಣಗಿ ಹುಲ್ಲಿನಂತಾಗಿದೆ ಹಣೆಯಮೇಲೆ ಸುಕ್ಕುಗಳು ಕಾಣಿಸುತ್ತಿವೆ.—ದುಃಖ ಮತ್ತು ಶೋಕದ ಇಷ್ಟು ದಯನೀಯವಾದ ಮೂರ್ತಿಯನ್ನು ಅವಳು ಕಂಡೇ ಇರಲಿಲ್ಲ. ಐಶ್ವರ್ಯವಂತಳೂ, ಗೃಹಸ್ವಾಮಿನಿಯೂ, ವಿಪ್ರದಾಸಬಾಬುಗಳ ತಾಯಿಯೂ ಆಗಿದ್ದ ಅಂದಿನ ದಯಾಮಯಿ ನೆನಪಿಗೆ ಬಂದಳು. ಇನ್ನೂ ಆದಿನಗಳು ಕಳೆದು ಎಷ್ಟುದಿನ ಆಗಿದೆ? ಆದರೂ ಅವಳಲ್ಲಿದ್ದ ಆ ಮಹಾ ಮಹಿಮೆಯು ಈಗ ಮಣ್ಣು ಪಾಲಾಗಿದೆ.

ವಂದನ ಹತ್ತಿರಹೋಗಿ ಅವಳಿಗೆ ನಮಸ್ಕರಿಸಿದಳು "ಅಮ್ಮ, ಯಾವಾಗ ಬಂದಿರಿ. ನನಗೆ ಗೊತ್ತೇ ಆಗಲಿಲ್ಲ" ಎಂದು ಹೇಳಿದಳು.

ದಯಾಮಯಿ ಅವಳ ಗದ್ದವನ್ನು ಮುಟ್ಟಿ ತನ್ನ ಬೆರಳುಗಳನ್ನು ಮುತ್ತಿಟ್ಟಳು. "ನಾನು ಬಂದ ಸಮಾಚಾರವನ್ನು ತಿಳಿಸುವ ಆವಶ್ಯಕತೆ ಯಾದರೂ, ಏನಿತ್ತು. ಆಗ ವಿಪ್ರದಾಸನ ಅಮ್ಮ ಬರುತ್ತಿದ್ದಳು. ಆದುದ ರಿಂದ ಹುಡುಗರು ಮುದುಕರು ಎಲ್ಲರಿಗೂ ಸಮಾಚಾರ ಗೊತ್ತಾಗುತ್ತಿತು. ವಿಪಿನ್, ಕೆಲಸವೆಲ್ಲ ಮುಗಿಯಿತು; ತಾಯಿಮಗ ಇಬ್ಬರೂ ಇಂದೇ ಯಾತ್ರೆಗೆ ಹೊರಡೋಣ.

ಕೇಳಿ ವಿಪ್ರದಾಸ ನಕ್ಕು ಹೇಳಿದ, 'ಅಮ್ಮ ಇನ್ನು ಹೆದರಬೇಡ. ತಾಯಿಮಗನ ಯಾತ್ರೆಗೆ ಯಾವ ವಿಘ್ನವೂ ಬರುವುದಿಲ್ಲ. ಆದರೆ ಇವತ್ತು ಬೇಡ. ನಾಳೆ ವಂದನಳ ತಂದೆ ಬರುತ್ತಾರೆ. ಅದೂ ಅಲ್ಲದೆ ಸೊಸೆಯ ಕೈಗೆ ಮನೆಯ ಆಡಳಿತ ಸೂತ್ರವನ್ನು ವಹಿಸಿಕೊಡದೆ ಹೊರಡು ತ್ತೀಯಾ?"

ದಯಾಮಯಿ ಸುಮ್ಮನೆ ಸ್ವಲ್ಪ ಹೊತ್ತು ಯೋಚಿಸುತ್ತ ಕುಳಿ ತಿದ್ದು ಮತ್ತೆ ಹೇಳಿದಳು—ಹಾಗೇ ಆಗಲಿ ವಿಪನ್ ಇನ್ನು ಸಹಿಸಲಾರೆ.

ಇಂಥ ಸುಳ್ಳನ್ನು ಎಂದಿಗೂ ಆಡುವುದಿಲ್ಲ. ಆದರೆ ಅದಕ್ಕೆ ಇನ್ನೂ ಎಷ್ಟು ದಿನ ಉಳಿದಿದೆ?

"ಕೇವಲ ಏಳೇದಿನ. ಮುಂದಿನವಾರ ಈ ದಿನಕ್ಕೆ ನಮ್ಮ ಯಾತ್ರೆ ಪ್ರಾರಂಭವಾಗುತ್ತದೆ.''

'' ಅಮ್ಮ, ಒಳಗೆ ಬನ್ನಿ, ನಿಮ್ಮ ಕೋಣೆಗೆ ಹೋಗೋಣ." ಎಂದು ವಂದನ ಕರೆದಳು.

ದಯಾಮಯಿ ತಲೆಯಲ್ಲಾಡಿಸಿ ಆಮಾತಿಗೆ ಒಪ್ಪಿಕೊಳ್ಳದೆ— 'ಅಮ್ಮ, ನಿನ್ನ ಈ ಮಾತನ್ನು ನಾನು ನಡೆಸಲಾರೆ. ಇರಬೇಕಾದಷ್ಟು ದಿನ ಇಲ್ಲೆ ಇರುತ್ತೇನೆ. ಹೋಗುವಕಾಲ ಬಂದಾಗ ಇಬ್ಬರೂ ಇಲ್ಲಿಂದಲೇ ಹೊರಟು ಹೋಗುತ್ತೇವೆ. ಒಳಗೆ ಏನೇನಿದ್ದರೂ ಅವೆಲ್ಲ ನಿನ್ನವು" ಎಂದು ಹೇಳಿದಳು.

ವಂದನ ಹೆಚ್ಚು ಒತ್ತಾಯಪಡಿಸದೆ ಮತ್ತೊಮ್ಮೆ ಅವಳ ಪಾದ ಧೂಳಿಯನ್ನು ಹಣೆಗೆ ಹಚ್ಚಿಕೊಂಡು ಅಲ್ಲಿಂದ ಹೊರಟು ಹೋದಳು.

* * * * *

ವಿಪ್ರದಾಸನ ಪತ್ರವು ಬಂದೊಡನೆಯೇ ರೇ ಸಾಹೇಬರು ಒಂದು ವಾರದಮಟ್ಟಿಗೆ ರಜತೆಗೆದುಕೊಂಡು ಬಲರಾಮಪುರಕ್ಕೆ ಬಂದು ದ್ವಿಜದಾಸ ನೊಡನೆ ಮಗಳ ಮದುವೆಮಾಡಿಕೊಟ್ಟು ಪುನಃ ಬೊಂಬಾಯಿಗೆ ಹಿಂತಿರುಗಿಹೋದರು.

ಈಮದುವೆಯಲ್ಲಿ ವಾದ್ಯಗಳು ಮೊಳಗಲಿಲ್ಲ. ವರನ ಮತ್ತು ವಧು ವಿನ ಪಕ್ಷದ ಜನರಲ್ಲಿ ಯಾವ ವಿಧವಾದ ಕಲಹವೂ ಆಗಲಿಲ್ಲ ಹೆಂಗಸರು ಅಸ್ಫುಟ ಸ್ವರದಲ್ಲಿ ಮಂಗಳಗಾನ ಮಾಡಿದರು. ಮೆಲುದನಿಯಲ್ಲಿ ಶಂಖ ಗಳನ್ನೂದಿದರು. ಮದುವೆಯದಿನದ ಸಂಜೆ ಮೌನವಾಗಿದ್ದಿತು. ಎಲ್ಲೆಲ್ಲೂ ನಿಶ್ಶಬ್ದ.

ಏಕಾಂತದಲ್ಲಿ ದ್ವಿಜದಾಸನ ವಿಷಣ್ಣವದನವನ್ನು ಕಂಡು ವಂದನ ಕೇಳಿದಳು—" ಏನು ಯೋಚಿಸುತ್ತಿರುವಿರಿ?" ಎಂದು.

"ನಿನ್ನ ವಿಚಾರವನ್ನೇ ಯೋಚಿಸುತ್ತಿದ್ದೆ. ನೀನು ನನಗಿಂತ ಬಹಳ ಉತ್ತಮಳೆಂದು ಎನ್ನಿಸಿತು."

"ಹೇಗೆ?"

"ಇಲ್ಲದಿದ್ದರೆ ನೀನು ಹೀಗೆಂದಿಗೂ ಮಾಡಲು ಸಾಧ್ಯವಿರಲಿಲ್ಲ. ಈ ದೊಡ್ಡವಿಪತ್ತಿನಿಂದ ಉಳಿಸುವುದಕ್ಕಾಗಿ ಎಷ್ಟುದೂರ ಕಂಟಕಾಕೀರ್ಣ ಮಾರ್ಗದಲ್ಲಿ ಬರಿಗಾಲಿನಲ್ಲೆ ನಡೆದು ನನ್ನ ಹತ್ತಿರಕ್ಕೆ ಬಂದಿದ್ದೀಯೆ.

"ನೀವು ಬರುತ್ತಿರಲಿಲ್ಲವೆ?"

"ಇಲ್ಲ."

"ಇದು ಸುಳ್ಳು. ಆಗಲಿ, ನಾನೇನು ಯೋಚಿಸುತ್ತಿದ್ದೆ ಗೊತ್ತೆ? ನಿಮ್ಮ ಕೊರಳಿಗೆ ಹಾರವನ್ನು ಹಾಕುತ್ತಿರುವಾಗ, ಆಹಾ! ಎಷ್ಟು ಸುಕೃತ ವನ್ನು ಮಾಡಿದ್ದೆ ನಿಮ್ಮಂಥ ಪತಿ ಸಿಗಬೇಕಾಗಿದ್ದರೆ. ವಾಸು ನನ್ನವ ನಾದ; ಅಮ್ಮನ ಆಶೀರ್ವಾದ, ಭಾವನವರ ಅನುಗ್ರಹ ಈ ವಿಶಾಲ ಪರಿ ವಾರದ ಸ್ವಾಮಿತ್ವ ಎಲ್ಲವೂ ನನಗೆ ದೊರೆತವು. ನಾನು ಯಾವ ಸಮಾಜ ದವಳೋ, ಆ ಸಮಾಜದ ಹುಡುಗಿಯರಿಗೆ ಎಷ್ಟುಮಾತ್ರ ಲಭ್ಯವಿರುತ್ತದೆ ಗೊತ್ತೆ?"

"ಇಲ್ಲವಲ್ಲ!"

ಹೇಳಬೇಕೆಂದಿದ್ದ ವಂದನ ಅಕಸ್ಮಾತ್ತಾಗಿ ನಿಲ್ಲಿಸಿ "ಬೇಡ ಆ ಮಾತು ಈಗ ಬೇಡ. ನನ್ನ ಸೌಭಾಗ್ಯ ಕಣ್ಣು ತೆರದ ದಿವಸ ಇನ್ನೊಬ್ಬರ ದೈನ್ಯವನ್ನು ಕಂಡು ಹಾಸ್ಯಮಾಡುವದಿಲ್ಲ, ಅದು ಅಪರಾಧವಾದೀತು."

"ಇಲ್ಲ ಆಗುವುದಿಲ್ಲ ಹೇಳು."

ವಂದನ ಹೇಳದೆಹೋದಳು. ವಂದನ "ಈ ದಿನ ತುಂಬಾ ಆಯಾಸವಾಗಿದೆ. ಈಗ ಮಲಗಿ ನಾನು ನಿಮ್ಮ ಹಣೆ ನೇವರಿಸುತ್ತೇನೆ" ಎಂದು ಹೇಳಿದಳು.

ಒಂದೆರಡು ನಿಮಿಷಗಳ ನಂತರ ವಂದನ ಮತ್ತೆ ಹೇಳ ತೊಡಗಿದಳು —"ನನಗೆ ಅಕ್ಕನ ಮಾತು ನೆನಪಾಗುತ್ತದೆ. ಆದಿನ ಭಾವನೊಂದಿಗೆ

ಆಕೆ ಕೂಡಲೇ ಹೊರಟುಹೋಗಲು ಸಿದ್ಧಳಾದಳು. ಆಗ 'ಅಕ್ಕ ನೀನೇನೂ ಜಗಳವಾಡಿಲ್ಲ. ನೀನೇಕೆ ಹೊರಡಬೇಕು ? ಎಂದು ಕೇಳಿದೆ. ಅಕ್ಕ ಹೇಳಿದಳು—" ಎಲ್ಲಿ ಪತಿಗೆ ಸ್ಥಾನವಿಲ್ಲವೋ ಅಲ್ಲಿ ಪತ್ನಿಗೂ ಸ್ಥಾನವಿರುವುದಿಲ್ಲ. ಒಂದು ದಿನಕ್ಕೂ ಇಲ್ಲ. ನಿನ್ನ ಗಂಡ ಇದ್ದಿದ್ದರೆ ನಿನಗೆ ಈ ಮಾತು ಅರ್ಥವಾಗುತ್ತಿತ್ತು ಎಂದು. ಆದಿನ ಅವಳ ಮಾತು ನನಗೆ ಅರ್ಥವಾಗಿರಲಿಲ್ಲ. ಆದರೆ ಈ ದಿನ ಅದು ಮನದಟ್ಟಾಗಿದೆ. ನೀವಿಲ್ಲದ ಸ್ಥಳದಲ್ಲಿ ನಾನು ಒಂದು ದಿನಕ್ಕೂ ಇರಲಾರೆ."

ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ ಮುಂದುವರಿಸಿದಳು. ಇನ್ನೂ ಇದೇ ಈಗ, ಕೆಲವು ಗಂಟೆಗಳ ಕೆಳಗೆ ಪುರೋಹಿತರು ಹೇಳಿಕೊಟ್ಟ ನಾಲ್ಕಾರು ಮಂತ್ರಗಳನ್ನು ಮಾತ್ರ ಉಚ್ಚರಿಸಿದ್ದರೂ ಅವುಗಳ ಪ್ರಭಾವದಿಂದ ದೇಹದಲ್ಲಿನ ಪ್ರತಿಯೊಂದು ರಕ್ತಕಣವೂ ಬದಲಾಯಿಸಿರುವಂತೆ ತೋರುತ್ತಿದೆ.

ವಿಪ್ರದಾಸನು ಕಣ್ತೆರೆದು ಅವಳ ಕಡೆ ಕ್ಷಣಮಾತ್ರ ನೋಡಿ ಅವಳ ಕೈಗಳನ್ನು ತನ್ನ ಎದೆಯಕಡೆ ಎಳೆದುಕೊಂಡು ಪುನಃ ಕಣ್ಣುಗಳನ್ನು ಮುಚ್ಚಿಕೊಂಡನು. ಬಾಯಿಬಿಟ್ಟು ಏನೂ ಕೇಳಲಿಲ್ಲ.

* * *

ಭಾನುವಾರ ದಯಾಮಯಿ ಮತ್ತು ವಿಪ್ರದಾಸ ಹೊರಟು ಹೋಗುವ ದಿನ. ಒಂದಲ್ಲ ಒಂದು ದಿನ ದಯಾಮಯಿಯ ತೀರ್ಥಾಟನೆಯು ಮುಗಿದೇ ಮುಗಿಯುವುದು. ಆ ದಿನ ಮನೆ ಮತ್ತು ಪ್ರಪಂಚದ ವ್ಯಾಮೋಹವು ಅವಳನ್ನು ಈ ಮನೆಗೆ ಪುನಃ ಎಳೆದುಕೊಂಡು ಬರಬಹುದು. ಆದರೆ ವಿಪ್ರದಾಸನನ್ನು ಮಾತ್ರ ಯಾವ ವ್ಯಾಮೋಹವೂ ಮನೆಯ ಕಡೆ ಆಕರ್ಷಿಸಲಾರದು. ಹೀಗೆಂದು ಅನೇಕ ಜನ ಹೇಳಿದ್ದಾರೆ. ಕೆಲವರು ಆ ಮಾತಿನಲ್ಲಿ ವಿಶ್ವಾಸವಿಟ್ಟಿದ್ದಾರೆ ಮತ್ತೆ ಕೆಲವರು ಇಟ್ಟಿಲ್ಲ.

ಅಂಗಳದಲ್ಲಿ ಮೋಟಾರು ನಿಂತಿದೆ. ಮನೆ ಮಂದಿಯೆಲ್ಲಾ ಬಂದು ಹೊರಗೆ ನಿಂತಿದ್ದಾರೆ. ಮುಂಭಾಗದಲ್ಲಿ ನಿಂತು ಕಣ್ಣೊರೆಸಿಕೊಳ್ಳುತ್ತಿದ್ದಾರೆ. ವಿಪ್ರದಾಸನ ಮೋಟಾರನ್ನು ಹತುತ್ತ 'ದ್ವಿಜು ಎಲ್ಲಿ? ಕಾಣಿಸಲೇ ಇಲ್ಲವಲ್ಲ' ಎಂದು ಕೇಳಿದನು.

" ಅವರು ಮನೆಯಲ್ಲಿಲ್ಲ. ಏನೋ ಕೆಲಸದ ಮೇಲೆ ಹೊರಗೆ ಹೋಗಿದ್ದಾರೆ' ಎಂದು ಯಾರೋ ಉತ್ತರವಿತ್ತರು.

ಈ ಉತ್ತರವನ್ನು ಕೇಳಿ ವಿಪ್ರದಾಸನು ನಗುತ್ತ ಅಂದು ಕೊಂಡನು--" ಓಡಿ ಹೋಗಿದ್ದಾನೆ! ಅವನು ಬರೇಮಾತಿನವನಲ್ಲ. ಇಲ್ಲದಿದ್ದರೆ ಉತ್ತರಕುಮಾರ ಎಂದನು"

ವಂದನಳ ಕೈಹಿಡಿದು ವಾಸುದೇವನು ನಿಂತಿದ್ದನು. "ಅಪ್ಪ ನೀನು ಬರುತ್ತೀಯ? ಬೇಗ ಬಾ" ಎಂದು ಹೇಳಿದನು.

ವಿಪ್ರದಾಸನು ನಗುತ್ತ ಸುಮ್ಮನೆ ಅವನ ತಲೆಯನ್ನು ಸವರುತ್ತಿದ್ದ ಏನೂ ಉತ್ತರ ಕೊಡಲಿಲ್ಲ.

ವಂದನ ಅತ್ತೆಗೆ ನಮಸ್ಕರಿಸಿದಳು ಆಗ ದಯಾಮಯಿ ಹೇಳಿದಳು— ಬಹೂ ವಾಸು ಚಿಕ್ಕ ಹುಡುಗ ಅಲ್ಲದೇ ನಿನ್ನ ಮಾವನ ಮನೆ ದೇವರಾದ ರಾಧಾಕೃಷ್ಣರು ಮಂದಿರದಲ್ಲಿದ್ದಾರೆ, ನಾನು ಹಿಂತಿರುಗಿ ಬಂದ ಪಕ್ಷಕ್ಕೆ ಈ ಎರಡನ್ನೂ ಪುನಃ ನಾನೇ ವಹಿಸಿಕೊಳುತ್ತೇನೆ' ಎಂದು ಹೇಳುತ್ತ ಸೆರಗಿನಿಂದ ಕಣ್ಣೊರೆಸಿಕೊಂಡಳು.

ವಂದನ ದೂರದಿಂದಲೇ ವಿಪ್ರದಾಸನಿಗೆ ನಮಸ್ಕರಿಸಿದಳು ಅನಂತರ ಹತ್ತಿರ ಬಂದು ಸುಜಲನೇತ್ರದಿಂದ ಗದ್ಗದಳಾಗಿ ಹೇಳಿದಳು— "ಕಲ್ಕತ್ತೆಯಲ್ಲಿ ನೀವು ಧ್ಯಾನಾಸಕ್ತರಾಗಿ ಕುಳಿತಿದ್ದಾಗ ನಾನು ಮರೆಯಲ್ಲಿ ನಿಂತು ನಿಮ್ಮ ಯಾವ ಸ್ವರೂಪವನ್ನು ನೋಡಿದ್ದೆನೋ ಇಂದು ಅದನ್ನು ಕಣ್ಣೆದುರಿನಲ್ಲಿ ಕಾಣುತ್ತಿದ್ದೇನೆ. ಈ ದಿನ ನನಗೆ ದುಃಖವಾಗುತ್ತಿಲ್ಲ. ನೀವು ಎಲ್ಲಿರುವಿರೆಂದು ಗೊತ್ತಾಗದಿದ್ದರೂ ಮನಸ್ಸಿನಲ್ಲಿ ಎಂದು ಕೂಗಿ ಕರೆಯುವೆನೋ ಅಂದು ನೀವು ಬಂದೇ ಬರುವಿರೆಂದು ನಂಬಿದ್ದೇನೆ. ನೀವು ಎಷ್ಟು ಬೇಕಾದರೂ ಪ್ರಯತ್ನಪಟ್ಟು ಒಲ್ಲೆನೆಂದು ನಿಲ್ಲಲು ಯತ್ನಿಸಿದರೂ ನನ್ನ ಈ ಮಾತು ಸುಳ್ಳಾಗಲಾರದು."

ವಿಪ್ರದಾಸನು ಸುಮ್ಮನೆ ಸ್ವಲ್ಪ ನಕ್ಕು ಬಿಟ್ಟನು. ಯಾವರೀತಿ ಮಗನ ಪ್ರಶ್ನೆಗೆ ಉತ್ತರವನ್ನು ಕೊಡದೆ ತಪ್ಪಿಸಿಕೊಂಡನೊ ಅದೇ ರೀತಿ ವಂದನಳ ಪ್ರಶ್ನೆಗೂ ಉತ್ತರವನ್ನು ಕೊಡದೇ ಹಾರಿಸಿಬಿಟ್ಟನು.

ಮೋಟಾರು ಹೊರಟು ಬಿಟ್ಟಿತು.

---